ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 78

ವಿಚಾರ ಸಾಹಿತ್ಯ

# ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ

ಎಂ. ಮರಿಯಪ್ಪಭಟ್ಟ




ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.

ತಾ. 20-1-1988 ನೇ ಬುಧವಾರ

# ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ

ಎಂ. ಮರಿಯಪ್ಪ ಭಟ್ಟ, ಎಂ.ಎ., ಎಲ್.ಟಿ.
ಕನ್ನಡ ಪ್ರಾಧ್ಯಾಪಕ, ಮದ್ರಾಸು ವಿಶ್ವವಿದ್ಯಾನಿಲಯ




ವಿಶ್ವ ಕನ್ನಡ ಸಮ್ಮೇಳನ
14-3ಎ, ನೃಪತುಂಗ ರಸ್ತೆ
ಬೆಂಗಳೂರು-560 002

SANKSHIPTHA KANNADA SAHITHYA CHARITHRE by M. Mariyappa Bhatta. Published by K. Jayacharya, K.A.S., Additional Director, Directorate of Kannada & Culture (Viswa Kannada Sammelana) 14/3A, Nrupathunga Road, Bangalore-560 002. Pages viii+279 5,000 Copies.



ಬೆಲೆ : ೨–೫೦ ರೂಪಾಯಿಗಳು

ಮುದ್ರಕರು
ಶ್ರೀ ವಿನಾಯಕ ಪ್ರಿಂಟಿಂಗ್ ವರ್ಕ್ಸ್
ಮೈಸೂರು–570 004

ಆರ್. ಗುಂಡುರಾವ್
ಮುಖ್ಯ ಮಂತ್ರಿ



ವಿಧಾನ ಸೌಧ
ಬೆಂಗಳೂರು

ದಿನಾಂಕ : ೧೮–೬–೧೯೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದು ನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ, ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

## ಪರಿವಿಡಿ

# ೧. ಕನ್ನಡ ಭಾಷೆಯ ಇತಿಹಾಸ

ಭಾರತದಲ್ಲಿ ಪ್ರಮುಖವಾದ ನಾಲ್ಕು ಬುಡಕಟ್ಟುಗಳ ಭಾಷೆಗಳೂ ಅವುಗಳ ಉಪಭಾಷೆಗಳೂ (dialects) ಪ್ರಚಾರದಲ್ಲಿರುತ್ತವೆ. ಆ ಬುಡಕಟ್ಟುಗಳು ಇವು : (೧) ಚೀನಾ ತಿಬೇತು ವರ್ಗ, (೨) ಆಸ್ಟ್ರಿಕ್ ವರ್ಗ, (೩) ಇಂಡೋಯುರೋಪಿಯನಿಗೆ ಸೇರಿದ ಆರ್ಯ ವರ್ಗ, (೪) ದ್ರಾವಿಡ ವರ್ಗ.[1]

(೧) **ಚೀನಾ ತಿಬೇತುವರ್ಗ :** ಈ ವರ್ಗದ ಭಾಷೆಗಳು ಚೀನಾ, ಬರ್ಮಾ, ಸಯಾಂ ಮತ್ತು ತಿಬೇತು ದೇಶಗಳಲ್ಲಿ ಗ್ರಂಥಸ್ಥಗಳಾಗಿ ಘನತೆವೆತ್ತರೂ ಭಾರತದಲ್ಲಿ ಅವು ಉಪಭಾಷೆಗಳಾಗಿಯೇ ಉಳಿದುವು. ಬಹಳ ಪ್ರಾಚೀನ ಕಾಲದಲ್ಲಿ ಚೀನಾ ತಿಬೇತುಗಳಿಂದ ವಲಸೆ ಬಂದವರು ಹಿಮಾಲಯದ ತಪ್ಪಲುಗಳಲ್ಲಿ ನೆಲಸಿ ಆರ್ಯರಿಂದ ಕಿರಾತರೆನಿಸಿಕೊಂಡರು. ಇವರು ಮಂಗೋಲಿಯಾ ಅಥವಾ ಚೀನಾ ತಿಬೇತು ವರ್ಗದ ಉಪಭಾಷೆಗಳನ್ನಾಡುತ್ತಿದ್ದರು. ರಾಜಕೀಯ, ಸಾಮಾಜಿಕ, ಐತಿಹಾಸಿಕ ಕಾರಣಗಳಿಂದ ಈ ಜನ ಆಯಾ ಪ್ರದೇಶದ ಜನರ ಭಾಷೆಗಳನ್ನಾಡುವುದಕ್ಕೆ ಉಪಕ್ರಮಿಸಿದರು. ತಮ್ಮ ತಾಯ್ನುಡಿಯನ್ನು ಮರೆಯುತ್ತಾ ಬಂದರು. ಪ್ರಸ್ತುತದಲ್ಲಿ ಈ ಬುಡಕಟ್ಟಿನವರನ್ನು ನೇಪಾಳ, ಬಂಗಾಳ, ಅಸ್ಸಾಮ್ ಪ್ರಾಂತಗಳಲ್ಲಿ ಕಾಣಬಹುದು. ಇವರು ಬಹಳ ಹಿಂದುಳಿದ ವರ್ಗದವರಾಗಿದ್ದಾರೆ.

(೨) **ಆಸ್ಟ್ರಿಕ್ ವರ್ಗ :** ಇವರೂ ಪ್ರಾಚೀನ ಭಾರತದ ಒಂದು ಸುವ್ಯವಸ್ಥಿತ ಜನಾಂಗವಾಗಿ ಬಾಳಿದರೆಂದು ಹೇಳುತ್ತಾರೆ. ಇಂದಿನ ಕೋಲರೂ,

---

[1]S. K. Chatterjce, *The Language of India*, Introduction, pp. 7-10.

ಭಿಲ್ಲರೂ, ಮುಂಡಾರಿಗಳೂ, ಸಂತಾಲರೂ ಅವರ ಪೀಳಿಗೆಯವರು. ರಾಜಸ್ಥಾನ, ಗುಜರಾತು, ಬಂಗಾಳ ಮತ್ತು ಒರಿಸ್ಸಾಗಳ ಗುಡ್ಡ ಬೆಟ್ಟ ಪ್ರದೇಶಗಳಲ್ಲಿ ಇವರು ಹೆಚ್ಚಾಗಿರುತ್ತಾರೆ. ಸಂತಾಲರೂ ಮುಂಡಾರಿಗಳೂ ಆಸ್ಟ್ರಿಕ್ ವರ್ಗಕ್ಕೆ ಸೇರಿದ ತಮ್ಮ ತಾಯ್ನುಡಿಯನ್ನೇ ಆಡುತ್ತಾರೆ. ಮಿಕ್ಕವರು ಅವರು ನೆಲಸಿದ ಪ್ರದೇಶದ ಆರ್ಯ ಅಥವಾ ದ್ರಾವಿಡ ನುಡಿಯನ್ನೇ ಬಳಸುತ್ತಾರೆ.

(೩) **ಇಂಡೋ-ಯುರೋಪಿಯನಿಗೆ ಸೇರಿದ ಆರ್ಯವರ್ಗ :** ಈ ವರ್ಗದ ಇತಿಹಾಸ ಬಹಳ ಪ್ರಾಚೀನವಾದುದು. ಸಂಸ್ಕೃತ, ಗ್ರೀಕ್, ಲ್ಯಾಟಿನ್, ಗೋಥಿಕ್, ಕೆಲ್ಟಿಕ್ ಮೊದಲಾದ ಭಾಷೆಗಳ ಮಾತೃಭಾಷೆಯಾಗಿದ್ದಿರಬಹುದಾದ ಮೂಲ ಇಂಡೋಯುರೋಪಿನ ಭಾಷೆಯನ್ನಾಡುತ್ತಿದ್ದ ಮೂಲ ಇಂಡೋಯುರೋಪಿಯನರು ಯುರೋಪಿನ ಯೂರಲ್ ಪರ್ವತ ಶ್ರೇಣಿಯ ದಕ್ಷಿಣದ ಪ್ರದೇಶಗಳಲ್ಲಿ ಸುಮಾರು ೪೦೦೦ ವರ್ಷಗಳ ಹಿಂದೆ ನೆಲಸಿದ್ದು ಅಲ್ಲಿಂದ ಪಶ್ಚಿಮ ದಕ್ಷಿಣ ದಿಸೆಗಳಿಗೆ ವಲಸೆ ಹೊರಟರೆಂಬುದಾಗಿ ಐತಿಹಾಸಿಕ ಸಂಶೋಧನಾತಜ್ಞರು ಅಭಿಪ್ರಾಯಪಡುತ್ತಾರೆ. ಇವರಲ್ಲಿ ಆರ್ಯರ ಪಂಗಡವು ಕಾಕೇಸಿಯಾ ಪರ್ವತಗಳ ಮತ್ತು ಉತ್ತರ ಮೆಸ್ಪೊಟೋಮಿಯಾದ ಮಾರ್ಗವಾಗಿ ಪೂರ್ವ ಏಷ್ಯಾಮೈನರಿಗೂ ಮೆಸ್ಪೊಟೋಮಿಯಾಕ್ಕೂ ಕ್ರಿ. ಪೂ. ೨೫೦೦–೧೫೦೦ ಅವಧಿಯಲ್ಲಿ ಬಂದರು. ಮುಂದೆ ಅವರು ಪೂರ್ವಾಭಿಮುಖವಾಗಿ ಸಾಗಿ ಇರಾನ್ ಮತ್ತು ಇಂಡಿಯಾ ಪ್ರವೇಶ ಮಾಡಿದರು. ಹೀಗು ಬಂದಾಗ ಇಲ್ಲಿ ದ್ರಾವಿಡರೂ, ಆಸ್ಟ್ರಿಕ್ ಮತ್ತು ಚೀನಾ–ತಿಬೇತು ನುಡಿಗಳನ್ನಾಡುವ ಜನರೂ ಇದ್ದರು. ಹೊಸತಾಗಿ ಬಂದ ಆರ್ಯರು ಉತ್ತರಭಾರತದ ಬಯಲು ಪ್ರದೇಶಗಳಲ್ಲಿ ನೆಲಸಿದರು. ಅವರ ಭಾಷಾಪ್ರಭಾವ ಉತ್ತರದಲ್ಲೆಲ್ಲ ಹಬ್ಬಿ ಉತ್ತರದಲ್ಲಿ ಹಿಂದಿದ್ದ ವಿವಿಧ ಭಾಷೆಗಳು ಬಲಗುಂದಿದುವು. ಆದರೂ ವೇದಕಾಲದ ಕೊನೆಗೆ ರೂಪುಗೊಂಡ ಸಂಸ್ಕೃತ, ಮತ್ತಿನ ಪ್ರಾಕೃತ (ಕ್ರಿ. ಪೂ. ೬೦೦ – ಕ್ರಿ.ಶ. ೧೦೦೦) ಮತ್ತು ಹಿಂದಿ, ಬಂಗಾಳಿ, ಗುಜರಾತಿ, ಮರಾಠಿ, ಒರಿಯಾ, ರಾಜಸ್ಥಾನಿ ಮೊದಲಾದ ೨೧ಕ್ಕೂ ಮಿಕ್ಕಿದ ಆಧುನಿಕ ಆರ್ಯ ಭಾಷೆಗಳು ಬೆಳೆಯುವಲ್ಲಿ ಇವುಗಳ ವ್ಯಾಕರಣ ಪ್ರಕ್ರಿಯೆ, ಶಬ್ದ ಭಂಡಾರ ಇತ್ಯಾದಿ ದಿಸೆಯಲ್ಲಿ ದ್ರಾವಿಡ

ಮತ್ತು ಇತರ ಆರ್ಯೇತರ ಭಾಷೆಗಳು ತಮ್ಮ ಪ್ರಭಾವವನ್ನು ಬೀರಿರುತ್ತವೆ ಎಂಬುದಕ್ಕೆ ತಕ್ಕಷ್ಟು ಸಾಕ್ಷ್ಯಗಳುಂಟು.

(೪) ದ್ರಾವಿಡವರ್ಗ: ತಮಿಳು, ಕನ್ನಡ, ತೆಲುಗು, ಮಲೆಯಾಳ ಭಾಷೆಗಳು ಈ ವರ್ಗದ ಗ್ರಾಂಥಿಕವೂ ವ್ಯಾವಹಾರಿಕವೂ ಆದ ಭಾಷೆಗಳಾಗಿವೆ. ಕಳೆದ ಖಾನೇಶುಮಾರಿಯ ಪ್ರಕಾರ ಸುಮಾರು ೩೪ ಮಿಲಿಯ ಜನ ತೆಲುಗರೂ, ೨೩ ಮಿಲಿಯ ಜನ ತಮಿಳರೂ, ೧೪ ಮಿಲಿಯ ಜನ ಕನ್ನಡಿಗರೂ, ೧೦ ಮಿಲಿಯ ಜನ ಮಲೆಯಾಳಿಗಳೂ ಇರುತ್ತಾರೆ. ಇವರಲ್ಲದೆ ಬರಿಯ ವ್ಯವಹಾರದ ಮಟ್ಟದಲ್ಲಿ ಉಳಿದಿರುವ ಗೋಂಡ, ಒರೆಯಾಂ, ತುಳು, ಬಡಗ, ಕೊಡಗು ಮೊದಲಾದ ದ್ರಾವಿಡ ಉಪಭಾಷೆಗಳನ್ನಾಡುವ ಜನ ಸುಮಾರು ೪ ಮಿಲಿಯ ಇರುವರು. ಈ ದ್ರಾವಿಡ ಭಾಷೆಗಳಿಗೆ ಯಾವುದೋ ಒಂದು ಪ್ರಾಚೀನತಮವಾದ ಮೂಲ ದ್ರಾವಿಡ ಭಾಷೆಯು ಮಾತೃಭಾಷೆಯಾಗಿದ್ದಿರಬೇಕು. ಪ್ರಾಕ್ತನ ವಿಮರ್ಶಕರು ಮೂಲದ್ರಾವಿಡ ಜನ ಸುಮಾರು ಕ್ರಿ. ಪೂ. ೧೫೦೦ರ ಸಮಯದಲ್ಲಿ ವಾಯುವ್ಯ ಭಾರತಕ್ಕೆ ಪಶ್ಚಿಮ ಏಷ್ಯಾ ಮತ್ತು ಪೂರ್ವ ಭೂಮಧ್ಯ ಸಮುದ್ರತೀರ ಪ್ರದೇಶಗಳಿಂದ ಬಂದಿರಬಹುದೆಂದು ಅಭಿಪ್ರಾಯ ಪಡುತ್ತಾರೆ.[1] ಇನ್ನು ಕೆಲ ವಿಮರ್ಶಕರು ಕ್ರಿ. ಪೂ. ೬೦೦೦ ಅಥವಾ ೮೦೦೦ ದಲ್ಲಿ ಈ ಘಟನೆ ನಡೆಯಿತೆಂಬುದಾಗಿ ಹೇಳುತ್ತಾರೆ. ಆದರೆ ಆ ಮೂಲದ್ರಾವಿಡ ನುಡಿಯ ಸ್ವರೂಪ ಇತ್ಯಾದಿಯನ್ನು ಇಂದು ಸ್ಪಷ್ಟವಾಗಿ ನಿರ್ದೇಶಿಸುವುದಕ್ಕೆ ಸಾಕಷ್ಟು ಆಧಾರಗಳು ಇರುವುದಿಲ್ಲ. ಆದರೂ ಸಹೋದರೀ ಭಾಷೆಗಳ ಜ್ಞಾತಿಶಬ್ದಗಳನ್ನು (cognates) ಹೋಲಿಸಿ ಕೆಲವು ಧ್ವನಿ ಸಮನ್ವಯ ಸೂತ್ರಗಳನ್ನು ಕಂಡುಹಿಡಿದು ಮೂಲದ್ರಾವಿಡ ಶಬ್ದಗಳ ಸ್ವರೂಪವನ್ನು ಅನುಮಾನಿಸಿ ಪುನಃ ರಚಿಸಲು ಭಾಷಾಶಾಸ್ತ್ರ ಪಂಡಿತರು ಯತ್ನಿಸಿರುತ್ತಾರೆ. ಈ ದಿಸೆಯಲ್ಲಿ ಇನ್ನೂ ಬಹಳ ಕೆಲಸ ನಡೆಯಬೇಕಾಗಿದೆ.

ದ್ರಾವಿಡ ಜನ ತಮ್ಮದೇ ಆದ ಭಾಷಾ ಸಂಸ್ಕೃತಿಗಳನ್ನು ಆರ್ಯರು ಭಾರತಕ್ಕೆ ಬರುವುದರ ಮುಂಚಿತವಾಗಿ ಅಖಿಲ ಭಾರತದಲ್ಲಿ ಹರಡಿದ್ದರು.

---

[1] ಡಾ. ಎಂ. ಎಚ್. ಕೃಷ್ಣ, ಕರ್ಣಾಟಕದ ಪೂರ್ವಚರಿತ್ರೆ, ಪು.೧೩

ಹರಪ್ಪ ಮೊಹೆಂಜೋದಾರದ ನಾಗರಿಕತೆಯ ನಿರ್ಮಾಪಕರು ದ್ರಾವಿಡರೇ ಆಗಿದ್ದ ರೆಂಬ ವಿದ್ವಾಂಸರ ಪಕ್ಷವುಂಟು. ಫಾದರ್ ಹೆರಾಸಿನಂತಹ ಸಂಶೋಧಕರು ಮೊಹೆಂಜೋದಾರದ ಕೆಲವು ಚಿತ್ರಲಿಪಿಗಳನ್ನು (seals) ಅರ್ಥ ಮಾಡುವುದಕ್ಕೆ ಪ್ರಯತ್ನಿಸಿ, "ಕಣ್" ಚಿಹ್ನೆಯ ಮೂಲಕ "ಕಣ್ಣನಿರ್" ಎಂಬೊಂದು ಪಂಗಡ ವನ್ನು ಗುರುತಿಸಿ, ಅವರೇ ಕನ್ನಡಿಗರ ಮೂಲಜನ ಎಂಬುದಾಗಿ ವಾದಿಸಿರು ತ್ತಾರೆ.

(ಈ ಸಂಶೋಧನೆಯಿಂದ 'ಕನ್ನಡ' ಪದಕ್ಕೊಂದು ವ್ಯುತ್ಪತ್ತಿಯನ್ನು ಹೇಳಿದಂತಾಯಿತು. ಆದರೆ ಡಾ|| ಎಸ್. ಕೆ. ಚಟರ್ಜಿ ಮೊದಲಾದ ವಿದ್ವಾಂಸರು ಇದನ್ನೊಪ್ಪುವುದಿಲ್ಲ. 'ಕನ್ನಡ' ಪದದ ವ್ಯುತ್ಪತ್ತಿಯನ್ನು ಇನ್ನೂ ಅನೇಕ ವಿಧವಾಗಿ ಹೇಳುವರು : 'ಕರ್ಣಯೋ ಅಟತಿ ಇತಿ ಕರ್ಣಾಟಕ'; 'ಕಮ್ಮಿತ್ತು ನಾಡು ಕನ್ನಡ'; 'ಕರುನಾಡು ಕನ್ನಡ' ಇತ್ಯಾದಿ. ಇದರಲ್ಲಿ ಯಾವುದೂ ಇತ್ಯರ್ಥವಾಗಲಿಲ್ಲ.)

ಕ್ರಿಸ್ತಪೂರ್ವದ ಹಿಂದಿನ ಕೆಲವು ಶತಮಾನಗಳಲ್ಲಿ ಮೂಲದ್ರಾವಿಡ ಭಾಷೆ ಇದ್ದಿರಬೇಕೆಂಬುದಕ್ಕೆ ರಾಮಾಯಣ ಮಹಾಭಾರತಗಳೂ ತಕ್ಕ ಸಾಕ್ಷ್ಯಗಳನ್ನು ಕೊಡುತ್ತವೆ. ಏಕೆಂದರೆ ರಾಮಾಯಣ ಮಹಾಭಾರತಗಳಲ್ಲಿ ಪುತ್ತಿನ ದ್ರಾವಿಡ ನಾಡುಗಳ ಉಲ್ಲೇಖವುಂಟು. ರಾಮಾಯಣದಲ್ಲಿ ದಕ್ಷಿಣ ದೇಶಗಳನ್ನು ಹೇಳು ವಲ್ಲಿ ಋಷ್ಟಿಕ, ಮಾಹಿಷಿಕ, ಆಂಧ್ರ, ಪುಂಡ್ರ, ಚೋಳ, ಪಾಂಡ್ಯ, ಕೇರಳಗಳ ಹೆಸರುಗಳು ಬಂದಿರುತ್ತವೆ. ಮಹಾಭಾರತದೊಳಗಣ ಸಭಾಪರ್ವ ಭೀಷ್ಮಪರ್ವ ಗಳಲ್ಲಿ ದ್ರಾವಿಡ, ಕೇರಳ, ಕರ್ಣಾಟಕ, ಕುಂತಳ, ಮೂಷಿಕಾ, ವನವಾಸಿಕಾ, ಮಹಿಷಕಾ ಮೊದಲಾದ ದಕ್ಷಿಣ ದ್ರಾವಿಡ ಪ್ರದೇಶಗಳು ಹೇಳಲ್ಪಟ್ಟಿವೆ.

ಕ್ರಿ. ಪೂ. ಸುಮಾರು ೧೫೦೦ರ ವರೆಗೆ ಎಂದರೆ ಇತರ ಬುಡಕಟ್ಟಿನ ಭಾಷಾ ಸಂಪರ್ಕವಾಗುವವರೆಗೆ ದ್ರಾವಿಡ ಭಾಷೆಗಳು ತಕ್ಕಮಟ್ಟಿಗೆ ಶುದ್ಧವಾಗಿಯೇ ಇದ್ದವೆನ್ನಬಹುದು. ಆದರೆ ಕಾಲಕ್ರಮೇಣ ಎಲ್ಲ ಬುಡಕಟ್ಟಿನವರೊಳಗೆ ಪರಸ್ಪರ ಮೈತ್ರಿ ಅಥವಾ ಘರ್ಷಣೆಗಳುಂಟಾದುದರಿಂದ ತತ್ಪರಿಣಾಮವಾಗಿ "ಹಿಂದೂ ಸಂಸ್ಕೃತಿ" ಎಂಬೊಂದು ಮಿಶ್ರಫಲಪ್ರಾಪ್ತಿಯಾಯಿತು. ಭಾಷೆಗಳೂ

ಕೊಳ್–ಕೊಡುಗೆಗಳಿಂದ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಂಡವು. ಕ್ರಿಸ್ತ ಪೂರ್ವದ ಶತಮಾನಗಳಲ್ಲಿ ತಮಿಳಿನಲ್ಲಿ ಗ್ರಂಥರಚನೆಯಾಗಿದ್ದಿತೆಂಬ ಐತಿಹ್ಯ ವುಂಟು. ಪಾಂಡ್ಯ, ಚೇರ, ಚೋಳರಾಜರ ಆಶ್ರಯದಲ್ಲಿ ಮೂರು ಪ್ರಾಚೀನ ಸಂಘಗಳು ಬೆಳಕಿಗೆ ತಂದ ಮಹಾಕೃತಿಗಳನ್ನು "ಸಂಘಸಾಹಿತ್ಯ" ವೆಂಬುದಾಗಿ ಕರೆಯುತ್ತಾರೆ.

ಆದರೆ ಬರಹಕ್ಕೆ ಇಳಿಸಿದ ವಸ್ತು ಎಂಬುದು ದ್ರಾವಿಡವರ್ಣಗಳ ಮೂಲಕ ನಮ್ಮ ದೃಷ್ಟಿಗೆ ಬೀಳುವುದು ಸುಮಾರು ಕ್ರಿ. ಶ. ಐದನೆಯ ಶತಮಾನದ ಮಧ್ಯಕಾಲದಿಂದ ಎನ್ನಬಹುದು. ಅದಕ್ಕಿಂತ ಪೂರ್ವಕಾಲದ ಶಾಸನಗಳು ಬ್ರಾಹ್ಮಿಲಿಪಿಯಲ್ಲಿರುವುವು. ನಮ್ಮ ದೇಶದ ಎಲ್ಲ ಲಿಪಿಗಳಿಗೂ ಅಶೋಕನ ಶಾಸನಗಳಲ್ಲಿ ಉಪಯೋಗವಾದ ಬ್ರಾಹ್ಮಿಲಿಪಿಯೇ ಮೂಲವೆಂದು ತಜ್ಞರು ಸಾಧಿಸಿದ್ದಾರೆ. ಹೀಗಿದ್ದರೂ ಇಂದು ನಾಲ್ಕು ಪ್ರಮುಖ ದ್ರಾವಿಡ ಭಾಷೆಗಳ ಲಿಪಿಗಳು ತೀರಾ ಭಿನ್ನವಾಗಿವೆ. ತೆಲುಗು ಕನ್ನಡ ಲಿಪಿಗಳಿಗೆ ಐತಿಹಾಸಿಕ ಕಾರಣ ಗಳಿಂದಾಗಿ ಸಾದೃಶ್ಯವಿದ್ದರೂ, ಇವುಗಳಿಗೂ ತಮಿಳು ಮಲೆಯಾಳ ಲಿಪಿಗಳಿಗೂ ಇಂದು ಸಂಬಂಧವನ್ನು ತಿಳಿಯುವುದು ಕಷ್ಟವಾಗಿದೆ.

ದ್ರಾವಿಡ ಭಾಷೆಗಳ ಪರಸ್ಪರ ಸಂಬಂಧ : ಶಬ್ದರೂಪಗಳಲ್ಲಿ ಮತ್ತು ವ್ಯಾಕರಣ ಪ್ರಕ್ರಿಯೆಗಳಲ್ಲಿ ಹೊಸ ಕನ್ನಡಕ್ಕೂ ತಮಿಳಿಗೂ ಹೋಲಿಕೆ ಅಷ್ಟು ಕಂಡುಬಾರದಿದ್ದರೂ, ಪೂರ್ವದ ಹಳಗನ್ನಡ ಹಳಗನ್ನಡಗಳಿಗೂ ತಮಿಳಿಗೂ ಬಹಳ ಹೋಲಿಕೆಯುಂಟು. ಇಷ್ಟು ಸಾಮೀಪ್ಯ ತೆಲುಗಿಗೆ ತಮಿಳು ಕನ್ನಡ ಗಳೊಡನೆ ಇರುವುದಿಲ್ಲ. ತೆಲುಗು ಕನ್ನಡಗಳೊಳಗೆ ಅಷ್ಟು ಲಿಪಿಸಾದೃಶ್ಯವಿರುತ್ತಾ ಶತಮಾನಗಳ ಲೆಕ್ಕದಲ್ಲಿ ನಿಕಟ ರಾಜಕೀಯ ಸಂಬಂಧವಿರುತ್ತಾ ನುಡಿ ಗಳಲ್ಲಿ ಅಷ್ಟು ಹೋಲಿಕೆ ಇಲ್ಲದಿರುವುದು ಭಾಷಾಚರಿತ್ರೆಯ ದೃಷ್ಟಿಯಿಂದ ಗಮನಾರ್ಹ. ಹಾಗೆಯೇ ಹೋಲಿಸುತ್ತಾ ಹೋದರೆ, ಮಲೆಯಾಳ ತಮಿಳು ಗಳೊಳಗೆ ಲಿಪಿ-ಭಾಷೆಗಳೆರಡರಲ್ಲೂ ಇರುವಷ್ಟು ಸಾಮೀಪ್ಯ ಮಿಕ್ಕ ಯಾವ ದ್ರಾವಿಡ ಭಾಷೆಗಳೊಳಗೂ ಇರುವುದಿಲ್ಲ. ಕೆಳಗಿನ ಕೆಲವೇ ಉದಾಹರಣೆಗಳಿಂದ ಹಿಂದಿನ ಹೇಳಿಕೆ ಮಂದಟ್ಟಾಗದಿರದು.

| | ಕನ್ನಡ | ತಮಿಳು | ತೆಲುಗು | ಮಲೆಯಾಳ |
|---|---|---|---|---|
| | ಕಯ್ | ಕಯ್ | ಚೇಯಿ | ಕಯ್ |
| | ಬೆರಲ್ | ವಿರಲ್ | ವ್ರೇಲು | ವಿರಲ್ |
| | ತಂದ | ತಂದ್ಯೆ | ತಂಡ್ರಿ | |
| | ಅವನ್ | ಅವನ್ | ವಾಡು | ಅವನ್ |
| | ಅವಳ್ | ಅವಳ್ | — | ಅವಳ್ |
| ಪೂ. ಹ. ಕನ್ನಡ | ಏೞಿದಾರ್ | ಏೞಿನಾರ್ | — | |
| | ತಪ್ಪಾದೆ | ತಪ್ಪಾದೆ | — | |
| | | ಇತ್ಯಾದಿ | | |

ಈಗ ದ್ರಾವಿಡ ನುಡಿಗಳು ಬೇರೆ ಬೇರೆಯಾಗಿ ವ್ಯವಹರಿಸುತ್ತಿವೆ. ಈ ಸಂದರ್ಭದಲ್ಲಿ ಒಂದು ಮಾತು. ತಮಿಳು ನುಡಿಯಲ್ಲಿ ಮೂಲದ್ರಾವಿಡದ ಅಂಶಗಳು ಹೆಚ್ಚಾಗಿ ಉಳಿದುಕೊಂಡಿವೆಯೆಂದೂ ಆದುದರಿಂದ ಇತರ ದ್ರಾವಿಡ ನುಡಿಗಳು ತಮಿಳಿನಿಂದ ಒಡೆದ ಕವಲುಗಳೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಶಾಸ್ತ್ರೀಯ ದೃಷ್ಟಿಯಿಂದ ವಿಮರ್ಶೆಮಾಡಿದಲ್ಲಿ ಮೂಲ ದ್ರಾವಿಡದ ಅನೇಕ ಅಂಶಗಳು ಕನ್ನಡ, ತೆಲುಗು, ಮಲೆಯಾಳಗಳಲ್ಲಿ ಅಚ್ಚಳಿ ಯದೆ ಉಳಿದಿರುವುದನ್ನೂ ಅವುಗಳು ತಮಿಳಿನಲ್ಲಿ ರೂಪಾಂತರ ಹೊಂದಿರುವು ದನ್ನೂ ಕಾಣಬಹುದು. ಆದುದರಿಂದ ಇವುಗಳೆಲ್ಲ ಮೂಲ ದ್ರಾವಿಡದ ಮಕ್ಕ ಳೆಂಬುದಾಗಿ ಒಪ್ಪಿಕೊಳ್ಳುವುದು ಯುಕ್ತಿಯುಕ್ತವಾಗಿದೆ.

ಕನ್ನಡದ ಸ್ವಾತಂತ್ರ್ಯೋದಯ ಮತ್ತು ಮೂಲಸ್ವರೂಪಗಳನ್ನು ಇಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯವಾದರೂ ಸುಮಾರು ೨೦೦೦ ವರ್ಷ ಗಳಿಂದ ಕನ್ನಡ ನಾಡು ನುಡಿಗಳು ಸ್ವತಂತ್ರವಾಗಿ ಅಭಿವೃದ್ಧಿ ಪಡೆಯುತ್ತಾ ಬಂದಿರುತ್ತವೆ ಎಂಬುದು ನಿರ್ವಿವಾದ.[1] ಗ್ರೀಕ ಪ್ರವಾಸಿ ಟಾಲೆಮಿಯು

---

1 ಮೌರ್ಯ ಚಕ್ರವರ್ತಿ ಚಂದ್ರಗುಪ್ತನು ಕ್ರಿ. ಪೂ. ೩೦೦ರಲ್ಲಿ ಉತ್ತರದಲ್ಲಿ ಕ್ಷಾಮವು ತಲೆದೋರಿದಾಗ ಭದ್ರಬಾಹುಮುನಿಯೊಡನೆ ದಕ್ಷಿಣಕ್ಕೆ ಬಂದು ಶ್ರವಣಬೆಳ್ಗೊಳದ ಕಟ್ವಪ್ರು ಎಂಬಲ್ಲಿ ನೆಲಸಿದುದಾಗಿ ಜೈನರಲ್ಲಿ ಐತಿಹ್ಯವುಂಟು.

(ಕ್ರಿ. ಶ. ೧೫೦) ಕನ್ನಡ ನಾಡಿನ ಅನೇಕ ಪ್ರಸಿದ್ಧ ನಗರಗಳನ್ನೂ ಪಟ್ಟಣಗಳನ್ನೂ ಬಂದರುಗಳನ್ನೂ ಅವನ ಭಾಷೆಗೆ ಹೊಂದಿಕೆಯಾದ ತದ್ಭವಗಳಾಗಿಸಿ ಹೆಸರಿಸಿರುವನು. ಶ್ರೀ ಗೋವಿಂದ ಪೈಯವರು ಅವುಗಳಲ್ಲಿ ಹಲವನ್ನು ಇಂದಿನ ಕರ್ಣಾಟಕದಲ್ಲಿ ಗುರುತಿಸುವುದಕ್ಕೆ ಯತ್ನಿಸಿರುತ್ತಾರೆ.[1] ಬನವಾಸಿ, ಮುದುಗಲ್, ಪುನ್ನಾಟ, ಮಲ್ಪೆ, ಬಾದಾಮಿ, ಪಟ್ಟದಕಲ್ ಮೊದಲಾದವು ಅವುಗಳಲ್ಲಿ ಪ್ರಸಿದ್ಧವಾದವುಗಳಾಗಿವೆ.

ಇವು ನಮ್ಮನ್ನು ಊಹಾರಾಜ್ಯದಿಂದ ಭದ್ರವಾದ ಚಾರಿತ್ರಿಕ ಪಂಚಾಂಗಕ್ಕೆ ಇಳಿಸಿ ಕನ್ನಡನಾಡಿನ ಇತಿಹಾಸಕ್ಕೆ ನಾಂದಿಯನ್ನು ಹಾಡುತ್ತವೆ. ವಿದೇಶದವರಿಂದ ಹೀಗೆ ಸ್ತುತಿಸಲ್ಪಟ್ಟ ನಗರಗಳು ಅಂದಿನ ಕನ್ನಡನಾಡಿನ ವಾಣಿಜ್ಯ ವೈಭವಗಳ ಪರಿಸ್ಥಿತಿಯನ್ನು ಒಂದಿಷ್ಟಾದರೂ ಸಾರಲಾರವೆ ? ಹಿಂದೆ ಸಂಸ್ಕೃತ ಪ್ರಾಕೃತಗಳ ಬೆಳವಣಿಗೆಯಲ್ಲಿ ದ್ರಾವಿಡ ಮತ್ತು ಇತರ ಆರ್ಯೇತರ ಭಾಷೆಗಳು ವಹಿಸಿದ ಪಾತ್ರವನ್ನು ಸೂಚಿಸಿದೆ. ಹಾಲರಾಜನ (ಸು. ಕ್ರಿ. ಶ. ೨೦೦) ಗಾಥಾ ಸಪ್ತಶತಿ ಎಂಬ ಪ್ರಾಕೃತ ಗ್ರಂಥದಲ್ಲಿ ಪೊಟ್ಟ, ತುಪ್ಪ, ತೀರ್ (ಸಾಧ್ಯವಾಗು), ಪಿಟ್ಟ (ಹೊಡೆ) ಮೊದಲಾದ ಕನ್ನಡ ಶಬ್ದಗಳ ಪ್ರಯೋಗವಾಗಿರುವುದನ್ನು ವಿದ್ವಾಂಸರು ತೋರಿಸಿಕೊಟ್ಟಿರುವರು. ಹೇಮಚಂದ್ರನ ದೇಶಿನಾಮಾವಳಿ ಎಂಬ ಪಟ್ಟಿಕೆಯಲ್ಲಿ ಅನೇಕ (ದ್ರಾವಿಡ) ಕನ್ನಡ ಶಬ್ದಗಳು ಪ್ರಾಕೃತಕ್ಕೆ ನುಸುಳಿಕೊಂಡುದನ್ನು ಕಾಣಬಹುದು. ಇದರಿಂದ ಕನ್ನಡ ನುಡಿಯ ಪ್ರಾಚೀನತೆಯನ್ನು ತಿಳಿದುಕೊಳ್ಳುವ ಭಾಗ್ಯವು ಲಭಿಸಿದಂತಾಯಿತು. ಗ್ರಾಂಥಿಕರೂಪವಲ್ಲವಾದರೂ ವ್ಯಾವಹಾರಿಕ ರೂಪದಲ್ಲಿ ಕ್ರಿಸ್ತಪೂರ್ವದ ಶತಮಾನಗಳಲ್ಲಿ ಕನ್ನಡ ನುಡಿ ದಾಂಗುಡಿಯಿಟ್ಟಿತು.. ಗ್ರಾಂಥಿಕ ಕನ್ನಡದ ಪರಿಚಯವಾಗುವುದು ನಮಗೆ ಸುಮಾರು ಕ್ರಿ. ಶ. ೪೫೦ ರಿಂದ. ವಿದ್ಯಾಭ್ಯಾಸದ ಫಲವನ್ನು ಪಡೆದ ಹಿಂದಿನ ಜನ ಸಂಸ್ಕೃತ ಪ್ರಾಕೃತಗಳ ಮೋಹಕ್ಕೆ ಕಟ್ಟುಬಿದ್ದು ತಾಯ್ನುಡಿಯಾದ ಕನ್ನಡದಲ್ಲಿ ಗ್ರಂಥರಚನೆ ಮಾಡಲಿಲ್ಲ.

———

1 ಟಾಲೆಮಿಯ ಹಿಪ್ಪೊಕೂರ (ಗೋವಿಂದ ಪೈ), ಪ್ರಬುದ್ಧ ಕರ್ಣಾಟಕ, ಸು. ೨೩-೧.

ಕನ್ನಡದಲ್ಲಿ ಉಪಲಬ್ಧವಾಗುವ ಪ್ರೊಟ್ಟಮೊದಲಿನ ಕೃತಿಯೆಂದರೆ ಕ್ರಿ. ಶ. ಸು. ೪೫೦ರಲ್ಲಿ ರಚಿತವಾದ ಹಲ್ಮಿಡಿ ಶಾಸನ. ಅಲ್ಲಿಂದೀಚೆಗೆ ಕನ್ನಡದ ಶಾಸನಗಳು ವಿಪುಲವಾಗಿ ದೊರೆಕಿರುತ್ತವೆ. ಈ ಅತ್ಯಂತ ಪ್ರಾಚೀನ ಕನ್ನಡ ಶಾಸನದಲ್ಲಿ ಪೂರ್ವದ ಹಳಗನ್ನಡ ಭಾಷೆ ಪೂರ್ವದ ಹಳಗನ್ನಡ ಲಿಪಿಯಲ್ಲಿ ಬರೆಯಲ್ಪಟ್ಟು ದನ್ನು ತಿಳಿದುಕೊಳ್ಳಬಹುದು. ಆಗಲೇ ಸಂಸ್ಕೃತ ಶಬ್ದಗಳು ಕನ್ನಡದೊಳಗೆ ನುಸುಳಿಕೊಂಡಿದ್ದುವು. ಶಾಸನದಲ್ಲಿ ಉಪಯೋಗವಾದ ಭಾಷಾ ಶೈಲಿಯನ್ನು ಗಮನಿಸಿದರೆ, ಭಾಷೆಯು ಅಷ್ಟು ಶಕ್ತಿಯುತವಾಗಿ ಬೆಳವಣಿಗೆ ಪಡೆಯಲು ಕೆಲವು ಶತಮಾನಗಳಾದರೂ ಹಿಡಿದಿರಬೇಕೆಂಬುದು ವಿದಿತವಾಗುವುದು. ಸುಮಾರು ಎಂಟನೆಯ ಶತಮಾನದವರೆಗೂ ಕನ್ನಡದ ಶಾಸನಗಳು ಪ್ರಾಯಃ ಗದ್ಯರೂಪದಲ್ಲಿದ್ದುವು. ಕ್ರಮದಂತೆ, ಗದ್ಯ ಮುಗಿಯುವಾಗ ಪದ್ಯ ಮೊದಲಾ ಯಿತು. ಪದ್ಯರೂಪದಲ್ಲಿ ಉತ್ತಮ ಕಾವ್ಯಗುಣಗಳುಳ್ಳ ಅನೇಕ ಕನ್ನಡ ಶಾಸನ ಗಳು ಎಂಟನೆಯ ಶತಮಾನದಿಂದ ಮುಂದೆ ಅನುಸ್ಯೂತವಾಗಿ ರಚಿತವಾದುವು. ಒಂಬತ್ತನೆಯ ಶತಮಾನದಿಂದ ಮುಂದಕ್ಕೆ ಕನ್ನಡದಲ್ಲಿ ಗ್ರಂಥರಚನೆಯ ಕಾರ್ಯವೂ ಸಾಗಿತು. ಅಂದಿನಿಂದ ಇಂದಿನವರೆಗೆ ಬೆಳೆಯುತ್ತಾ ಬಂದ ಕನ್ನಡ ಭಾಷೆಯಲ್ಲಿ ಕೆಲವು ಅವಸ್ಥಾಭೇದಗಳು ಕಂಡುಬರುವುದು ಅನಿವಾರ್ಯವೇ ಸರಿ. ವಿದ್ವಾಂಸರ ಅಭಿಪ್ರಾಯಗಳನ್ನು ಪರಿಶೀಲಿಸಿ ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ನಾಲ್ಕು ಘಟ್ಟಗಳನ್ನು ಹೇಳಬಹುದು :—(೧) ಪೂರ್ವದ ಹಳಗನ್ನಡ ಕಾಲ (ಕ್ರಿ. ಶ. ೮ನೆಯ ಶತಮಾನದ ಕೊನೆಯವರೆಗಿನ ಭಾಷೆ), (೨) ಹಳಗನ್ನಡ ಕಾಲ (ಕ್ರಿ. ಶ. ೯ನೆಯ ಶತಮಾನದಿಂದ ಸುಮಾರು ೧೨ನೆಯ ಶತಮಾನದ ವರೆಗಿನ ಭಾಷೆ , (೩) ನಡುಗನ್ನಡಕಾಲ (೧೨ನೆಯ ಶತಮಾನದ ಮಧ್ಯದಿಂದ ೧೯ನೆಯ ಶತಮಾನದ ಪೂರ್ವಾರ್ಧದವರೆಗಿನ ಭಾಷೆ), (೪) ಹೊಸಗನ್ನಡ (೧೯ನೆಯ ಶತಮಾನದ ಪೂರ್ವಾರ್ಧದಿಂದ ಮುಂದಿನ ಭಾಷೆ).

## ೨. ಕವಿರಾಜಮಾರ್ಗ—೯ನೆಯ ಶತಮಾನ

ಕವಿರಾಜಮಾರ್ಗವು ನಮಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು. ಇದು ನ್ಯಾಯವಾಗಿ ಲಕ್ಷಣಗ್ರಂಥಗಳ ಪ್ರಕರಣದಲ್ಲಿ

ಬರಬೇಕಾಗಿದ್ದರೂ ಇದರ ವಿವಿಧ ವಿಶಿಷ್ಟಗುಣಗಳಿಗಾಗಿ ಇದನ್ನು ಯಾವ ವಿಭಾಗದೊಳಗೂ ಸೇರಿಸದೆ ಇದರ ವಿಷಯ ಪ್ರತ್ಯೇಕವಾಗಿ ಮೊದಲು ಹೇಳಲಾಗಿದೆ. ಇದು ನಮ್ಮ ಹೆಮ್ಮೆಯ ಆದ್ಯಗ್ರಂಥ. ಇದರಿಂದ ಕನ್ನಡ ಸಾಹಿತ್ಯೇತಿಹಾಸಗಳ ನಾಂದಿಯಾಯಿತು. ಮುಂದಿನ ಕನ್ನಡ ಪರಂಪರೆಗೆ ಧೈರ್ಯೋತ್ಸಾಹಗಳ ಆಕರವಾಯಿತು.

ಕವಿರಾಜಮಾರ್ಗದ ಕರ್ತೃತ್ವದ ವಿಚಾರವಾಗಿ ವಾದವಿವಾದಗಳು ನಡೆದಿವೆ ; ಇವು ಇನ್ನೂ ಇತ್ಯರ್ಥವಾಗಲಿಲ್ಲ. ಶ್ರೀಯವರು ನೃಪತುಂಗ ಅಮೋಘವರ್ಷನು (೮೧೪–೮೭೭, ಇದರ ಕರ್ತೃವೆಂದು ಸಾಧಿಸಿದರೆ ಪಂಡಿತ ತಿಮ್ಮಪ್ಪಯ್ಯನವರು ಜಯಾಟ್ಟನೆಂಬ ಕವಿಯು ಇದರ ಕರ್ತೃವೆಂಬುದಾಗಿ ರುಜುಪಡಿಸುವುದಕ್ಕೆ ಯತ್ನಿಸಿದ್ದಾರೆ. ರಾ॥ ನರಸಿಂಹಾಚಾರ್ಯ, ಡಾ॥ ಫ್ಲೀಟು ಮೊದಲಾದ ವಿಮರ್ಶಕರು ಈ ಕುರಿತು ಬಹಳ ಸಂದೇಹಕ್ಕೊಳಗಾಗಿರುವರು. ಪರಿಚ್ಛೇದಗಳ ಕೊನೆಯಲ್ಲಿ ಬರುವ "ನೃಪತುಂಗ ದೇವಾನುಮತಮಪ್ಪ ಕವಿರಾಜ ಮಾರ್ಗದೊಳ್" ಎಂಬ ಹೇಳಿಕೆ ಈ ಎಲ್ಲ ವಿವಾದಗಳಿಗೂ ಎಡೆಕೊಟ್ಟಿತು. ಗ್ರಂಥಕರ್ತೃತ್ವದ ಕುರಿತು ನಿರ್ಣಯವೇನೇ ಇರಲಿ, ಕವಿರಾಜಮಾರ್ಗದ ಮಹತ್ವವನ್ನು ಎಷ್ಟು ಹೊಗಳಿದರೂ ಸಾಲದು.

ಇದೊಂದು ಅಲಂಕಾರ ಗ್ರಂಥ. ಇದರಲ್ಲಿ (೧) ದೋಷಾನುವರ್ಣನ ನಿರ್ಣಯ, (೨) ಶಬ್ದಾಲಂಕಾರ, (೩) ಅರ್ಥಾಲಂಕಾರ ಎಂಬ ಮೂರು ಪರಿಚ್ಛೇದಗಳಿವೆ. ಕವಿಯು ಲಕ್ಷಣಶಾಸ್ತ್ರ ಸಂಬಂಧವಾದ ಅಂಶಗಳನ್ನು ದಂಡಿ ಭಾಮಹರ ಗ್ರಂಥಗಳಿಂದ ಪರಿವರ್ತನೆ ಮಾಡಿರುವನು. ಇದು ಅಲಂಕಾರ ಗ್ರಂಥವಾದರೂ ಇದರಲ್ಲಿ ಪೀಠಿಕಾಭಾಗದಲ್ಲಿ ಅಂದಿನ ಕನ್ನಡ ನಾಡು ನುಡಿ ಜನರ ವಿಷಯವಾಗಿ ಹೇಳಿರುವ ಅಂಶಗಳು ಬಹಳ ಅಮೂಲ್ಯವಾಗಿವೆ.

ಅಂದಿನ ಕನ್ನಡನಾಡಿನ ವಿಸ್ತಾರವನ್ನೂ 'ಕನ್ನಡದ ತಿರುಳ'ನ್ನೂ ಕುರಿತು ಹೇಳುವ ಮಾತು ನಮಗೆ ರೋಮಾಂಚವನ್ನುಂಟುಮಾಡುವಂತಿದೆ

ಕಾವೇರಿಯಿಂದಮಾ ಗೋ
ದಾವರಿ ವರಮಿರ್ದ ನಾಡದಾ ಕನ್ನಡದೊಳ್ ।

ಭಾವಿಸಿದ ಜನಪದಂ ವಸು
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ ॥ (೧–೩೬)

ಅದಱೊಳಗಂ ಕಿಸುವೊೞಲಾ
ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ ।
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ (೧–೩೭)

ಇಲ್ಲಿ ಹೇಳಿದ ತಿರುಳ್–ಕನ್ನಡದ ಮೇರೆಗಳೆಂಬುದಾಗಿ ಹೆಸರಾಂತ ಕಿಸುವೊೞಲು ಕೊಪಣನಗರ ಪುಲಿಗೆಱೆಗಳು ಈಗಣ ಪಟ್ಟದ ಕಲ್ಲು, ಕೊಪ್ಪಳ, ಲಕ್ಷ್ಮೇಶ್ವರಗಳೆಂಬ ಪಟ್ಟಣಗಳು. ಒಂಕುಂದವು ಈಗ ಒಕ್ಕುಂದವೆಂಬುದಾಗಿ ಕರೆಯಲ್ಪಡುವ ಊರು. ಇವೆಲ್ಲಾ ಉತ್ತರ ಕರ್ಣಾಟಕದಲ್ಲಿರುತ್ತವೆ. ಅಂದಿನ ಕನ್ನಡಿಗರ ಪರಿಚಯವನ್ನು ಹೀಗೆ ಕೊಟ್ಟಿರುತ್ತದೆ.

ಪದನಱಿದು ನುಡಿಯಲುಂ ನುಡಿ
ದುದನಱಿದಾರಲಯಲುಮಾರ್ಪರಾ ನಾಡವರ್ಗಳ್ ।
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ॥ (೧–೩೮)

ಆದರೂ 'ಮಾತಱಿವವರೊಳ್ ನೀತಿವಿದರ್, ಅಮಲಕವಿತಾನೀತಿಯುತರ್ ಕೆಲರೆ ಪರಮ ಕವಿವೃಷಭರ್ಕಳ್' (೧–೧೭) ಎಂದಿದ್ದಾನೆ ಕವಿ. 'ಇಂಥ ಕವಿವೃಷಭರ ಪ್ರಯೋಗಗಳಲ್ಲಿ ಕೃತಪರಿಚಯ ಬಲನಾಗಿರುವವನನ್ನು ಮಾತ್ರ ಅತಿಶಯಧವಳನ ಸಭಾಸದರು ಮನ್ನಿಸುವರು.' ಮಾತ್ರವಲ್ಲ 'ವ್ಯಾಕರಣ ಕಾವ್ಯನಾಟಕ ಲೋಕಕಲಾ ಸಮಯದಲ್ಲಿ ಅಲಂಕಾರಶಾಸ್ತ್ರಗಳಲ್ಲಿ ಪಾರಂಗತನಲ್ಲದವನಿಗೆ ವಿವೇಕ ಬೃಹಸ್ಪತಿ ಎಂಬ ಬಿರುದಾಂತ ನೃಪತುಂಗನ ನಗರ ಪ್ರವೇಶವೇ ದುರ್ಲಭವಂತೆ.' (೧–೫, ೬) ನೃಪತುಂಗನ ಆಸ್ಥಾನವೆಂದರೆ ವಿದ್ಯಾಸಮುದ್ರವಲ್ಲದೆ ಇನ್ನೇನು ?

ಒಂದು ಭಾಷೆಯಲ್ಲಿ ಲಕ್ಷಣಗ್ರಂಥಗಳು ಎಂದಿಗೂ ಮೊದಲು ಹುಟ್ಟಲಾರವು. ಈ ತತ್ವವನ್ನೊಪ್ಪಿಕೊಂಡರೆ, ಕನ್ನಡದಲ್ಲಿ ಕವಿರಾಜಮಾರ್ಗಕ್ಕಿಂತ

ಮುಂಚಿತವಾಗಿ ಅನೇಕ ಕೃತಿಗಳು ರಚನೆಯಾಗಿರಬೇಕು. ಇಂದು ಅವು ಉಪ ಲಬ್ಧವಾಗಿರದಿದ್ದರೂ, ಅವುಗಳಲ್ಲಿ ಕೆಲವರ ಹೆಸರುಗಳನ್ನಾದರೂ ಕವಿರಾಜ ಮಾರ್ಗಕಾರನು ಉಲ್ಲೇಖಿಸಿರುವುದು ಮಹಾ ಭಾಗ್ಯ—

ವಿಮಳೋದಯ ನಾಗಾರ್ಜುನ
ಸಮೇತ ಜಯಬುಧ ದುರ್ವಿನೀತಾದಿಗಳೀ ।
ಕ್ರಮದೊಳ್ ನೆಗಟ್ಚಿ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್ (೧–೨೯)
ಪರಮ ಶ್ರೀವಿಜಯ ಕವೀ
ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ ।
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ ॥

ಇಲ್ಲಿ ಕೆಲವರು ಗದ್ಯಲೇಖಕರು ಸಾಮಾನ್ಯರಲ್ಲ–ಗದ್ಯಾಶ್ರಮದಲ್ಲಿ ಪ್ರಸಿದ್ಧ ಗುರುತಾ ಪದವಿಯನ್ನು ಪಡೆದವರು. ಉಳಿದವರು ಆದ್ಯಕಾವ್ಯಕ್ಕೆ ಲಕ್ಷ್ಯವಾ ದಂಥ ಕೃತಿಗಳನ್ನು ರಚಿಸಿದ ಕವಿಗಳು. ಕವಿರಾಜಮಾರ್ಗದ ಎಷ್ಟೋ ಉದಾ ಹರಣ ಪದ್ಯಗಳು ಪ್ರಾಚೀನ ಗ್ರಂಥಗಳಿಂದ ಉದ್ಧರಿಸಲ್ಪಟ್ಟವೆ. ಉದಾ :

ಶಶಧರ ಬಿಂಬಾನನೆಯುಂ
ಝಷಕೇತನ ಕೇತನಾಭತನುತನುವಂ ತಾಂ ।
ಬಿಸವಿಶದ ವರ್ಣೆಯುಂ ಕಂ
ಡೊಸೆದಂ ಬನದೊಳಗೆ ಜನಕತನಯಳನಣುವಂ ॥

(ಇದು ಯಾವುದೋ ಒಂದು ಕಳೆದುಹೋದ ರಾಮಾಯಣದಿಂದ ಉದ್ಧೃತವಾದುದಾದರೂ ಇರಬಹುದು.)

ಈ ಗ್ರಂಥದಲ್ಲಿ ಹೇಳಿರುವ ಅಪಂಡಿತನಿಂದೆ, ಕಾವ್ಯಾಭ್ಯಾಸದ ಆವಶ್ಯಕತೆ, ಕಾವ್ಯರಚನಾಶಕ್ತಿಗೆ ಕಾರಣ, ಸುಕವಿತ್ವಪ್ರಾಪ್ತಿ ವಿಧಾನ ಇತ್ಯಾದಿ ಬಹಳ ನಯ

ವಾಗಿ ಬಂದಿವೆ. "ತನಗನಿತಱ ಬೇವಸಮೇಂ, ಕವರ್ದರು ಮೊಳರೆ ಕವಿಯಲ್ಲ ದರಂ", "ಪೆಱರ ಮಾತುಗಳನೆ ನೆಗೞ್ದಿರೆ ಕೃತಿಯೊಳ್ ಅದು ನಗದ ಗುಹಾ ಧ್ವನಿಯವೊಲನರ್ಥವಚನಂ" ಎಂಬ ಮುನಿಸಿನ ಮಾತುಗಳು ಎಷ್ಟು ಸಹಜ ವಾಗಿವೆ. ಸುಕವಿತ್ವಪ್ರಾಪ್ತಿವಿಧಾನ :

ಬಗೆಬಗೆದು ಕೇಳ್ದು ಬುಧರೊಲ
ವೊಗದಿರೆ ಹೃದಯದೊಳೆ ತಾಳ್ದಿ ಮಣಿಹಾರಂಬೋಲ್ ।
ಸೊಗಯಿಸುವ ವಚನವಿರಚನೆ
ನೆಗೞ್ಗಂ ಭಾವಿಸುವೊಡದರ ಪೆಂಪತಿ ಸುಲಭಂ ॥ (೧–೧೩)

ಕವಿಯು ಕೆಲವು ವಿಚಾರಗಳನ್ನು ತನ್ನದೇ ಆದ ಸ್ವತಂತ್ರ ಧೋರಣೆಯಲ್ಲಿ ಹೇಳಿರುವನು. ಅಂದಿನ ಕಾಲದಲ್ಲೇ ಪ್ರಾಂತಭೇದಗಳು ಇದ್ದುವು ಎಂಬುದು ಆತನು ಹೇಳುವ ಉತ್ತರ ದಕ್ಷಿಣ ಮಾರ್ಗಗಳ ಉದಾಹರಣೆಗಳಿಂದಲೂ "ವಾಸುಗಿಯುಮಱಿಯಲಾರದೆ ಬೇಸಱೆಗುಂ ದೇಶಿ ಬೇಱೆ ವೇಱಪ್ಪುದಱಿಂ" (೧–೪೬) ಎಂಬ ಹೇಳಿಕೆಯಿಂದಲೂ ತಿಳಿದುಬರುತ್ತದೆ.

"ನೆಲಸಿದ ಕಾವ್ಯವು ಕಾವ್ಯಕ್ಕೆ ಸದಾ ಲಕ್ಷಣವೆಂಬುದಾಗಿ, ಕೆಲ ಬಲಹೀನರು 'ಪೞಗನ್ನಡವನ್ನು' ಹೊಲಗೆಡಿಸಿಬಿಡುವರು ; ದೇಸಿ (ಸುಂದರ) ಅಲ್ಲದ 'ದೇಶಿ'ಯನ್ನುಪಯೋಗಿಸುವರು" (೧–೪೮) ಎಂಬುದಾಗಿ ನೊಂದು ಕೊಳ್ಳುತ್ತಾನೆ. ಆದುದರಿಂದ ಅಂದಿನ ಕಾಲಕ್ಕಿಂತ ಹಿಂದೆ ಒಂದು 'ಹಳ ಗನ್ನಡ'ದ ಅವಸ್ಥೆ ಇತ್ತೆಂಬುದು ತಿಳಿದುಬರುತ್ತದೆ. ಇದೇ ನಾವೀಗ ಹೇಳುವ ಪೂರ್ವದ ಹಳಗನ್ನಡ. ಆಯಾ ಕಾಲಕ್ಕೆ ಅದು ಚಂದ, ಇಲ್ಲವಾದರೆ ಅದು ವಿರಸ – "ಜರದ್ವಧೂ ವಿಷಯ ಸುರತರಸಿಕತೆವೋಲ್" (೧–೫೦) ಎಂದಿರುವನು. ಹಾಗೆಯೇ ಸಂಸ್ಕೃತ ಕನ್ನಡ ಮಿಶ್ರಣ ವಿಚಾರದಲ್ಲಿಯೂ "ಅದನ್ನಱಿದು ಪೇೞ್ವುದು—ಅದೇ ಆಗಮ ಕೋವಿದ ನಿಗದಿತ ಮಾರ್ಗ" ಎನ್ನುವನು.

"ಚಂಪೂ" ಎಂಬ ಶಬ್ದವನ್ನು ಹೇಳದಿದ್ದರೂ, "ಗದ್ಯ ಪದ್ಯ ಸಮ್ಮಿ ಶ್ರಿತಮುಂನಿಗದಿಸುವರ್" ಎಂಬುದರಿಂದ ಅಂದಿಗೆ ಕನ್ನಡದಲ್ಲಿ ಬಹಳ ಪ್ರಚಾರ

ದಲ್ಲಿದ್ದಿರಬೇಕಾದ ಚಂಪೂ ಪ್ರಕಾರವನ್ನು ನಿರ್ವಚಿಸಿರುವನು. ಕಾವ್ಯ ಶರೀರ ವೆಂಬುದರಲ್ಲಿ ಗದ್ಯ ಮತ್ತು ಪದ್ಯ ಎಂಬ ದ್ವಿವಿಧಗಳುಂಟೆಂಬುದಾಗಿಯೂ ಹೇಳಿರುತ್ತಾನೆ.

## ಕವಿರಾಜಮಾರ್ಗದಲ್ಲಿ ಹೇಳಿರುವ ಸುಕವಿಕಾವ್ಯ ಪ್ರಶಂಸೆ

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ ।
ಖೋಪಾತ್ತಮಿನೆಂದಱಿಪುಗು
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ॥ (೧–೧೮)

## ಕಾವ್ಯಪ್ರಯೋಜನ

ಲೋಕದೊಳದಱಿಂ ಕಾವ್ಯ
ಸ್ವೀಕರಣೋದ್ಯುಕ್ತನಕ್ಕೆ ಕವಿ ತನ್ನಱಿವಂ ।
ತಾಕಲ್ಪಾಂತ ಸ್ಥಾಯಿ
ಶ್ರೀ ಕೀರ್ತಿವಧೂಪ್ರಧಾನವಲ್ಲಭನಕ್ಕುಂ ॥ (೧–೨೧)

ಮತ್ತೊಂದು ವಿಶೇಷದ ಅಂಶವೆಂದರೆ, ಕವಿಯು ಕನ್ನಡದಲ್ಲಿ ಬೆದಂಡೆ ಚತ್ತಾಣಗಳೆಂಬ ಎರಡು ಕಾವ್ಯಪ್ರಕಾರಗಳಿವೆ ಎನ್ನುತ್ತಾನೆ. ಇದನ್ನು ಪುರಾತನ ಕವಿಗಳು ಒಪ್ಪಿಕೊಂಡಿದ್ದರಂತೆ. ಅವುಗಳ ಲಕ್ಷಣವನ್ನು ಹೇಳುತ್ತಾನೆ.

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ ।
ಗಡಿನ ನೆಗೞ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ ॥ (೧–೩೨)

ಕವಿರಾಜಮಾರ್ಗದಲ್ಲಿ ಬಂದಿರುವ ಕೆಲವು ಮನೋಹರವಾದ ಗಾದೆಯ ಮಾತುಗಳ (ನಾಣ್ಣುಡಿಯ) ಬೆಡಗನ್ನು ಗಮನಿಸಿರಿ :

೧. ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ (೧–೪೫)
೨. ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ (೧–೫೮)

೩. ನೆಲ್ಲುಂ ಮೊಸರುಂ ಗುಡಿದಂತೆ (೧೧–೪)
೪. ಮುತ್ತುಂ ಮೆಟಿಸುಂ ಕೋದಂತೆ (೧೧–೫)
೫. ಕೂಸಿನ ತಲೆಯೊಳ್ ಬೆಣ್ಪೊಟಿಯನಿಟ್ಟವೋಲ್ (೧೧–೬)
೬. ಎರಡಕ್ಕೆ ಬಿಟ್ಟ ಕಟುವಂ ಪೋಲ್ಗುಂ (೧೧–೯)
೭. ಜರದ್ವಧೂವಿಷಯ ಸುರತರಸಿಕತೆವೋಲ್ (೧–೫೦)
೮. ಒತ್ತುಂಗರಡೆಯ ಮದ್ದಳೆಯ ಜರ್ಝರಧ್ವನಿಗಳವೋಲ್ (೧–೫೩)

# ೩. ಪೂರ್ವದ ಹಳಗನ್ನಡ-ಹಳಗನ್ನಡ-ಗದ್ಯಸಾಹಿತ್ಯ

## (೧) ಅತ್ಯಂತ ಪ್ರಾಚೀನ ಶಾಸನ

ಕವಿರಾಜಮಾರ್ಗದಲ್ಲಿ 'ಗದ್ಯ'ದ ಲಕ್ಷಣವನ್ನು ಹೇಳಿರುತ್ತದೆ. ಆದುದರಿಂದ ಅದರ ರಚನಾಕಾಲಕ್ಕೆ ಎಷ್ಟೋ ಹಿಂದೆಯೇ ಗದ್ಯರಚನೆ ಕನ್ನಡದಲ್ಲಿದ್ದಿತ್ತೆಂಬುದು ನಿರ್ವಿವಾದ.

ಪದಪಾದವಿಯಂತನಿಯಮಾ
ಸ್ಪದಮಲ್ಲದಲಂಕೃತಂಕ್ರಿಯಾಕಾರಕದೊಳ್ ।
ಪುದಿದರ್ಥವ್ಯಕ್ತಿಯನೀ
ವುದು ಗದ್ಯಮನೇಕ ರೂಪಭೇದವಿಭಕ್ತಂ ॥ (೧–೨೫)

ಮಾತ್ರವಲ್ಲ–ಕನ್ನಡ ಗದ್ಯಕವಿಗಳ ಹೆಸರನ್ನು ಕೊಟ್ಟಿದ್ದಾನೆ :

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ ।
ಕ್ರಮದೊಳ್ ನೆಗಟ್ಚಿ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್ ॥ (೧–೨೯)

ಆದರೆ ಗದ್ಯಾಶ್ರಮ ಗುರುಪಟ್ಟವನ್ನೇರಿದ ಈ ಪ್ರಸಿದ್ಧರಲ್ಲಿ ಒಬ್ಬನ ಕೃತಿಯೂ ದೊರೆತಿಲ್ಲ. ದುರ್ದೈವ.

ಪ್ರಾಚೀನತಮ ಕನ್ನಡ ಶಾಸನವೆಂಬುದಾಗಿ ಇತ್ತೀಚೆಗೆ ವಿದ್ವಾಂಸರು ಅಭಿಪ್ರಾಯಪಟ್ಟಿರುವ ಹಲ್ಮಿಡಿ ಶಾಸನದ ( ಕ್ರಿ. ಶ. ೪೫೦ ? ) ಭಾಷೆಯನ್ನು ಸ್ವಲ್ಪ ಪರಾಂಬರಿಸಿದರೆ ಅಂದಿನ ಗದ್ಯದ ಯೋಗ್ಯತೆಯನ್ನು ಒಂದಿಷ್ಟು ಗ್ರಹಿಸಿಕೊಳ್ಳಬಹುದು.

"ನಮಃ ಶ್ರೀಮತ್ಕದಂಬಪನ್ ತ್ಯಾಗಸಂಪನ್ನನ್ ಕಲಭೋರ (ನಾ) ಅರಿಕಕುಸ್ಥಭಟ್ಟೋರನಾಳೆ ನರಿದಾವಿ(ಳೆ) ನಾಡುಳ್ ಮೃಗೇಶನಾಗೇನ್ದ್ರಾ ಭೀಳರ್ ಭಟಹರಪ್ಪೋರ್ ಶ್ರೀ ಮೃಗೇಶನಾಗಾಹ್ವಯರಿರ್ವರ್ ಆ ಬಟಾರಿ ಕುಲಾಮಲವ್ಯೋಮತಾರಾಧಿನಾಥನ್ ಅಳುಪ ಗಣಪಶುಪತಿ ಮಾದಕ್ಷಿಣಾ ಪಥ ಬಹು ಶತವಹನಾಹವದುಳ್....ಉಭಯದೇಶದಾ ವೀರಪುರುಷ ಸಮ ಕ್ಷಮದೆ . . .ವಿಜಅರಸಂಗೆ ಬಾಳ್ಗಟ್ಟುಪಲ್ಮಡಿಉಂ ಮೂಱುವಳ್ಳಿಉಂ ಕೊಟ್ಟಾರ್...."ಇತ್ಯಾದಿ.

ತ್ಯಾಗಸಂಪನ್ನ ಕದಂಬಪನು ಅರಿದಾವಿಳೆ ನಾಡನ್ನು ಆಳುತ್ತಿರುವಲ್ಲಿ— ಮೃಗೇಶನಾಗರು ಶತ್ರುಗಳನ್ನು ಕಾದಿ ಗೆದ್ದ ಮಹಾವೀರ ವಿಜಯರಸನಿಗೆ ಉಭಯದೇಶದ ವೀರರ ಸಮಕ್ಷದಲ್ಲಿ ಪಲ್ಮಡಿಯನ್ನೂ ಮೂಱುವಳ್ಳಿಯನ್ನು ದತ್ತಿಬಿಟ್ಟರೆಂಬುದು ಶಾಸನದ ಸಾರಾಂಶ.

ಈ ಶಾಸನದಲ್ಲಿ ಉಪಯೋಗವಾದ ಭಾಷೆಯನ್ನು ಪರಿಶೀಲಿಸಿದರೆ ಅದು ತಕ್ಕಷ್ಟು ಶಕ್ತಿಯುತವಾಗಿದ್ದಿತೆಂಬುದಾಗಿ ತೋರುತ್ತದೆ. ದಾನದ ಸನ್ನಿವೇಶವನ್ನು ನಿರ್ದುಷ್ಟವಾದ ಭಾಷೆಯುಲ್ಲಿ ಚಿತ್ರಿಸಿದೆ. ಶೈಲಿಯಲ್ಲಿ ಒಂದು ಸಂಪ್ರದಾಯವನ್ನೂ ಬಿಗುವನ್ನೂ ಓಟವನ್ನೂ ಕಾಣುತ್ತೇವೆ. 'ಅಳುಪ ಗಣಪಶುಪತಿ'ಯನ್ನು 'ಕುಲಾಮಲವ್ಯೋಮತಾರಾಧಿನಾಥನ್' ಎಂಬ ಸುಂದರ ವಾದ ರೂಪಕದಲ್ಲಿ ಅಭಿವರ್ಣಿಸಿರುವನು ಭಾಷೆಯ ಸಂಪತ್ತಿಯನ್ನು ಹೆಚ್ಚಿಸುವುದಕ್ಕೆ ಅಗತ್ಯವುಳ್ಳ ಸಂಸ್ಕೃತ ಪದಗಳನ್ನು ಹಾಗೆಯೇ ತೆಗೆದುಕೊ ಳ್ಳುವುದಕ್ಕೆ ಚೆನ್ನಾದರೆ ಹಾಗೆಯೇ ತೆಗೆದುಕೊಳ್ಳುವುದು; ಸರಿಹೋಗಲಿಲ್ಲ, ಆದರೂ ಬೇಕು ಎಂಬಲ್ಲಿ ತದ್ಭವವಾಗಿಸಿ ತೆಗೆದುಕೊಳ್ಳುವುದು ಅಂದೇ ರೂಢಿಗೆ ಬಂದಂತೆ ತೋರುತ್ತದೆ. 'ಮಾ', 'ಅರಸ' ಇತ್ಯಾದಿಯನ್ನು ನೋಡಬಹುದು. ಪೂರ್ವದ ಹಳಗನ್ನಡದ ಅಂತರಾಳದೀರ್ಘ, ಸಪ್ತಮಿಗೆ 'ಉಳ್' ಪ್ರತ್ಯಯ

ಇತ್ಯಾದಿ ವೈಶಿಷ್ಟ್ಯಗಳನ್ನು ಗುರುತಿಸಬಹುದು (ನಾಡುಳ್ ಅಪ್ಪೋರ್, ಆಹವದುಳ್, ಕೊಟ್ಟಾರ್, ಇತ್ಯಾದಿ). ಅಚ್ಚಗನ್ನಡದ ಊರ ಹೆಸರುಗಳು ಅಪುರವಾಗಿವೆ: ಪಲ್ಮಡಿ, ಮೂಟುವಳ್ಳಿ ಈ ಆದಿಶಾಸನದಲ್ಲಿ ಅಚ್ಚಕನ್ನಡ ಶಬ್ದಗಳಿಂದುಂಟಾದ ಕೆಲವು ಅರ್ಥವತ್ತಾದ ಪಾರಿಭಾಷಿಕ ಶಬ್ದಗಳ ಬೆಲೆಯನ್ನು ಅರಿತುಕೊಳ್ಳೋಣ: ಕುಱುಂಬಿಡಿ, ಒಡ್ಡು, ಪತ್ತೊನ್ದಿ, ಬಾಳ್ಗಟ್ಟು ಇತ್ಯಾದಿ. ಇಲ್ಲಿ ಪತ್ತೊನ್ದಿ—ಎಂಬುದಾಗಿ ಭಿನ್ನರಾಶಿಯನ್ನು ಸೂಚಿಸುವ ಉಪಾಯ ಬಹಳ ಸ್ವಾರಸ್ಯವಾಗಿದೆ—ಪತ್ತರಲ್ಲಿ ಒನ್ದು—ಪತ್ತೊನ್ದಿ. ಹೀಗೆಯೇ ಮಿಕ್ಕವೂ ಅರ್ಥ ಪೂರ್ಣ ಪಾರಿಭಾಷಿಕಗಳು.[1] ಉದ್ದವಾಗಿ ಓಡುವ ವಾಕ್ಯ ರಚನೆಯ ಸೌಂದರ್ಯವನ್ನೂ ಗಮನಿಸಬಹುದು.

## (೨) ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ (ಸು. ೯೨೦)[2]

ಮುಂದೆ ಹತ್ತನೆಯ ಶತಮಾನದ ಮಧ್ಯಕ್ಕೆ ಬರುವತನಕ ಬೇರಾವ ಕನ್ನಡ ಗದ್ಯ ರಚನೆಯೂ ಉಪಲಬ್ಧವಾಗಿಲ್ಲ. ಸುಮಾರು ೯೨೦ ರಲ್ಲಿ ರಚನೆಯಾಗಿರ ಬಹುದೆಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುವ ವಡ್ಡಾರಾಧನೆಯು ನಮಗೆ ಪಂಪಪೂರ್ವಯುಗದಲ್ಲಿ ದೊರೆತಿರುವ ಏಕಮಾತ್ರ ಗದ್ಯ ಗ್ರಂಥ. ಪೂರ್ವದ ಹಳಗನ್ನಡ ಪ್ರಯೋಗಗಳು ಸುಂದರವೂ ಸಹಜವೂ ಆದ ಕನ್ನಡದ ಮುತ್ತಿ ನಂತಹ ನುಡಿಗಳೂ ಅದರಲ್ಲಿ ಬಂದಿರುತ್ತವೆ. ವಡ್ಡಾರಾಧನೆಯಲ್ಲಿ ೧೯ ಜೈನ ಕಥೆಗಳು ಪರೀಷಹಜಯದ ಆವಶ್ಯಕತೆಯನ್ನು ಬೋಧಿಸುವುದಕ್ಕಾಗಿ ಶಿವಕೋಟ್ಯಾಚಾರ್ಯನಿಂದ ನಿರೂಪಿಸಲ್ಪಟ್ಟಿವೆ. ಇವುಗಳಿಗೆ ಹರಿಷೇಣನ 'ಕಥಾ ಕೋಶ'ವೇ ಆಕರ. "ಕಥೆಗಳೆಲ್ಲ ಸಾಂಪ್ರದಾಯಿಕ, ನೀತಿಪರ, ವೈರಾಗ್ಯ ಬೋಧಕವಾಗಿದ್ದರೂ ಪುನರುಕ್ತಿಗಳು ಹೇರಳವಾಗಿದ್ದರೂ, ಕಥೆಗಳ ಸಾರವತ್ತಾದ ಭಾಗವನ್ನು ತಿರುತಿರುಗಿ ಓದಬೇಕೆಂಬ ಆಸೆ ಹುಟ್ಟುತ್ತದೆ. ಇದಕ್ಕೆ ಕಾರಣ

---

[1] ಕನ್ನಡ ಸಂಸ್ಕೃತಿ, ಪು. ೩೫–೩೬.

[2] ಕ. ಸ. ಚ., ಪು. ೬೫. ವಡ್ಡಾರಾಧನೆಯ ಕಾಲದ ವಿಚಾರವಾಗಿ ಅದರ ಸಂಪಾದಕರಾದ ಪ್ರೊ. ಡಿ. ಎಲ್. ನರಸಿಂಹಾಚಾರ್ಯರಿಗೂ ಡಾ॥ ಉಪಾಧ್ಯೆಯವರಿಗೂ ಬಹಳ ವಾದ—ವಿವಾದಗಳು ನಡೆದಿವೆ.

ವೆಂದರೆ ಸನ್ನಿವೇಶ, ಪಾತ್ರ ಸಂವಾದ, ಈ ಎಲ್ಲದರಲ್ಲಿ ಒಟ್ಟುಗೂಡಿ ತೋರಿದಂಥ ಸಜೀವತೆ, ಮಾನವೀಯತೆ."[1]

## ವಡ್ಡಾರಾಧನೆಯಿಂದ ಒಂದು ಭಾಗ

ಧರ್ಮಪುರವೆಂಬುದು ಪೊಟಿಲಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿಯಾತನ ಬಂಟಂ ವೈಸಾಕನೆಂಬೊನಾತನೊಂದು ದಿವಸಂ ಕರ್ಬಿನ ಕಯ್ಯನುಟಿೞ್ಪಂ ನಿದಾನಮುಂ ಕಂಡದಂ ಮಱಸಲ್ವೇಡಿ ತನ್ನ ಪೆಂಡತಿಯ ಮನಮುಂ ಪರೀಕ್ಷಿಸಲ್ವೇಡಿ ಕೃತಕ ಗರ್ಭಮುಂ ತಾಳ್ದಿರೆ ಪೆಂಡತಿ ಕಂಡಿದೇನ್ ಬಸಿಱಿೞೊಳಿರ್ದು ದೆಂದೊಡಾತನಾ ಮಾತಿನೊಳೇನೋ ಕೆಮ್ಮಗಿರೆಂದೊಡಾಕೆ ನಿರ್ಬಂಧದಿಂ ಕೇಱ ಬೆಸಗೊಳೆಯಾರ್ಗಂ ಪೇೞಿಯಪ್ಪೊಡೆ ನಿನಗೆ ಪೇೞ್ವೆನೆಂದಿಂತೆಂದಂ ಪುರುಷರ್ಕ್ಗಳ್ಗಾಗದುದೆನಗಾದುದೆಂದು ಪೇೞ್ದೊಡದಂಕೇಳ್ದು ಸೈರಿಸನಾಱದೆ ಪೊಟಿಲ ಜನಂಗಳೆಲ್ಲಮಱಿವಂತು ಪೇೞ್ದಳ್....

## ೩. ಚಾವುಂಡರಾಯ (೯೭೮)

ಚಾವುಂಡರಾಯನು ಬ್ರಹ್ಮ ಕ್ಷತ್ರಿಯ ವಂಶೋದ್ಭವನಂತೆ. ಅಜಿತಸೇನಾಚಾರ್ಯರ ಶಿಷ್ಯನಾದ ಗಂಗಕುಲ ಚೂಡಾಮಣಿ ರಾಚಮಲ್ಲನ (೯೭೪–೮೪) ಮಂತ್ರಿಯಾಗಿಯೂ ಸೇನಾನಿಯಾಗಿಯೂ ಇದ್ದಂತೆ ಈತನ ಗ್ರಂಥವಾದ ಚಾವುಂಡರಾಯ ಪುರಾಣದಿಂದ ತಿಳಿದುಬರುತ್ತದೆ. ಗುಣಭದ್ರ ಮುನೀಶ್ವರರು ಬರೆದ 'ತ್ರಿಷಷ್ಟಿ ಪುರುಷಪ್ರತಿಬಂಧ ಪುರಾಣ'ವನ್ನು ತಾನು 'ಭವ್ಯಕೋಟಿಗೆ ಅಱಿಪಿದೆಂ' ಎಂದು ಹೇಳುವನು. ಗ್ರಂಥಾಂತ್ಯದಲ್ಲಿ ಗದ್ಯದಲ್ಲಿ ತನ್ನ ಕೃತಿಯನ್ನು 'ಶ್ರೀ ಚಾವುಂಡರಾಯ ವಿರಚಿತಮಪ್ಪ ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಎಂದುಕೊಂಡಿದ್ದಾನೆ. ಪ್ರತಿ ಚರಿತೆಯ ಆದಿಯಲ್ಲಿ ಬರುವ ಮಂಗಳ ನಿರೂಪಣ ಪೂರ್ವಕವಾದ ಒಂದೊಂದು ಪದ್ಯವನ್ನು ಬಿಟ್ಟರೆ ಚಾವುಂಡರಾಯ ಪುರಾಣವು ಗದ್ಯ ಗ್ರಂಥವಾಗಿದೆ. ಇದು ಹಳಗನ್ನಡ ಗದ್ಯ ರಚನೆಗೆ ಒಂದು ಅಮೂಲ್ಯ ಉದಾಹರಣೆಯಾಗಿದೆ. ಇದರಲ್ಲಿ ೨೪ ತೀರ್ಥಂಕರರೇ ಮೊದಲಾದ ೬೩ ಶಲಾಕಾ

---

[1] ಕ. ಸಾ. ಚ., ಪು. ೭೪.

ಪುರುಷರ ಚರಿತೆ ವರ್ಣಿತವಾಗಿದೆ. ಇದರಲ್ಲಿ ಮೂಲದ ಕಥಾವಸ್ತುವಿಗೆ ಯಾವ ವ್ಯತ್ಯಾಸವೂ ಬರಬಾರದೆಂಬ ಪವಿತ್ರ ಧ್ಯೇಯದಿಂದ ಧಾರ್ಮಿಕ ದೃಷ್ಟಿಯಿಂದ ಕಥಾನಿರೂಪಣೆ ಮಾಡಿರುವನು; ತನ್ನ ಸ್ವಂತ ಪ್ರತಿಭೆ ಕಾವ್ಯಶಕ್ತಿಗಳನ್ನು ತೋರಿಸುವ ಸ್ವಾತಂತ್ರ್ಯವನ್ನು ವಹಿಸದಿರುವುದರಿಂದ, ವಡ್ಡಾರಾಧನೆಯ ದೇಸಿ ಇಲ್ಲಿ ಅಷ್ಟು ಸ್ಫುಟವಾಗಿಲ್ಲ. ಧರ್ಮಕ್ಕೆ ಕಾವ್ಯಧರ್ಮ ಸೇರಿ ಹೊಂದಿಕೆ ಯಾಗಲಿಲ್ಲ. ಆದರೂ ಅಂದಿನ ಗದ್ಯ ಶೈಲಿಯನ್ನು ಚಾವುಂಡರಾಯಪುರಾಣವು ಪ್ರತಿನಿಧಿಸುತ್ತದೆ. ಕಥೆಯ ಹುಚ್ಚು ಓಟಕ್ಕೂ 'ಪುರಾಣ'ದ ಗಂಭೀರಗತಿಗೂ ಒಮ್ಮೊಮ್ಮೆ ತಾಕಲಾಟವಾಗುವುದನ್ನು ಸಮೀಕ್ಷಿಸಬಹುದು. ಚಾವುಂಡರಾಯ ಪುರಾಣದಲ್ಲಿ ಬರುವ ವರ್ಧಮಾನ ಪುರಾಣದ ಮಂಗಲ ಶ್ಲೋಕ :

ಶ್ರೀವೀರಂಜಿನಂ ಮುಕ್ತಿ
ಶ್ರೀವಲ್ಲಭನಖಿಲಲೋಕಬಂಧು ಪದಾಂಭೋ ।
ಜಾವನತಭವನನೆಮಗಮ್ಮ
ತಾವಾಸಮನೀಗೆ ವರ್ಧಮಾನ ಜಿನೇಂದ್ರಂ ॥

ಎಷ್ಟು ಸರಳವೂ ಲಲಿತವೂ ಭಕ್ತಿಪೂರ್ಣವೂ ಆಗಿರುತ್ತದೆ ಈ ಪದ್ಯ. ಇದೇ ಪುರಾಣಕಥೆಯ ಒಂದು ಭಾಗ:

"ಮತ್ತ ಪಾರಿವ್ರಜಕನಾಗಿ ಮಹೇಂದ್ರಕಲ್ಪದೊಳ್ ಪುಟ್ಟಿ ಬಂದು ಭರತದ ರಾಜಗೃಹಮನಾಳ್ವ ವಿಶ್ವಭೂತಿಗಂ ಜೈನಿದೇವಿಗಂ ವಿಶ್ವನಂದಿಯೆಂಬ ಮಗನಾಗಿ ಪುಟ್ಟಿ, ವಿಶ್ವಭೂತಿಯ ತಮ್ಮನಪ್ಪ ವಿಶಾಖಭೂತಿಗಂ ಲಕ್ಷ್ಮಣಾದೇವಿಗಂ ವಿಶಾಖನಂದಿಯೆಂಬ ಮಗನಾಗಿ ಸುಖಮಾಗಿರ್ದೊಂದು ದಿವಸಂ ಮುಗಿಲ್ ಕರಗಿದುದಂ ಕಂಡು ವಿಶ್ವಭೂತಿ ತನ್ನನುಜಂಗೆ ರಾಜ್ಯಮಂ ಕೊಟ್ಟು ಮಗಂಗೆ ಯುವರಾಜ ಪದಮನಿತ್ತು ಶ್ರೀಧರಗುರುಗಳ ಪಕ್ಕದೇಟ್ನೂರ್ವರರಸುಗಳ್ವೆರಸು ತಪಂಬಡೆ, ತಮ್ಮಯ್ಯಂ ಪುಸಿಯ ಬೆಸನಟ್ಟಿ (ಬನಮಂ ವಿಶಾಖನಂದಿಗೆ) ಕೊಟ್ಟುದನಱಿದು, ವಿಶ್ವನಂದಿ ಮುನಿದುಬರೆ ವಿಶಾಖ ನಂದನೇಱಿ ಕಪಿತ್ಥ ದ್ರುಮಮಂ ಮುಱಿಗೊಳ್ವುದುಮುದಂ ಕೀೞ್ತೀಡಾಡೆಕಲ್ಲಕಂಬಮಂ ಮುಱಿ ಗೊಳ್ವುದುಮುದಂ ಕರಪ್ರಹಾರದಿಂಶತಚೂರ್ಣಂಮಾಡೆ ಮತ್ತಂ ಬೆಳ್ಕು ತೋರ್ಣಡುವ ವಿಶಾಖನಂದನಂ ಕಂಡು ಕರುಣಿಸಿ ಕರೆದು ರಾಜ್ಯಮನಾತಂಗೆ

ಕೊಟ್ಟು...ವಿಶ್ವನಂದಿ ಮುನಿಯುಂ ವಿಶಾಖಭೂತಿಯುಂ ಮಹಾಶುಕ್ರ ಸ್ವರ್ಗಮಂ ಪೊಂದಿದರ್. ಅಲ್ಲಿಂ ಬೞಿಯಂ ವಿಶಾಖಭೂತಿ ಪ್ರಜಾಪತಿ ಮಹಾರಾಜನ ಪಿರಿಯರಸಿ ಜಯಾವತಿಗೆ ವಿಜಯನೆಂಬ ಮಗನಾದೊಂ. ಕಿಱಿಯರಸಿ ಮೃಗಯಾವತಿಗೆ ವಿಶ್ವನಂದಿ ತ್ರಿಪಿಷ್ಟನೆಂಬ ಮಗನಾದೊಂ."

ಆಚಣ್ಣನ ವರ್ಧಮಾನ ಪುರಾಣದಲ್ಲಿ ಮೂರು ಆಶ್ವಾಸಗಳಲ್ಲಿ ವರ್ಣಿತವಾದ ಕಥೆ ಮೇಲಿನ ಗದ್ಯಭಾಗದಲ್ಲಿ ಅಡಕವಾಗಿದೆ. ಮೂಲಕ್ಕೆ ಕುಂದು ಬರದಂತೆ ಅತಿ ಸಂಕ್ಷಿಪ್ತವಾಗಿ ಹೇಳಿರುವುದರಿಂದ ಅನೇಕ ವಿವರಗಳನ್ನು ತುರುಕಿ ತುಂಬಿಸಿದಂತಿದೆ. ಜೈನಪುರಾಣ ಕಥೆಗಳ ಪರಿಚಯವಿಲ್ಲದವರಿಗೆ ಇದನ್ನು ಓದಿದರೆ ಅಷ್ಟು ರುಚಿಸೀತೆಂಬುದು ಕಷ್ಟ. ಭವಾವಳಿಯ ವಿಚಾರ, ನಿರ್ವೇಗ, ಪಾರಿವ್ರಜಕ ಇತ್ಯಾದಿ ಪುರಾಣದ ಭಾರವಿದ್ದರೂ, ವಿಶ್ವನಂದಿ ವಿಶಾಖನಂದರೊಡನೆ ನಡೆದ ಯುದ್ಧದ (ಪುಟ್ಟದಾದರೂ ಸ್ವಾರಸ್ಯವಾದ) ಚಿತ್ರದಂಥ ಮನೋಹರ ಚಿತ್ರಗಳು ಒಮ್ಮೊಮ್ಮೆ ಬಂದು ಚಾವುಂಡರಾಯನ ಕಥನ ಕೌಶಲಕ್ಕೆ ಸಾಕ್ಷ್ಯ ಕೊಡುತ್ತವೆ.

ಭಾಷಾಶಾಸ್ತ್ರ ದೃಷ್ಟಿಯಿಂದ ಚಾವುಂಡರಾಯ ಪುರಾಣದ ಗದ್ಯಕ್ಕೆ ಮಹತ್ವವುಂಟು. ಅಂದಿನ ಹಳಗನ್ನಡದಲ್ಲಿ 'ಮಗನಾದೊಂ' ಎಂಬಂಥ ಒಂದೊಂದು ಪೂರ್ವದ ಹಳಗನ್ನಡ ರೂಪವೂ ಉಳಿದುಕೊಂಡಿರುವುದನ್ನು ಗಮನಿಸಬಹುದು.

## ೪. ಚಿಕದೇವರಾಜ (೧೬೭೨-೧೭೦೪)

೧೫ನೆಯ ಶತಮಾನದ ಉತ್ತರಾರ್ಧದಿಂದ ನಡುಗನ್ನಡದ ಮುದ್ರೆ ಸಾಮಾನ್ಯ ಎಲ್ಲ ಉತ್ತಮಕೃತಿಗಳ ಮೇಲೂ ಬಿದ್ದಿತು. ಮಾತಿನ ಕನ್ನಡ ಬರಹಕ್ಕೇರಿತು. ಹಳಗನ್ನಡದ ಬಿಗುಹು ಶಿಥಿಲವಾಗುತ್ತಾ ಬಂದಿತು. ಈ ಸಂದರ್ಭದಲ್ಲಿ ಗದ್ಯವೂ ತನ್ನ ಸ್ವರೂಪದಲ್ಲಿ ವ್ಯತ್ಯಾಸಹೊಂದಿದುದು ಅನಿವಾರ್ಯ.

ವಚನಗಳನ್ನುಳಿದರೆ, ೧೭ನೆಯ ಶತಮಾನದವರೆಗಿನ ೫ ಶತಮಾನಗಳಲ್ಲಿ ಹೆಚ್ಚಾಗಿ ಹುಟ್ಟಿದ ಗದ್ಯರಚನೆಗಳೆಂದರೆ ಕನ್ನಡ ಅನುವಾದಗಳು, ಟೀಕೆಗಳು

ಮತ್ತು ವ್ಯಾಖ್ಯಾನಗಳು. ೧೭ ನೆಯ ಶತಮಾನದ ಅಂತ್ಯಭಾಗಕ್ಕೆ ಸೇರಿದ ಒಂದು ಗದ್ಯಭಾಗವನ್ನು ಗಮನಿಸೋಣ :

ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರವೆಂಬುದು ೧೬೭೫ರಲ್ಲಿ ಶಾಂತಲಿಂಗದೇಶಿಕನೆಂಬ ವೀರಶೈವ ಲೇಖಕನಿಂದ ರಚಿತವಾದ ಗದ್ಯಕೃತಿ.

"ಕಿಕ್ಕೇರಿಯಾರಾಧ್ಯ ನಂಜುಂಡೇಶನೆಂಬ ಶಿವಕವೀಶ್ವರನು ಪೇಳಿದ ಭೈರವೇಶ್ವರ ಕಾವ್ಯದಲ್ಲಿ ಸೂಚನೆಯಾಗಿರ್ದ ಕಥೆಗಳನ್ನು ವಿಶಾಲವಾಗಿ ಬರೆದು ಸಂಗ್ರಹಿಸು ಎಂದು ವಿರಕ್ತನಮುಶ್ಶೈವಾಯ ದೇವರು ನಿರೂಪಿಸೆ, ಅವರ ನಿರೂಪವಿಡಿದು....ಸಮಸ್ತ ಸಾಂಗತ್ಯಚಾರಿತ್ರ ಕಥೆಗಳಿಗೆ ಮಾತೃ ಸ್ಥಾನವಾಗಿರ್ಪ ಬಸವಾದಿ ಪುರಾತನರು ನಿರೂಪಿಸಿದ ಶೂನ್ಯಸಂಪಾದನೆ ಮೊದಲಾದ ವಚನಾಮೃತಸಾರದಲ್ಲಿ ಪೇಳುತ್ತಿರ್ದ ಕಥೆಗಳಂ ನೋಡಿ ಪುರಾತನರ ವಚನದ ಮೇಲ್ಪಂತಿವಿಡಿದು ಕಾವ್ಯದ ಕಥಾಸಂಗ್ರಹಕ್ಕೆ ಬೇಕಾದುವಂ ತೆಗೆದುಕೊಂಡು ಸಂಗ್ರಹಿಸಿದೆನು."[1]

ಈ ಗದ್ಯಭಾಗದ ಭಾಷೆ ನಿರ್ದುಷ್ಟವಾಗಿದೆ; ಅರ್ಥ ಸುಸ್ಪಷ್ಟವಾಗಿದೆ. ವಾಕ್ಯರಚನೆ ಉದ್ದವಾಗಿ ಹಳಗನ್ನಡ ಕ್ರಮವನ್ನೇ ಹೋಲುತ್ತದೆ. ಆದರೆ ಭಾಷೆಯಲ್ಲಿನ ಶಬ್ದರೂಪಗಳು ಮತ್ತು ಪ್ರತ್ಯಯಗಳು ಹಳಗನ್ನಡಕ್ಕೂ ನಡುಗನ್ನಡಕ್ಕೂ ನಡುವಿನಲ್ಲಿ ನೇತಾಡುತ್ತವೆ. ದ್ವಿತೀಯಾ ವಿಭಕ್ತಿ ಪ್ರತ್ಯಯಗಳು ಹಳಗನ್ನಡದವು—ಕಥೆಗಳಂ, ಬೇಕಾದುವಂ ಎಂಬುದಾಗಿಯೂ, 'ಕಥೆಗಳನ್ನು' ಎಂಬ ನಡುಗನ್ನಡ—(ಹೊಸಗನ್ನಡದಲ್ಲಿಯೂ ಈಗ ಇರುವ) ರೂಪದಲ್ಲಿಯೂ ಕಾಣಬಹುದು. 'ಕಾವ್ಯದಲ್ಲಿ' ಎಂಬ ಪ್ರಯೋಗವು ನಡುಗನ್ನಡ—ಹೊಸಗನ್ನಡಗಳ ನಡುವೆ ತೂನೆಯುತ್ತದೆ. ತೀರ ನಡುಗನ್ನಡವಾಗಿದ್ದರೆ 'ಕಾವ್ಯದೊಳು' ಎಂದಿರಬಹುದಾಗಿತ್ತು. ಹಾಗೆಯೇ 'ಕವೀಶ್ವರನು' 'ದೇವರು' 'ಸಂಗ್ರಹಿಸಿದೆನು' ಎಂಬ ಸ್ವರಾಂತರೂಪಗಳು ಹಳಗನ್ನಡವಲ್ಲ. 'ಹ' ಕಾರದ ಬದಲು ಹಳಗನ್ನಡದ 'ಪ'ಕಾರ ('ಪೇಳಿದ') ವನ್ನೇ ಉಳಿಸಿಕೊಂಡಿದೆ. ಇಂಥ

---

[1] ಕ. ಕ. ಚ., ಸಂ. II, ಪು. ೪೫೫

ಮಿಶ್ರವನ್ನು ಈ ಶತಮಾನಗಳ ಗದ್ಯದಲ್ಲಿ ಕಾಣಬಹುದು. ಆದರೂ ಗದ್ಯವು ಶಕ್ತಿಯುತವಾಗಿತ್ತು.

ಈ ಸನ್ನಿವೇಶದಲ್ಲಿ ಹಳಗನ್ನಡ ಗದ್ಯರಚನೆಯ ಪರಂಪರೆಯನ್ನುಳಿಸಿಕೊಳ್ಳಬೇಕು, ಆದರಲ್ಲಿ ಒಂದು ಗಭೀರತೆಪೂರ್ಣವಾದ ರಮಣೀಯತೆ ಉಂಟೆಂಬುದರಿಂದಲೋ ಏನೋ ಮೈಸೂರ ಚಿಕದೇವರಾಜನ (೧೬೭೨–೧೭೦೪) ಕೃಪಾಪೋಷಣೆಯಲ್ಲಿ ಕೆಲವರು ಉಭಯ ಭಾಷಾಪಾಂಡಿತ್ಯವಿದ್ದ ಕವಿಗಳು ಮತ್ತೊಮ್ಮೆ ಚಂಪೂರೂಪವಾಗಿಯೂ ಹಳಗನ್ನಡ ಗದ್ಯರೂಪವಾಗಿಯೂ ಗ್ರಂಥಗಳನ್ನು ರಚಿಸಿದರು. ಚಿಕದೇವರಾಜನೇ ಸ್ವತಃ ಕವಿಯಾಗಿದ್ದನು.

ಆತನು ಚಿಕದೇವರಾಜ ಬಿನ್ನಪವೆಂಬ ಗದ್ಯಗ್ರಂಥವನ್ನು ಬರೆದನು. ಇದರಲ್ಲಿ ಮೇಲುಕೋಟೆಯ ನಾರಾಯಣಸ್ವಾಮಿಯ ಸನ್ನಿಧಿಯಲ್ಲಿ ೩೦ ಬಿನ್ನಹಗಳನ್ನು ಮಾಡಿಕೊಂಡಂತಿದೆ. 'ಅಕ್ಕರಮನಱಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ತ್ವಜ್ಞಾನಮಪ್ಪುದರಿದು ಎಂದುವೆಲ್ಲರುಮಱಿವಂತೆ ಕನ್ನಡವಾತಿನೊಳಂ ಮೆಲ್ನುಡಿಗಳಿಂದೆ ಅಖಿಲ ತತ್ತ್ವಾರ್ಥಂಗಳಂ ಸಂಗತಿಗೊಳಿಸಿ' ಹೇಳಿರುವುದಾಗಿ ಕಾವ್ಯೋದ್ದೇಶವನ್ನು ಬಹಳ ಸುಂದರವಾಗಿ ತಿಳಿಸಿದ್ದಾನೆ. ಈ ಬಿನ್ನಹಗಳು ಹಳಗನ್ನಡದಲ್ಲಿದ್ದರೂ ಸಂಸ್ಕೃತಮಯವಾಗಿಲ್ಲ; 'ಅಕ್ಕರಮನಱಿಯದೆ ಒಕ್ಕಲಿಗರ್ಗಂ ಪೆಣ್ಗಳ್ಗಂ' ಸ್ವಲ್ಪ ಶ್ರಮಪಟ್ಟರೆ ಅರ್ಥವಾಗುವಂತೆ ಭಕ್ತಿರಸಭರಿತವಾಗಿವೆ.

## ೫. ತಿರುಮಲಾರ್ಯ (೧೬೪೫–೧೭೦೬)

ಚಿಕದೇವರಾಜನ ಆಸ್ಥಾನಕವಿಯೂ ಮಂತ್ರಿಯೂ ಆಗಿದ್ದ ಈ ಸವ್ಯಸಾಚಿಯು ಅಪ್ರತಿಮವೀರಚರಿತೆ, ಚಿಕದೇವರಾಜವಿಜಯ, ಚಿಕದೇವರಾಜ ವಂಶಾವಳಿ ಇತ್ಯಾದಿ ಉತ್ತಮವೂ ವೈಶಿಷ್ಟ್ಯಪೂರ್ವಕವೂ ಆಗಿರುವ ಕೃತಿಗಳನ್ನು ರಚಿಸಿದ್ದಾನೆ. ಪ್ರಸ್ತುತದಲ್ಲಿ ಆತನ ಹಳಗನ್ನಡ ಗದ್ಯಕೃತಿಯಾದ —ಅಂದಿನ ಕೃತಿತಿಲಕವೆನ್ನಿಸಿಕೊಳ್ಳಬಹುದಾದ—'ಚಿಕದೇವರಾಜ ವಂಶಾವಳಿ'ಯ ವಿಷಯ ಒಂದಿಷ್ಟು ಅರಿತುಕೊಳ್ಳೋಣ. ಎರಡನೇ ಶತಮಾನಗಳ

ಹಿಂದಿನ ಈ ಕೃತಿಯು ಸಮಗ್ರವಾಗಿ ದೊರೆತಿಲ್ಲವೆಂಬುದು ಶೋಚನೀಯ. ಇದರಲ್ಲಿ ಮೈಸೂರರಸರ ಚರಿತ್ರೆ ರಾಜನೃಪನಿಂದ ಹಿಡಿದು ಚಿಕದೇವರಾಜನವರೆಗೆ ಹೇಳಲ್ಪಟ್ಟಿದೆ. ಪ್ರಸಿದ್ಧ ಘಟನೆಗಳು ಬಂದಿವೆ. ಅಲ್ಲಲ್ಲಿ ವಿಶಿಷ್ಟಾದ್ವೈತ ಮತಸಾರವೂ ನುಸುಳಿಕೊಂಡಿದೆ ಕೃತಿಯು ಕೆಲವೆಡೆ ಕಾವ್ಯಮಯವಾಗಿ ಸಾಗುತ್ತದೆ. 'ಚರಿತ್ರ, ಮತತತ್ವ, ಕಾವ್ಯ ಇವುಗಳಮುಪ್ಪುರಿಯೇ ಚಿಕದೇವ ರಾಜ ವಂಶಾವಳಿ'[1] ಎಂಬುದು ಸರಿಯಾಗಿ ಅನ್ವಯಿಸುತ್ತದೆ. ತನ್ನ ಪ್ರತಿಭೆ ಪಾಂಡಿತ್ಯ ಕವಿತಾಶಕ್ತಿಗಳಿಂದ ತಿರುಮಲಾರ್ಯನು ಈ ಉತ್ತಮ ಗದ್ಯ ಕೃತಿಯ ಮೂಲಕ ಮತ್ತೊಮ್ಮೆ ಹಳಗನ್ನಡದ ಧ್ವಜವನ್ನು ಹಾರಿಸಿದನು. ಹಳಗನ್ನಡದ ಗದ್ಯವಾಙ್ಮಯಕ್ಕೆ ಚಿಕದೇವರಾಜ ವಂಶಾವಳಿಯು ಒಂದು ಅದ್ವಿತೀಯವಾದ ಕಾಣಿಕೆ ಅದರಿಂದ ಆಯ್ದುಕೊಂಡ ಒಂದ ಪುಟ್ಟ ಭಾಗ :

ಈ ರಾಜನೃಪಂ ಅವರೊಳ್ (ಬೇಹಿನವರೊಳ್) ದಯಾವಲೋಕ ನಮಂ ಸುಱಿಸಿ, "ಅಪ್ರಿಯಮಾದೊಡಂ, ಗ್ರಾಮ್ಯಮಾದೊಡಂ, ಪಱವಾದೊಡಂ, ಪರಿಹಾಸಮಾದೊಡಂ, ಇರ್ದುದನಿರ್ದಂತೆ ಅರಸಂಗೆ ಒಳ ಓಲಗದೊಳಱಿಪುವುದೆ ದೂತರ್ಗೆ ನೀತಿ ನೀಮದಱಿಂ ಬೆರ್ಚದೆ ಬಿತ್ತರಿಪುದು" ಎಂದಾಣತಿಯಾವುದು ಮವರ್ ಬಿನ್ನವಿಸಿದರ್—ಅದೆಂತೆನೆ—

"ಆ ರಾಯಂ ಚಲ್ವಂ ಪಡೆದ ಕಡುಪಿಂ ಮಡದಿಯನೊಡನಾಟದೊಳೆಡೆ ವಿಡಿದಿರ್ದು ಕಂಟಕಶೋಧನಪ್ರಜಾಪಾಲನದಂಡಯಾತ್ರಾದಿಕ್ಷಾತ್ರಸ್ವಭಾವ ಕರ್ಮಮಂ ತತ್ತಧಿಕಾರಿಗಳ್ಗೊಪ್ಪಿಸಿರ್ಪಂ. ಅನುಚರರುಮಾ ಕಾರ್ಯದೊಳ್ನೆರ ವೆನಿಪ್ಪ ವೃಷ್ಯೌಷಧ ಮಂತ್ರ ತಂತ್ರ ಘುಟಿಕಾ ಮೂಲಿಕಾ ಸ್ರಕ್ಚಂದನಾದಿ ವಸ್ತು ಸಂಪಾದನನಿಪುಣರೆನಿಸಿ ವಿಟವಿದೂಷಕ ಪ್ರಾಯರಾಗಿರ್ಪರ್. ಸೇನಾನಿ, ಆನೆ ಕುದುರೆ ಕಾಲಾಳ್ಗಳನೊಳ್ಗುಗೆಯ್ದು ದಂಡೆತ್ತುವ ಯತ್ನಮನುಱಿದು ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದಪೆನೆಂದು ದಡಿವಲೆಗಳಂ, ಬಡಿಕೋಲ್ಗಳಂ, ಅಂಟುಗಳೆಗಳಂ, ಕಾಲ್ಗಣ್ಣಿಗಳಂ, ಗಿಡುಗ ಸಾಳುವ ಜಾಯಿಲಂ

---

[1] ಕ. ಸಾ. ಚ., ಪು. ೩೦೬—ಮಾಳವಾಡ, ಸ. ಸ., ಉದ್ಧೃತ.

ಗಳಂ, ದೀಹದ ಮಿಗವಕ್ಕಿಗಳಂ ತರಿಸಿರಿಸಿ ಪರಿಕಿಪ ವ್ಯಾಪಾರದೊಳ್ ಬೇಡವಡೆ ಯೊಳೊಡವೆರೆದಿರ್ಪಂ. ಮಿತ್ರರೊಳುತ್ತಮರ್ ಈಯಿರ್ಕೆ ತಕ್ಕುದಲ್ತೆಂದು ಪಲರ್ಕ್ಕೆ ತಿಳಿಸಿ ತಮ್ಮ ನುಡಿ ಬರಡಾದುದಱಿಂ ಬಗೆದೆಗೆದಿರ್ಪರ್...." (ರಾಜನೃಪ ಚರಿತೆ ಯಿಂದ).

## ೬. ಮುಮ್ಮಡಿ ಕೃಷ್ಣರಾಜ (೧೭೯೪–೧೮೬೮)

ಚಿಕದೇವರಾಯನಂತೆ ಕನ್ನಡ ಸಾಹಿತ್ಯಕ್ಕೆ ಪೋಷಕನಾದ ಮುಮ್ಮಡಿ ಕೃಷ್ಣರಾಜನ ಆಶ್ರಯದಲ್ಲಿ ೧೯ನೆಯ ಶತಮಾನದಲ್ಲಿ ಮತ್ತೊಮ್ಮೆ ಕನ್ನಡ ಸಾಹಿತ್ಯ ಸುಗ್ಗಿಯನ್ನು ಕಾಣಬಹುದು. ಹೊಸಗನ್ನಡ ಭಾನುವು ಉದಯಿಸುತ್ತ ಲಿದ್ದನು. ಗದ್ಯ ರಚನೆಗಳು ಅಧಿಕವಾಗಿ ಹುಟ್ಟುತ್ತಿದ್ದುವು. ಯಕ್ಷಗಾನಗಳು ತಲೆದೋರಿದವು. ಹಾಡು, ಲಾವಣಿ, ನಾಟಕ ಮೊದಲಾದ ವಿವಿಧ ಜನಪ್ರಿಯ ರೂಪಗಳು ಮೈವೆತ್ತುವು. ಮುಮ್ಮಡಿ ಕೃಷ್ಣರಾಜನು ತಾನೇ ಸ್ವತಃ ಕವಿ ಯಾಗಿದ್ದು ಸುಮಾರು ೫೦ ಕೃತಿಗಳನ್ನು ರಚಿಸಿದನೆಂಬ ಹೇಳಿಕೆಯಿದೆ. ಹಾಗೆಯೇ ಆ ಕಾಲದಲ್ಲಿದ್ದ ಅಳಿಯ ಲಿಂಗರಾಜನು (೧೮೨೩–೧೮೭೪) ಸುಮಾರು ೪೭ ಗ್ರಂಥ ಗಳನ್ನು ಬರೆದಿರುವನಂತೆ.

ಈ ಅವಧಿಯಲ್ಲಿ ರಚಿತವಾದ ಗದ್ಯಗ್ರಂಥಗಳಲ್ಲಿ ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩) ತನ್ನದೇ ಆದ ಕಥನ ರೀತಿಯಿಂದ ಜನರ ಆದರಕ್ಕೆ ಪಾತ್ರವಾಗಿದೆ. 'ಮುದ್ರಾರಾಕ್ಷಸ'ದೊಳಗಣ ವಸ್ತುವಿಗೆ ಒಂದು ಹೊಸ ರೂಪವನ್ನು ಕೊಟ್ಟು ಸ್ವಾರಸ್ಯವಾಗಿ ಬರೆದಿರುವನು. ಭಾಷೆಯಲ್ಲಿಯೂ ನಮ್ಮ ಇಂದಿನ ಹೊಸಗನ್ನಡ ರೂಪವನ್ನು ಅಲ್ಲಲ್ಲಿ ಕಾಣಬಹುದು. ಕೆಲವು ಹಳಗನ್ನಡ ಪ್ರತ್ಯಯಗಳನ್ನೂ ನಡುಗನ್ನಡ ಅಂಶಗಳನ್ನೂ ಕಾಣುತ್ತೇವೆ. ಇಲ್ಲಿ ಹಳೆ–ನಡು–ಹೊಸತುಗಳ ತ್ರಿವೇಣಿಯುಂಟು. ಗದ್ಯವು ನವಚೈತನ್ಯ ದಿಂದ ಮುಂದಡಿಯಿಡುವ ಶುಭಲಕ್ಷಣಗಳನ್ನು ಕಾಣುತ್ತೇವೆ. ಕಥನವು ನಿರರ್ಗಳವಾಗಿ ಓಡುತ್ತಿದೆ; ಕಟ್ಟುಪಾಡುಗಳಿಗೆ ಒಳಗಾಗದ ಸ್ವಾತಂತ್ರ್ಯದ ದಟ್ಟಡಿಗಳಿಂದ ಸಾಗುತ್ತಿದೆ. ಸಂಸ್ಕೃತಪ್ರಚುರವಾದ ಬಿಗು ಒಮ್ಮೊಮ್ಮೆ ಕಂಡರೂ, ಶೈಲಿಯಲ್ಲಿ ಲಾಲಿತ್ಯವಿದೆ. ಒಂದು ಉದಾಹರಣೆ: "ಹೀಗೆ

ನ್ಯಾಯನೀತಿಯು ತಪ್ಪದೆ, ಸ್ತ್ರೀ ಮದ್ಯಾದಿಗಳಿಗೆ ವಶ್ಯನಾಗದೆ; ರಾಜ್ಯಮಂ ಪಾಲಿಸುತ್ತಿರುವ ನಿನ್ನ ಚಿತ್ತಸ್ಥೈರ್ಯದಂತೆ ಸಾಮ್ರಾಜ್ಯ ಲಕ್ಷ್ಮಿಯು ಸ್ಥಿರವಾಗಿ ನಿನ್ನನ್ನಗಲದೆ ಇರುವಳು. ಈ ಅರ್ಥವೆಲ್ಲವೂ ದಂಡನೀತಿಜ್ಞರಾದ ಪಂಡಿತರಿಗಭಿಮತವು; ಧರ್ಮಾದಿ ಪುರುಷಾರ್ಥಗಳು ಕೈಸೇರುವುವು; ಇದಂ ಪಠಿಸುವವನು ಅಲ್ಪಮೇಧಾವಿಯಾದವನಾದರೂ ಬುದ್ಧಿಸಂಪನ್ನನಹನು; ಮನಕ್ಕೆ ತಂದವನು ಲೋಕವ್ಯವಹಾರವನ್ನರಿವನು....ಈ ನೀತಿಯು ರಾಜಮಂತ್ರಿಗಳಿಂದ ಅವಶ್ಯಕವಾಗಿ ತಿಳಿದು ಆಚರಿಸಲ್ತಕ್ಕದ್ದು" ಎಂದು ಹೇಳುತ್ತಿರುವ ಚಾಣಕ್ಯನ ವಾಕ್ಯಮಂ ಕೇಳಿ ಚಂದ್ರಗುಪ್ತನು ಸಂತೋಷಭರಿತನಾಗಿ, ಇಂತೆಂದನು.

## ೭. ಮುದ್ದಣ (೧೮೬೯–೧೯೦೧)

ಗದ್ಯಸುಖಕ್ಕೆ ಮನಸೋತು 'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ, ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು' ಎಂಬುದಾಗಿ ಪಣತೊಟ್ಟು ಮುದ್ದಣನು 'ಶ್ರೀರಾಮಾಶ್ವಮೇಧ'ವೆಂಬ ಹಳಗನ್ನಡ ಗದ್ಯಕಾವ್ಯವನ್ನು ರಚಿಸಿದನು. ಇದು ಈ ಶತಮಾನದ ಆದಿಯಲ್ಲಿ ಹುಟ್ಟಿದ ಗ್ರಂಥ. ಪ್ರಸ್ತುತಕ್ಕೆ ಹಳಗನ್ನಡ ಗದ್ಯಾಶ್ರಮ ಗುರುಪದ ಕೃತಿಗಳಲ್ಲಿ ಇದು ಕೊನೆಯ ರಚನೆಯೆನ್ನಬಹುದು. ಕಾಲಾವಧಿಯಲ್ಲಿ ಕೊನೆಯದಾದರೂ ಕೃತಿಯು ಬೆಲೆ ಕಿರಿದಲ್ಲ.

ಮುದ್ದಣನ ನಿಜವಾದ ಹೆಸರು ಲಕ್ಷ್ಮೀನಾರಾಯಣನೆಂದು, ೧೮೬೯ ರಲ್ಲಿ ಉಡುಪಿಯ ನಂದಳಿಕೆ ಗ್ರಾಮದಲ್ಲಿ ಬಡ ಕುಟುಂಬದಲ್ಲಿ ಜನಿಸಿದನು. ಸರಸ್ವತಿಯ ಕೃಪಾಕಟಾಕ್ಷಕ್ಕೆ ಪಾತ್ರನಾದ ಈ ಕವಿಯು ಬಡವನಾಗಿಯೇ ಬಾಳಿ ಬಡವನಾಗಿಯೂ ರೋಗಗ್ರಸ್ತನಾಗಿಯೂ ತನ್ನ ೩೨ನೆಯ ವಯಸ್ಸಿನಲ್ಲಿ ಅಕಾಲಮರಣಕ್ಕೆ ತುತ್ತಾದನು. ಪ್ರತಿಕೂಲ ಪರಿಸ್ಥಿತಿಯಿಂದ ಹೇಳುವಂಥ ವಿದ್ಯಾಭ್ಯಾಸ ಶಾಲೆ ಕಾಲೇಜುಗಳಲ್ಲಿ ಲಭಿಸಲಿಲ್ಲ. ಸ್ವತಃ ಪ್ರತಿಭಾಶಾಲಿ; ಸ್ವಪ್ರಯತ್ನದಿಂದಲೇ ಪಾಂಡಿತ್ಯ ಗಳಿಸಿದನು. ಜೀವನಕ್ಕೆ ವ್ಯಾಯಾಮ ಶಿಕ್ಷಕನಾಗಿ ದುಡಿದನು. ಕಡಮೆ ಸಂಬಳದ—ಕನ್ನಡ ಸಾಹಿತ್ಯಕ್ಕೆ ಯಾವ

ಸಂಬಂಧವೂ ಇಲ್ಲದ ಉದ್ಯೋಗದಲ್ಲಿರುತ್ತಾ ಕನ್ನಡ ದೀಕ್ಷೆಯನ್ನು ಕೈಕೊಂಡನು. ಆರಂಭದಲ್ಲಿ ಯಕ್ಷಗಾನ ಪ್ರಸಂಗರಚನೆಯಲ್ಲಿ ಪ್ರಯೋಗ ನಡೆಸಿದನು. ಅದ್ಭುತ ರಾಮಾಯಣವೆಂಬ ಉತ್ತರಕಾಂಡರಾಮಾಯಣದ ಕಥಾವಸ್ತುವನ್ನೊಳಗೊಂಡ ಗದ್ಯಕೃತಿಯನ್ನು ಹಳಗನ್ನಡದಲ್ಲಿ ಬರೆದನು. ಇದರಲ್ಲಿ ಮತ್ತಿನ ಶ್ರೀರಾಮಾಶ್ವಮೇಧದ ಪಕ್ವತೆ ಕಂಡುಬರುವುದಿಲ್ಲ; ಆದರೂ ಸರಳ ಸುಂದರವಾಗಿದೆ. ಶ್ರೀರಾಮಪಟ್ಟಾಭಿಷೇಕವೆಂಬೊಂದು ಖಂಡಕಾವ್ಯವನ್ನು (ಶೇಷರಾಮಾಯಣದ ಆಧಾರದ ಮೇಲೆ) ಷಟ್ಪದಿಯಲ್ಲಿ ಬರೆದನು. ಇಷ್ಟಕ್ಕೆ ಮುದ್ದಣನು ಚಿರಸ್ಮರಣೀಯನಾಗುತ್ತಿದ್ದಿಲ್ಲ; ಆತನ ಶ್ರೀರಾಮಾಶ್ವಮೇಧವು ಹಳಗನ್ನಡದ ಗದ್ಯವಾಙ್ಮಯಕ್ಕೆ ಒಂದು ಅಪೂರ್ವ ಕಾಣಿಕೆಯಾಗಿ ಸಂದಿತು; ಇದರಿಂದ ಹಳಗನ್ನಡ ಗದ್ಯಾಶ್ರಮದಲ್ಲಿ ಮುದ್ದಣನಿಗೂ ಒಂದು ಭದ್ರವಾದ ಸ್ಥಾನವೇರ್ಪಟ್ಟಿತು.

ಶ್ರೀರಾಮಾಶ್ವಮೇಧದ ಧಾಟಿ ಹಳೆಯದಾದರೂ, ಕೆಲವು ಹೊಸ ಮಟ್ಟುಗಳನ್ನು ಈತನು ತಂದನು. ಕಥಾನಿರೂಪಣೆಯಲ್ಲಿ ಒಂದು ನವೀನತೆಯನ್ನು ಇವನು ತೋರಿಸಿರುವನು. ಕಥಾಮುಖವನ್ನು ನವೀನ ರೀತಿಯಲ್ಲಿ ಪ್ರಾರಂಭಿಸಿರುವನು: "ಓವೋ ಕಾಲಪುರುಷಂಗೆ ಗುಣಮಣಮಿಲ್ಲಂ ಗಡ; ನಿಸ್ತೇಜಂ ಗಡ! ಒಡಲೊಳ್ ಗುಡುಗುಟ್ಟುಂಗುಂ ಗಡ! ಏನರಮನೆ ವಾಗಿಲಂ ಮುಗಿಲ್ದೆರೆಯಿಂ ಬಾಸಣಿಸಿರ್ಪರ್....ಸುಗ್ಗಿಯೊಳುಂಡುದಂ ಕಾರೊಳ್‌ಕಾಟುವ ನಕ್ಕುಂ." ಇಲ್ಲಿ ಪುರಾಣ ಸಂಪ್ರದಾಯವನ್ನು ತೀರ ಬಿಟ್ಟು ಹೊಸ ಮಟ್ಟನ್ನು ಹಾಕಿದ್ದಾನೆ. ಗ್ರಂಥದ ಉದ್ದಕ್ಕೂ–ಕಥೆಯ ಓಟ ಕುಂಟುವಲ್ಲಿ–ಸಂದರ್ಭೋಚಿತವಾದ ಮುದ್ದಣ ಮನೋರಮೆಯರ ಸ್ವಾರಸ್ಯವಾದ ಸಂವಾದಗಳು ಬಂದು ಕಥೆಯ ನೀರಸತೆಯನ್ನು ಹೋಗಲಾಡಿಸಿ ಓದುಗರನ್ನು ರಸದೋಕುಳಿಯಲ್ಲಿ ಬಿಡುವುವು. ಮತ್ತೆ ನವಸ್ಫೂರ್ತಿಯಿಂದ ಕಥೆ ಸಾಗುವುದು. ಈ ಸಂವಾದಗಳಲ್ಲಿ ತಿಳಿಯಾದ ಹಾಸ್ಯದ ಹೊನಲೇ ಹೆಚ್ಚಾಗಿ ಹರಿಯುವುದು. ಈತನು ವರ್ಣನೆಗಳನ್ನು ಚೆನ್ನಾಗಿ ಮಾಡಿದ್ದಾನೆ, ಈತನ ಮಾತುಗಳಲ್ಲಿ ಉಕ್ತಿಗೌರವ ಅರ್ಥಚಮತ್ಕಾರಗಳನ್ನು ಕಾಣುತ್ತೇವೆ. ಪಾತ್ರ ನಿರ್ಮಾಣದಲ್ಲಿ ಯಶಸ್ವಿಯಾದಷ್ಟು ಸನ್ನಿವೇಶ ರಚನೆಯಲ್ಲಿ ಆಗಲಿಲ್ಲ. ಸನ್ನಿವೇಶ ರಚನೆ

ಅಷ್ಟು ಸುಂದರವಾಗದಿದ್ದುದಕ್ಕೆ ಆತನು ಅನುಸರಿಸಿದ ಮೂಲವೂ ಸ್ವಲ್ಪ ಮಟ್ಟಿಗೆ ಕಾರಣವಾಗಿರಬಹುದು. ಯಾವ ಕಾರಣದಿಂದಲೋ ಆತನು ವಾಲ್ಮೀಕಿ ರಾಮಾಯಣದ ಉತ್ತರಕಾಂಡದಲ್ಲಿ ಹೇಳಲ್ಪಟ್ಟ ರಾಮಾಶ್ವ ಮೇಧ ಕಥೆಯನ್ನು ಅನುಸರಿಸದೆ ಪದ್ಮಪುರಾಣದೊಳಗಿನ ಕಥೆಯನ್ನು ಅನುಸರಿಸಿರುವನು. ಆದುದರಿಂದ ಮಹಿಮಾನಿರ್ಮಾಣಕ್ಕಾಗಿ ಸನ್ನಿವೇಶಗಳಲ್ಲಿ ಸಹಜತೆ ದೂರವಾಗುವುದು ಅನಿವಾರ್ಯವಾಯಿತೆನ್ನಬಹುದು. ಅಶ್ವಮೇಧದ ಕುದುರೆಯು ಪರ್ಯಟನದಂತೆ ಕಥೆಯೂ ಎಲ್ಲೆಲ್ಲೊ ಕವಲುಕವಲಾಗಿ ಗೊತ್ತುಗುರಿಯಿಲ್ಲದೆ ಹೋಗುತ್ತಾ ಒಮ್ಮೊಮ್ಮೆ ಬೇಸರಿಕೆಯನ್ನುಂಟುಮಾಡು ವುದು.

ಮುದ್ದಣನು ಚಿತ್ರಿಸಿದ ರಾಮನು ಸ್ವಲ್ಪ ಕಾಂತಿಹೀನನೆಂದೇ ಹೇಳ ಬೇಕು. ಮನೋರಮೆಯ ಮುಖಾಂತರ ರಾಮನನ್ನು ಒಮ್ಮೊಮ್ಮೆ ಸರಿ ಯಾಗಿ ಹಂಗಿಸಿಬಿಡುವನು. ಮುದ್ದಣನು "ಸಾಕೇತ ನಗರದೊಳ್ ಸೀತಾ ರಾಮಂ ತನ್ನ ಬಿರ್ದಿನ...." ಎನ್ನುವಾಗ ಮನೋರಮೆ ನಡುವೆ ಬಾಯಿ ಹಾಕಿ, "ನಲ್ಲ, ಏ ಮಾತೊ? ಸೀತೆಯೆನುಂತುಟಿದುಮೇತಱ ಸೀತಾ ರಾಮಂ. ಪೋಮಾಣ್, ಅವಂಗಿನ್ನೆತ್ತಣಸೀತೆ, ಅಪ್ಪೊಡಿನ್ನಾ ಕಲ್ಲೆರ್ದೆಯಂ ರಾಮನೊ ಭೀಮನೊ ಏನ್ ?" ಎಂದು ಮುಂತಾಗಿ ಸಂವಾದಿಸಿ ಸೀತೆಯ ಪಕ್ಷವನ್ನು ವಹಿಸುವುದು ಬಹಳ ಸ್ವಾರಸ್ಯವಾದರೂ ಸೀತಾರಾಮನ ಕಾಂತಿ ಕುಂದುವುದು. ಸೀತಾಪರಿತ್ಯಾಗಕ್ಕೆ ಮುಂಚಿತವಾಗಿ 'ಸೀತೆಗೆ ನೀರ್‌ನಿಂದು ದಿನಕ್ರಮದಿಂ ಬಸಿಱ್ ಬಳೆಯುವುದಕ್ಕೆ' ಮುಂಚಿತವಾಗಿ ಮಕ್ಕಳ ಬಯಕೆ ಯಿಂದ ಜಾನಕಿಯು ಸಖಿ ಚಂದ್ರಮತಿಯೊಡನೆ ಆಡಿದ ಮಾತುಗಳು ಬಹಳ ಮನೋಹರವಾಗಿ ಸೀತೆಯ ಚಿತ್ರಕ್ಕೆ ಸ್ತ್ರೀಸಹಜ ಶೋಭೆಯನ್ನು ಕೊಟ್ಟಿವೆ. "ಇಲ್ಲಿನ ಪಾತ್ರಗಳಲ್ಲೆಲ್ಲಾ ಲಕ್ಷ್ಮಣನ ಪಾತ್ರವೇ ಅತ್ಯಂತ ಸುಂದರವಾಗಿ ಚಿತ್ರಿತವಾಗಿರುವುದು. ಆತನ ನಡವಳಿಕೆಯನ್ನು ಕಂಡು ನಾವು ಆರ್ದ್ರಹೃದಯ ರಾಗಿ ಆತನನ್ನು ಬಾಯ್ತುಂಬ ಹೊಗಳಬೇಕೆಂದುಕೊಳ್ಳುತ್ತೇವೆ"[1] ರಾಮನ

---

[1] ತ. ಸು. ಶಾಮರಾಯ, ಮುದ್ದಣ, ಪು. ೩೪.

ಆಜ್ಞಾನಿರ್ವಹಣೆಯನ್ನು ಮಾಡಬೇಕಾದರೆ ಅವನು ಪಡುವ ಮನೋವೇದನೆ ವರ್ಣನಾತೀತವಾಗಿದೆ. ಏನೊಂದೂ ಶಂಕಿಸದ ಸೀತಾಮಾತೆಯೊಡನೆ ಅವನು ದಾರುಣವಾರ್ತೆಯನ್ನುಸಿರಿದುದು ಅವನ ಅವಸಾನವನ್ನೇ ಉಸಿರಿದಂತೆ ಭಾಸವಾಗುವುದು. 'ಇಂತು ಲಕ್ಷ್ಮಣಂ ಪಾಷಾಣಕಠಿನ ಹೃದಯನಾದನ್ನಸೆ ಎಂತುಂ ಕುಱು ಪೋದುದೆ, ಮಮ್ಮಲ ಮಱುಗಿದಂ, ನೊಂದಂ ಬೇಂದಂ' ಮುಂದೆ ಸೀತೆ "ಬಿಱುಗಾಳಿಯ ಪೋಯಿಗರೆಮುಱಿದು ಬಾಡುವ ಕಪ್ಪುರ ವಾಟಿಯಂತೆ . . . ಹಮ್ಮ್ರದಂಬೋದಳ್" . . . ಇತ್ಯಾದಿ ವರ್ಣನೆಯಲ್ಲಿ ಲಕ್ಷ್ಮಣನ ಮನಸ್ಸಿನೊಳಗಣ ಹೊಯ್ದಾಟವು ಬಹಳ ಮನೋಹರವಾಗಿ ಚಿತ್ರಿತವಾಗಿದೆ. ಇಲ್ಲಿ ಮುದ್ದಣನು ಲಕ್ಷ್ಮೀಶನ ಭಾವನೆಗಳನ್ನು ಇಡಿ ಇಡಿ ಯಾಗಿ ಉಪಯೋಗಿಸಿಕೊಂಡಿರುವುದನ್ನು ಕಾಣಬಹುದು. (ಉದಾ : ಬಿರು ಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿಮುರಿದಿಳೆಗೊರಗುವಂತೆ, ಲಕ್ಷ್ಮಣನ ಮಾತು ಕಿವಿಡೆರೆಗೆ ಬೀಳದ ಮುನ್ನ ಬಿದ್ದಳಂಗನೆ ಧರೆಗೆ ನಡುನಡುಗುತ" ಇತ್ಯಾದಿ) ಆದರೆ ಎಲ್ಲವನ್ನೂ ತನ್ನದೇ ಆದ ಹೃದ್ಯವಾದ ಗದ್ಯದಲ್ಲಿ ಹೇಳುವುದು ಚೆನ್ನು.

'ರಾಮಾಶ್ವಮೇಧ'ವು ಅಷ್ಟು ಹೃದ್ಯವಾಗುವುದಕ್ಕೆ ಪ್ರಬಲವಾದ ಕಾರಣ ಅದರೊಳಗಣ ಕಥಾವಸ್ತುವಲ್ಲ; ಅದರೊಳಗೆ ಆದಿಯಿಂದ ಅಂತ್ಯದವರೆಗೂ ಅಲ್ಲಲ್ಲಿ ಬರುವ ಮುದ್ದಣ ಮನೋರಮೆಯರ ಸಂಭಾಷಣೆ. ಅಂಥ ರಸಿಕತೆಯ ಸಾಹಿತ್ಯರಚನೆ ಕನ್ನಡ ಸಾಹಿತ್ಯದಲ್ಲಿ ಅದೇ ಮೊದಲು. ಈ ರಸಿಕ ದಂಪತಿಗಳ ಮಾತು ಮೊದಲಾಯಿತೆಂದರೆ, ವಾತಾವರಣವೇ ವಿದ್ಯುನ್ಮಯವಾಗುವುದು. ಅವರ ಮಾತೇ ಮುಂದುವರಿಯುತ್ತಿರಲಿ, ಕಥೆಯೇಕೆ ಎಂಬಂತಿದೆ. ಒಂದು ಉದಾಹರಣೆಯಿಂದ ತೃಪ್ತಿಪಡೋಣ.

ಅರಣ್ಯಕ ಆತಿಥ್ಯವನ್ನು ವರ್ಣಿಸಿದ ಮುದ್ದಣನೊಡನೆ, ಮಡದಿ ಮನೋರಮೆ ಕೇಳುವುದು—ಎನ್ನ ಚೆನ್ನಿಗ! ಆತಿಥ್ಯಮೆಂದೊಡೇಂ, ಬಱುದೆ ಬಾಯುಪಚಾರಮೆ ?

x x x

ಮುದ್ದ—ಅನಿಬರುಮಂ ಯಥೇಚ್ಛಂ ಮೃಷ್ಟಾನ್ನ ಭೋಜನದಿಂ ತಣಿಪಿದಂ.

ಮನೋ—ಎನಗಿದಚ್ಚರಿ, ಎಂತುಟಾರ್ತಂ.

ಮುದ್ದ—ಏಂ ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೇ ? ಬೇಡಿದ ಪುರುಳನುಱದಿಂ ತಂದೀಗುಂ.

ಮನೋ—ಅಂತುಟೇಂ ಗನಂ ! ಆವುದೋ ಮಂತ್ರಂ ?

ಮುದ್ದ—ಆವುದೇಂ ? ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ, ಮುಂತಪ್ಪ ಪ್ರಸಿದ್ಧ ಮಂತ್ರಂಗಳೊಳವಲ್ತೆ.

X X X

ಮನೋ—ಅಂತದಿರ್ಕೆ, ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮ ಕೆಮ್ಮನೆ ಪಾೞ್ಗತೆಯ ಕಬ್ಬದೊಳೇ ಪೊೞ್ತುಂ ಬೆಮರ್ಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೋ ? ಉಣಲೇಂ ತಿನಲೇಂ ? ಅಂತಿರಲೊಂದು ಜಪಮಂ ಪಿರಿಯುದವಸಿಗಳತ್ತಣಿನುಪದೇಶಂಗೊಂಡೊಡಾಗದೆ ?

ಮುದ್ದ—(ಮುಗುಳ್ನಗೆಯಿಂ)—ಏಂ, ಎಮ್ಮವರೊಂದಿರವಿಂಗೆ ನಗುವಾ ? ಆಃ ; ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊಱತೆಯೊ.

X X X

ಎಂದು ಬಹಳ ಸ್ವಾರಸ್ಯವಾಗಿ ಈ ದಂಪತಿಗಳು ಮುಂದುವರಿಯುತ್ತಾರೆ. ಕೊನೆಗೆ ಮನೋರಮೆಯಿಂದ ಎಷ್ಟೆಷ್ಟೋ ಆಣೆಹಾಕಿಸಿ "ಭವತಿ ಭಿಕ್ಷಾಂದೇಹಿ" ಎಂಬ ಸಪ್ತಾಕ್ಷರೀ ಮಂತ್ರವೇ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಮಹಾ

ಮಂತ್ರ ಎಂದು ಮುದ್ದಣನು ಹೇಳುತ್ತಾನೆ. ಇದನ್ನು ಹೇಳುವಲ್ಲಿ ಕವಿಯು ತನ್ನ ದಾರಿದ್ರ್ಯಾವಸ್ಥೆಯನ್ನು ತೋಡಿಕೊಂಡಿರುವನೆಂಬುದು ನಿಸ್ಸಂದೇಹ.

# ೪ ಚಂಪೂಕಾವ್ಯಗಳು

## ೧. ಗುಣವರ್ಮ ೧

ಕವಿರಾಜಮಾರ್ಗವನ್ನು ಬಿಟ್ಟು ಮುಂದೆ ಪಂಪನಲ್ಲಿಗೆ (೯೪೧) ಬರುವ ತನಕ ನಮಗೆ ಯಾವ ಕನ್ನಡ ಗ್ರಂಥವೂ ಕಾಣಿಸುವುದಿಲ್ಲ.[1] ಕೇಶಿರಾಜನು (೧೨೬೦) ಸುಮಾರ್ಗಕೋವಿದರೆಂಬುದಾಗಿ ಸ್ತುತಿಸಿದ ಅಸಗ ಗುಣನಂದಿ ಗುಣವರ್ಮರು ಈ ಅವಧಿಯಲ್ಲಿದ್ದಿರಬೇಕೆಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮಲ್ಲಿಕಾರ್ಜುನನು (೧೨೪೫) ತನ್ನ ಸೂಕ್ತಿ ಸುಧಾರ್ಣವದಲ್ಲಿ ಗುಣನಂದಿಯಿಂದ ಮತ್ತು ಅಭಿನವ ವಾದಿ ವಿದ್ಯಾನಂದನು (೧೫೩೩) ತನ್ನ ಕಾವ್ಯ ಸಾರದಲ್ಲಿ ಗುಣವರ್ಮನಿಂದ ಉದಾಹರಣೆಗಳನ್ನು ಆಯ್ದುಕೊಂಡಿರುವುದರಿಂದ ಇವರು ಉದ್ದಾಮ ಕವಿಗಳೆಂಬುದರಲ್ಲಿ ಸಂದೇಹ ಇಲ್ಲ. ಇವರ ಕಾಲ ಸು. ೯೦೦ ಇರಬಹುದೆನ್ನುತ್ತಾರೆ. (ಇವರು ನೃಪತುಂಗ ನಿಗಿಂತ ಈಚಿನವರು.) ಇಲ್ಲಿ ಹೇಳಿದ ಗುಣವರ್ಮನು ಹರಿವಂಶ (ನೇಮಿನಾಥಪುರಾಣ ?) ಎಂಬ ಜೈನಪುರಾಣವನ್ನೂ ಶೂದ್ರಕವೆಂಬ ಲೌಕಿಕ ಕಾವ್ಯವನ್ನೂ ಬರೆದಂತೆ ತಿಳಿಯಬರುತ್ತದೆ. ಕವಿಯು ಶೂದ್ರಕದಲ್ಲಿ 'ಮಹೇಂದ್ರಾಂತಕ' 'ಕಾಮದ' ಇತ್ಯಾದಿ ಬಿರುದುಗಳುಳ್ಳ ಗಂಗರಾಜ ಎರೆಯಪ್ಪನನ್ನು (೮೮೬–೯೧೩) ಶೂದ್ರಕನಿಗೆ ಹೋಲಿಸಿದ್ದಾನೆ.' ಈ ವಿಚಾರವೂ ಗುಣ

---

1 ಶಿವಕೋಟ್ಯಾಚಾರ್ಯನಿಂದ ರಚಿತವಾದ ವಡ್ಡಾರಾಧನೆ (ಹಳಗನ್ನಡದ ಆದ್ಯ ಗದ್ಯ ಗ್ರಂಥ) ಸು. ಕ್ರಿ. ಶ. ೯೨೦ ರದ್ದಿರಬಹುದೆಂಬುದಾಗಿ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.

ವರ್ಮನ ಕಾಲವು ಸು. ೯೦೦ ಎಂಬುದಕ್ಕೆ ಪುಷ್ಟಿಕೊಡುತ್ತದೆ. ಇವನು ಪುಷ್ಪದಂತ ಪುರಾಣವನ್ನು ಬರೆದ ಮತ್ತು ಜನ್ನನನ್ನು (೧೨೦೯) ಸ್ತುತಿಸಿದ ಗುಣವರ್ಮನಿಗಿಂತ ಭಿನ್ನನು.

ಇಷ್ಟರಿಂದ ತಿಳಿಯಬಹುದಾದ ವಿಷಯವೆಂದರೆ, ನೃಪತುಂಗನಿಂದ ಪಂಪನ ವರೆಗೆ ಕೆಲವರು ಕವಿವೃಷಭರು ಆಗಿಹೋಗಿದ್ದಾರೆ; ಅವರ ಕೃತಿಗಳು ನಮಗೆ ಉಪಲಬ್ಧವಾಗಿಲ್ಲ. ಆದರೆ ಕನ್ನಡ ಸಾಹಿತ್ಯ ವಾಹಿನಿಯು ಗಂಗರ ಕೃಪಾಶ್ರಯದಲ್ಲಿ ಉದಯವಾಗಿ ರಾಷ್ಟ್ರಕೂಟರ ಪ್ರೋತ್ಸಾಹ ವೃಷ್ಟಿಯಿಂದ ತುಂಬಿ ಚಾಲುಕ್ಯರ ಪೋಷಕ ಉಪನದಿಗಳಿಂದ ಕೂಡಿ ಕನ್ನಡಿಗರಿಗೆ ರಸಾಮೃತ ವನ್ನು ನೀಡುವಷ್ಟು ಶಕ್ತವಾಗಿತ್ತು.

## ೨. ರತ್ನತ್ರಯರ ಸುವರ್ಣಯುಗ

ಕನ್ನಡ ಸಾಹಿತ್ಯಭಂಡಾರದ ಬೀಗಮುದ್ರೆಯನ್ನೊಡೆದು ಕನ್ನಡ ಸಾಹಿತ್ಯದ ಸುವರ್ಣಯುಗದ ಭವ್ಯಮಂದಿರವನ್ನು ಕಟ್ಟಿದ ಕೀರ್ತಿ ರತ್ನತ್ರಯರೆನಿಸಿ ಕೊಂಡ ಪಂಪ ಪೊನ್ನ ರನ್ನರಿಗೆ ಸಲ್ಲತಕ್ಕುದು. ಇದನ್ನೇ ಒಂದು ಸಂದರ್ಭ ದಲ್ಲಿ ರನ್ನನು ತನ್ನ ವಿಷಯವಾಗಿ ಹೇಳಿರುತ್ತಾನೆ. ಇದು ಬರಿಯ ಆತ್ಮ ಶ್ಲಾಘನೆಯಲ್ಲ. ನ್ಯಾಯವಾದ ಆತ್ಮವಿಶ್ವಾಸದ ಮಾತು. ಪಂಪನು ತನ್ನ ಆದಿಪುರಾಣದ ವಿಚಾರವಾಗಿ ಹೇಳಿದ "ಅಱಿವುದು ಕಾವ್ಯಧರ್ಮಮಂ ಧರ್ಮ ಮುಮಂ" ಎಂಬುದನ್ನು ಪೊನ್ನನ ಶಾಂತಿ ಪುರಾಣಕ್ಕೂ ರನ್ನನ ಅಜಿತ ತೀರ್ಥಂಕರ ಪುರಾಣಕ್ಕೂ ಅನ್ವಯಿಸಬಹುದು. ಈ ಮೂವರೂ ಕಿರಿದಾದ ಮೂಲಕಥೆಗಳನ್ನು ತಮ್ಮ ಪ್ರತಿಭೆಯೆಂಬ ಕುಲುಮೆಯಲ್ಲಿ ಇಟ್ಟು ಮಹಾ ಕಾವ್ಯಗಳನ್ನಾಗಿ ಪರಿವರ್ತಿಸಿದ್ದಾರೆ. ಆಚಂದ್ರಾರ್ಕವಾಗಿ ನಿಲ್ಲುವ ಎರಡೆರಡು ಮಹಾಕಾವ್ಯಗಳನ್ನು ಈ ರತ್ನತ್ರಯರು ಬರೆದಿರುವರು. ಇವುಗಳಲ್ಲಿ ಒಂದು

---

[1] ಕ. ಚ., ಸಂ. I, ಪು. ೨೫.

ಆಗಮವನ್ನು ಬೆಳಗಿಸುವುದು (ಧಾರ್ಮಿಕ) ಇನ್ನೊಂದು ಲೌಕಿಕವನ್ನು ಬೆಳಗಿಸುವುದು ಎಂಬುದಾಗಿ ಪಂಪನೇ ಹೇಳುತ್ತಾನೆ :

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತಭೂ
ತಳಕೆ ಸಮಸ್ತಭಾರತಮುಮಾದಿ ಪುರಾಣಮುಮೆಂದು ಮೈಯ್ಯಸುಂ ।
ಗೊಳುತಿರೆ ಪೊಣ್ಣು ಪೂಣ್ದತೆಱದೊಂದಱದಿಂಗಳೊಳೊಂದು ಮೂಱುತಿಂ
ಗಳೊಳೆ ಸಮಾಪ್ತಿಯಾದುದನೆ ಬಣ್ಣಿಸಿದಂ ಕವಿತಾಗುಣಾರ್ಣವಂ ॥

(ಪಂ. ಭಾ. XIV–೬೦)

ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ, ರನ್ನನ ಅಜಿತ ತೀರ್ಥಂಕರರ ಪುರಾಣ ಮೊದಲನೆಯ ಜಾತಿಯವು. ವಿಕ್ರಮಾರ್ಜುನ ವಿಜಯ (ಪಂಪಭಾರತ) ಭುವನೈಕರಾಮಾಭ್ಯುದಯ, ಸಾಹಸ ಭೀಮ ವಿಜಯ (ಗದಾಯುದ್ಧ) ಇವು ಎರಡನೆಯವು. ಎರಡನೆಯವಲ್ಲಿ ಕವಿಗಳು ತಮ್ಮ ಪೋಷಕರನ್ನು ಪ್ರಸಿದ್ಧಪುರುಷರಿಗೆ ಹೋಲಿಸಿ ಅವರನ್ನು ಕಥಾ ನಾಯಕರನ್ನಾಗಿ ಕೊಂಡಾಡಿರುವರು. ಐತಿಹಾಸಿಕ ಸಂಶೋಧಕರ ಸೂಕ್ಷ್ಮ ದೃಷ್ಟಿಗೆ ಅವುಗಳಲ್ಲಿ ಹುದುಗಿರುವ ಉಪಯುಕ್ತವಾದ ಐತಿಹಾಸಿಕಾಂಶಗಳು ಹೊಳೆದು ತೋರುವುವು.

## (i) ಪಂಪ (ಕ್ರಿ. ಶ. ೯೪೧)

ಪಂಪನು ಕನ್ನಡಕ್ಕೆ ಆದಿಕವಿ. ಕವಿರಾಜಮಾರ್ಗದಲ್ಲಿ ಕೆಲವು ಕನ್ನಡ ಕವಿವೃಷಭರ ಹೆಸರುಗಳನ್ನು ಹೇಳಿದರೂ ಅವರಲ್ಲಿ ಯಾರೊಬ್ಬರ ಕೃತಿಯೂ ಲಭಿಸಲಿಲ್ಲ. ಇದ್ದಿದ್ದರೂ ಪ್ರಾಯಃ ಅವು "ಪಸರಿಪ ಕನ್ನಡಕ್ಕೊಡೆಯನೊರ್ವನೆ" "ಸತ್ಕವಿ" ಎಂಬುದಾಗಿ ಹೊಗಳಿಸಿಕೊಂಡ ಪಂಪನ ಕೃತಿಗಳ ಯೋಗ್ಯತೆಯನ್ನು ಪಡೆದಿರಲಾರವು. "ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು" ಎಂಬುದಾಗಿ ತನ್ನ ಕಾವ್ಯಗಳನ್ನು ಕುರಿತು ಪಂಪನೇ ಹೇಳಿದ ಆತ್ಮವಿಶ್ವಾಸದ ಮಾತುಗಳಲ್ಲಿ ಬಹಳ ತಥ್ಯವುಂಟು. ಮುಂದಿನ ಕವಿಗಳು ಒಂದಲ್ಲೊಂದು ತೆರನಾಗಿ ಪಂಪನಿಂದ ಸ್ಫೂರ್ತಿ ಪಡೆದಿರುವರು; ಏಕೆ, ಕನ್ನಡ ಕವಿಗಳು ಮಾತ್ರವಲ್ಲ, ತೆಲುಗು ಆದಿಕವಿಯೆನಿಸಿದ ನನ್ನಯ್ಯಭಟ್ಟನೂ ತನ್ನ ಭಾರತವನ್ನು ಬರೆಯುವಲ್ಲಿ ಪಂಪನ ಪ್ರಭಾವಕ್ಕೆ ಒಳಗಾಗಿರುವನು.

ತನ್ನ ಆದಿಪುರಾಣದಲ್ಲಿ ಹೇಳಿರುವಂತೆ, ('ದುಂದುಭಿ ಸಂವತ್ಸರೋದ್ಭವಂ') ಕ್ರಿ. ಶ. ೯೦೨ಕ್ಕೆ ಸರಿಯಾದ ದುಂದುಭಿ ಸಂವತ್ಸರದಲ್ಲಿ ಪಂಪಮಹಾಕವಿಯು ಜನ್ಮವೆತ್ತಿದನು. ತನ್ನ ೩೯ನೆಯ ವರ್ಷದಲ್ಲಿ ('ಶಕವರ್ಷಮೆಂಟುನೂಱರ್ಕೆ ಕಡೆಯೊಳಱುವತ್ತುಮೂಱು ಸಂದಂದು' = ಶಕ ೮೬೩ = ಕ್ರಿ. ಶ. ೯೪೧) ಆದಿಪುರಾಣವನ್ನು ರಚಿಸಿದನು. ಇವನು ಆದಿಪುರಾಣವನ್ನು ಮೂರು ತಿಂಗಳುಗಳಲ್ಲಿ ಮತ್ತು ವಿಕ್ರಮಾರ್ಜುನ ವಿಜಯ (ಪಂಪಭಾರತ)ವನ್ನು ಆರು ತಿಂಗಳುಗಳಲ್ಲಿ ರಚಿಸಿದಂತೆ ಹೇಳಿರುತ್ತಾನೆ. ಈ ಮಹಾಕಾವ್ಯಗಳನ್ನು ಅಷ್ಟು ಅಲ್ಪ ಅವಧಿಯಲ್ಲಿ ಮುಗಿಸಬೇಕಾದರೆ ಕವಿಯ ಸಾಮರ್ಥ್ಯವನ್ನು ಅಪ್ರತಿಮವೆನ್ನಲೇಬೇಕು.

ಭಾರತದ ಕೊನೆಯ ಆಶ್ವಾಸದಲ್ಲಿ ತನ್ನ ವಂಶದ ವಿಷಯವಾಗಿ ಪಂಪನು ಹೀಗೆ ಹೇಳಿಕೊಂಡಿದ್ದಾನೆ: ವೆಂಗಿಮಂಡಲದ ವೆಂಗಿಪಱುವಿನ ವತ್ಸಗೋತ್ರದಲ್ಲಿ ಜನಿಸಿದ ಮಾಧವ ಸೋಮಯಾಜಿ ಈ ವಂಶದ ಮೂಲಪುರುಷ. ಆತನು ವಸಂತ, ಕೊಟ್ಟೂರು, ನಿಡುಗುಂದಿ, ವಿಕ್ರಮಪುರಗಳಲ್ಲಿ ಪ್ರಖ್ಯಾತನಾಗಿದ್ದನಂತೆ. ಆತನ ಮಗ ಅಭಿಮಾನ ಚಂದ್ರ, ಆತನ ಮಗ ಕೊಮರಯ್ಯ; ಆತನ ಮಗ ಅಭಿರಾಮದೇವರಾಯ; "ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇ ಮಾತೋ, ಜಿನೇಂದ್ರ ಧರ್ಮಮಿ ವಲಂದೊರೆ ಧರ್ಮದೊಳ್" ಎಂಬುದಾಗಿ ಅಭಿರಾಮದೇವರಾಯನು ಜಿನಧರ್ಮಾವಲಂಬಿಯಾದನು; ಇವನ ಮಗನೇ ನಮ್ಮ ಆದಿಕವಿ ಪಂಪ. ಆದಿಪುರಾಣದ ಆಶ್ವಾಸಾಂತ್ಯದ ಗದ್ಯದಲ್ಲಿ ಸ್ತುತಿಸಲ್ಪಟ್ಟ ದೇವೇಂದ್ರ ಮುನಿಯೇ ಪಂಪನ ಗುರು; ಪಂಪನು ಕೊಂಡಕುಂದಾನ್ವಯಕ್ಕೆ ಸೇರಿದವನು.[1] ಆಶ್ವಾಸಾಂತ್ಯ ಗದ್ಯಗಳಲ್ಲಿಯೂ ಗ್ರಂಥದ ಇತರೆಡೆಗಳಲ್ಲಿಯೂ ಬಂದಿರುವ ಮಾತುಗಳಿಂದ, ಪಂಪನಿಗೆ ಕವಿತಾಗುಣಾರ್ಣವ, ಪ್ರಸನ್ನ ಗಂಭೀರ ವಚನರಚನ ಚತುರ, ಪುರಾಣಕವಿ, ಸುಕವಿಜನಮನೋಮಾನಸೋತ್ತಂಸಹಂಸ, ಸ್ವರಸ್ವತೀಮಣಿಹಾರ ಇತ್ಯಾದಿ ಬಿರುದುಗಳಿದ್ದಂತೆ ತಿಳಿದುಬರುತ್ತದೆ.

---

[1] ಮುನಿಜನದೋದಿಸಿ ದೋಜೆಯ ।
ಅನುಪದಿಪುದಿದೊಂದೆ ಕೊಂಡಕುಂದಾನ್ವಯ ನಂ ।
ದನವನ ಶುಕಮೆಂದೆನಗಿನಿ ।
ಸನುಗ್ರಹಂ ಗೆಯ್ಗೆ ಕರುಣದಿಂ ಮುನಿನಿವಹಂ ॥ (ಆ. ಪು. ೧–೧೪)

ಪಂಪನ ಕೃತಿಗಳು : ಆದಿಪುರಾಣವನ್ನು ಕುರಿತು ಎರಡು ಮಾತು : ಇದರ ರಚನೋದ್ದೇಶ 'ಧರ್ಮವನ್ನೂ' ಕಾವ್ಯಧರ್ಮವನ್ನೂ ತಿಳಿದುಕೊಳ್ಳುವುದು.

ಇದುವೇ ಸುಕವಿಪ್ರಮೋದ
ಪ್ರದಮಿದುವೆ ಸಮಸ್ತ ಭವ್ಯಲೋಕಪ್ರಮುದ ।
ಪ್ರದಮೆನೆ ನೆಗಟ್ದಿದಿಪುರಾ
ಣದೊಳಱಿವುದುಕಾವ್ಯಧರ್ಮಮುಂ ಧರ್ಮಮುಮಂ । (ಆ. ಪು. ೧–೩೮)

ಇದು ಗದ್ಯಪದ್ಯ ಸಮ್ಮಿಶ್ರವಾದ ಚಂಪೂಕಾವ್ಯ. ಜಿನಸೇನಾಚಾರ್ಯರ 'ಪೂರ್ವ ಪುರಾಣವೇ' (ಸಂಸ್ಕೃತ) ಇದರ ಮೂಲ; ಆದಿತೀರ್ಥಂಕರನಾದ ಪುರುದೇವನ ಚರಿತ; ಪುರುದೇವನ ಮಕ್ಕಳಾದ ಭರತ ಬಾಹುಬಲಿಗಳ ಚರಿತವೂ ಇದರಲ್ಲಿ ಬಂದಿದೆ. "ಬುಧಸಮೂಹಂ" ಕೇಳಿಕೊಂಡ ಪ್ರಕಾರ ಈ ಮಹಾಕಾವ್ಯವನ್ನು ತಾನು ಹೇಳಲುದ್ಯುಕ್ತನಾದನಂತೆ.

ಜನಸಾಮಾನ್ಯಕ್ಕೆ ಪಂಪನ ಆದಿಪುರಾಣವು ಭಾರತದಷ್ಟು ಆದರಣೀಯವಾಗಿರುವುದಿಲ್ಲ; ಏಕೆಂದರೆ ಇದರಲ್ಲಿ ಜನ್ಮಾವಳಿಯ ಕಥೆಗಳೂ ಜೈನಮತ ವಿಚಾರಗಳೂ ಅಲ್ಲಲ್ಲಿ ಬಂದಿರುತ್ತವೆ. ಆದರೂ ಪ್ರತಿಭಾವಂತ ಪಂಪನ ಕೈಯಲ್ಲಿ ಇದು 'ಕಾವ್ಯಧರ್ಮ'ಭರಿತವಾದ ಉತ್ಕೃಷ್ಟ ಕಾವ್ಯವಾಗಿ ಪರಿಣಮಿಸಿದೆ; ಇದರಲ್ಲಿ ಮತಾಂಧತೆ ಇರುವುದಿಲ್ಲ; "ಧರ್ಮಶ್ರದ್ಧೆಯಿಂದಲೂ ಭಕ್ತಿ ಜ್ಞಾನ ವೈರಾಗ್ಯ ಭಾವನೆಗಳಿಂದಲೂ ಕವಿತಾವೇಶದ ಪ್ರಥಮ ಸ್ಫೂರ್ತಿಯಿಂದಲೂ ಪ್ರಜ್ವಲಿಸುವ ಈ ಕಾವ್ಯವು ಕಡೆಗೆ ಆತನ ಭಾರತಕ್ಕೆ ಒಂದು ಕೈ ಮೇಲೆಂದು" ಹೇಳುವ ವಿಮರ್ಶಕರೂ ಇದ್ದಾರೆ.[1]

೧೬ ಆಶ್ವಾಸಗಳು ಈ ಕಾವ್ಯದಲ್ಲಿವೆ. ಮೊದಲಿನ ಆರು ಆಶ್ವಾಸಗಳಲ್ಲಿ ಪುರುದೇವನ ಭವಾವಳಿಯ ಕಥೆ ಹೇಳಲಾಗಿದೆ. ಆಶ್ವಾಸ ಏಳರಿಂದ ಹತ್ತರವರೆಗೆ ಪುರುದೇವನ ಜನನ, ಬಾಲ್ಯ, ವಿದ್ಯಾಭ್ಯಾಸ, ವಿವಾಹ ಇತ್ಯಾದಿ

---

1 ಕನ್ನಡ ಕೈಪಿಡಿ, ಸಂ. ೨. ಪು. ೫೨೨.

ಸಮವಸರಣ ಧರ್ಮವಿಹಾರಗಳವರೆಗೆ ಹೃದಯಂಗಮವಾಗಿ ನಿರೂಪಿತವಾಗಿವೆ; ಕೊನೆಯ ಆರು ಆಶ್ವಾಸಗಳಲ್ಲಿ ಭರತ ಬಾಹುಬಲಿಯವರ ಪಾವನಚರಿತೆ ವರ್ಣಿತವಾಗಿದೆ.

ಆದಿಪುರಾಣದೊಳಗಿನ ಒಂದೆರಡು ರಸಘಟ್ಟಗಳನ್ನು ಪರಿಶೀಲಿಸೋಣ:

ಪುರುದೇವನು ಐದನೆಯ ಜನ್ಮದಲ್ಲಿ ವಜ್ರಜಂಘನಾಗಿ ಹುಟ್ಟುವನು. ವಜ್ರಜಂಘನಿಗೂ ಶ್ರೀಮತಿಗೂ ಮದುವೆಯಾಗುವುದು. ಶ್ರೀಮತಿಯ ತಂದೆ ಮಗಳನ್ನು ಅಳಿಯನೊಂದಿಗೆ ಕಳುಹಿಸಿಕೊಡುವಾಗ ಹೇಳುವ ಮಾತು ಕಾಳಿದಾಸನ ಕಣ್ವಋಷಿಗಳ ಅಮರವಾಣಿಯನ್ನು ನೆನಪಿಗೆ ತರುವುದು.[1]

ಬಗೆದುಂ ನಿನ್ನನ್ವವಾಯೋನ್ನತಿಯನಿವಳತಿ ಸ್ನೇಹ ಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮಱಿಯದೇನಾನುಮೆಂದಾಗಳುಂ ಮೆ।
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದರ್ದೆಗಿಡದಂತಾಗೆ ಪಾಲಿಪ್ಪುದಿಂತೀ
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದಂ ವಜ್ರಜಂಘಾ ॥

(IV–೫೫)

ತದನಂತರ ತಾಯಿತಂದೆಗಳೀರ್ವರೂ ಮಗಳ ಮುಖವನ್ನು ಅಕ್ಕರೆಯಿಂದ ನೋಡಿ ಹೇಳುತ್ತಾರೆ:

ಮನಮಱಿದಂಜಿ ಬೆರ್ಚಿ ಬೆಸಕೆಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀ ಪದದಲ್ಲಿ ಪದಸ್ಥೆಯಾಗು ನಂ।
ದನರನಗಣ್ಯ ಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು, ತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ॥

(IV–೫೬)

---

[1] ಶಾಕುಂತಲ, ೪ನೆಯ ಅಂಕ, "ಅಸ್ಮಾನ್ ಸಾಧುವಿಚಿಂತ್ಯ ಸಂಯಮಧನಾನುಚ್ಚೈಃಕುಲಂ
ಚಾತ್ಮನಃ ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹಪ್ರವೃತ್ತಿಂ ಚ ತಾಂ ॥
ಸಾಮಾನ್ಯ ಪ್ರತಿಪತ್ತಿ ಪೂರ್ವಕಮಿಯಂ ದಾರೇಷು ದೃಶ್ಯಾತ್ವಯಾ ಭಾಗ್ಯಾಯತ್ತ
ಮತಃ ಪರಂ ನ ಖಲು ತದ್ವಾಚ್ಯಂ ವಧೂಬಂಧುಭಿಃ ॥

## ಪಂಪನ ಸರಸ್ವತಿಯ ಚಿತ್ರವಿದು

ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱಿದು ಪೆಣ್ಣರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಟಕ್ಕಿಮಗಿಲ್ಲಿಯೆ ವಾಗ್ವಿಳಾಸಮಂ (I–೯)

## ಚೂತನರಾಜನೆಂಬ ಬೆಡಂಗನು

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀ ನೀಱನೈ ಪುಷ್ಪಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತಪ।
ಣ್ಗಳಿನೋವೋ ಪೆರತೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತಿ ಚೆನ್ನಂಗಳೇ॥ (XI–೯೮)

## ಸಂಪಗೆಯ ಶ್ರೇಷ್ಠತೆ—ಕಂಪೂ ಬಣ್ಣವೂ

ಪಡೆದೊಡೆ ಕಂಪಂ ಬಣ್ಣಂ
ಒಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ।
ಪಡೆಯುವುಟಿದಲರ್ಗಳೆರಡು ಮ
ನೊಡವೆಳೆದೀಚಂಪಕಕ್ಕೆ ಪೂಗಳ್ ದೊರೆಯೇ (XI-೧೧೮)

ಕನ್ನಡ ಛಂದಸ್ಸು ಇಲ್ಲಿ ಇಣಿಕಿನೋಡುವುದು ಮುಂದಾನಿಲ ರಗಳೆಯಲ್ಲಿ ವಿವಾಹಮಂಟಪದ ವರ್ಣನೆ :

X X X

ಚಂದನದೆಳದಳಿರ್ದೋರಣಂಗಳವು
ಸೂಚಿತ ಮಂಗಳ ಕಾರಣಂಗಳವು॥
ರತಿಯ ವಿವಾಹಾಗಾರಮೆನಿಸಲಿದು
ಸಕಳ ವಿಳಾಸನಿವಾಸಮೆನಿಸಲಿದು॥

ಮದನನ ಸಾರಸರ್ವಸ್ವಮೆನಿಸಲಿದು
ಸುರತೋತ್ಪತ್ತಿ ಸ್ಥಾನಮೆನಿಸಲಿದು ॥
ಓರಂತೆ ನೆರೆದುದೆನೆ ಜನಸಮೂಹ
ಮಾಗಳೆ ಸಮೆದತ್ತು ವಿವಾಹಗೇಹ ॥ (IV–೩೦)

ಎಷ್ಟು ಲಲಿತವಾದ ಕನ್ನಡವಿದು; 'ಮೃದುಮಧುರವಚನ ರಚನೆ' ಯಿದು; 'ಬಗೆಯ ಬಟ್ಟೆಯನ್ನು ಮುಟ್ಟುವ' ನುಡಿಗಳು.

## ವಿಕ್ರಮಾರ್ಜುನ ವಿಜಯ

ಈ ಕೃತಿಯ ಆಶ್ವಾಸಾಂತ್ಯ ಗದ್ಯ ಹೀಗಿದೆ:

"ಇದು ವಿವಿಧ ಬುಧಜನವಿನುತಜಿನಪದಾಂಭೋಜವರಪ್ರಸಾದೋತ್ಪನ್ನ ಪ್ರಸನ್ನಗಂಭೀರವಚನರಚನಚತುರ ಕವಿತಾಗುಣಾರ್ಣವವಿರಚಿತಮಪ್ಪ ವಿಕ್ರಮಾರ್ಜುನ ವಿಜಯದೊಳ್...." ಇದರಿಂದ ಕವಿಯು ತನ್ನ ಕಾವ್ಯವನ್ನು ವಿಕ್ರಮಾರ್ಜುನವಿಜಯವೆಂಬುದಾಗಿ ಕರೆದಂತೆ ತಿಳಿದು ಬರುತ್ತದೆ. ಭಾರತ ಕಥೆಯೇ ಇದರ ವಸ್ತುವಾದುದರಿಂದ ಲೋಕದಲ್ಲಿ ಇದು ಸಹಜವಾಗಿ 'ಪಂಪಭಾರತ'ವೆಂದೇ ಖ್ಯಾತಿಪಡೆಯಿತು. 'ಜಿನಪದಾಂಭೋಜವರಪ್ರಸಾದೋತ್ಪನ್ನನಾದ' ಪಂಪನಿಗೆ 'ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿ' ಯನ್ನು ವೈದಿಕಮಾರ್ಗದಲ್ಲಿ ಈಸುವುದಕ್ಕಾಗದು. ವಿನಯದಿಂದ 'ಕವಿ ವ್ಯಾಸನನೆಂಬ ಗರ್ವಮೆನಗಿಲ್ಲ' ಎಂಬುದಾಗಿ ಹೇಳುತ್ತಾನೆ. ಮಾತ್ರವಲ್ಲ ತನ್ನ ಪೋಷಕನಾದ ಚಾಲುಕ್ಯರಸ ಅರಿಕೇಸರಿಯನ್ನು ಕಥಾನಾಯಕನನ್ನಾಗಿ ಮಾಡಿ ಅರ್ಜುನನೊಡನೆ ಸಮೀಕರಿಸಿ ಹೇಳಬೇಕೆಂಬ ಉದ್ದೇಶ ಈತನದು. ಪಂಚಮವೇದವೆನಿಸಿದ ವ್ಯಾಸಭಾರತವು ಇಲ್ಲಿ ತೀರ ಲೌಕಿಕವಾಗಿದೆ. ಆದುದರಿಂದಲೇ ಕಂಠೋಕ್ತವಾಗಿ ಪಂಪ "ಬೆಳಗುವೆನಿಲ್ಲಿ ಲೌಕಿಕಮನ್" ಎಂದು ಹಾಡಿದನು. ಈ ಸನ್ನಿವೇಶದಲ್ಲಿ ರಚನೆಯಾದ ಭಾರತದಲ್ಲಿ ಪಂಪನು ಅನೇಕ ವ್ಯತ್ಯಾಸಗಳನ್ನು ಮಾಡಿಕೊಳ್ಳಬೇಕಾಯಿತು. ಕಥಾನಾಯಕನೇ "ಅರ್ಜುನನೊಳ್ ತಗುಳ್ಚಿ ಪೇೞ್ದ" ಅರಿಕೇಸರಿ. ಕವಿ ತನ್ನ ಬಿರುದುಗಳಲ್ಲಿ ಕೆಲವನ್ನು

ಅರ್ಜುನನಿಗೂ ಅರಿಕೇಸರಿಗೂ ಕೊಟ್ಟಿರುವುದು ನವೀನವಾಗಿದೆ. ಗ್ರಂಥಾವತಾರದಲ್ಲಿ ಅರಿಕೇಸರಿಯನ್ನು ನಾರಾಯಣನಿಗೂ ಪರಮೇಶ್ವರನಿಗೂ ಸೂರ್ಯನಿಗೂ ಹೋಲಿಸಿ ತದನಂತರ ಸರಸ್ವತಿ ವಿನಾಯಕರನ್ನು ಪ್ರಾರ್ಥಿಸಿ ದೇವತಾಸ್ತುತಿ ಮಾಡಿದ್ದಾನೆ. ಇಲ್ಲಿ ಜೈನಮತ ಸಂಬಂಧವಾದ ತೀರ್ಥಂಕರ ಸಿದ್ಧರ ಸ್ತವನಗಳು ಬಂದಿಲ್ಲ.[1] ತರುವಾಯ ಕವಿಯು ಅರಿಕೇಸರಿಯ ವಂಶವನ್ನು ತಿಳಿಸಿ ಕಥಾ ಪ್ರವೇಶ ಮಾಡುತ್ತಾನೆ. ಗ್ರಂಥವು ೧೪ ಆಶ್ವಾಸಗಳನ್ನೊಳಗೊಂಡಿದೆ. ಪಾಂಡವ ಕೌರವರ ಜನನದಿಂದ ಕೌರವಾವಸಾನದವರೆಗಿನ ಕಥೆಯನ್ನು ಉಪಾಖ್ಯಾನ ಭಗವದ್ಗೀತೆ ಮುಂತಾದುವನ್ನು ಬಿಟ್ಟು ಸಂಕ್ಷೇಪವಾಗಿ ಪಂಪನು ನಿರೂಪಿಸಿದ್ದಾನೆ. ಕೃತಿಯ ಕೊನೆಯಲ್ಲಿ ಅರ್ಜುನನಿಗೆ ಸುಭದ್ರೆಯೊಡನೆ ಪಟ್ಟಾಭಿಷೇಕವಾಗುವುದು.

ಪಂಪನು ಮಾಡಿಕೊಂಡ ಮುಖ್ಯ ವ್ಯತ್ಯಾಸಗಳು :

೧) ದ್ರೌಪದಿ ಇಲ್ಲಿ ಪಂಚ ವಲ್ಲಭೆಯಲ್ಲ; ಅರ್ಜುನನ ವಲ್ಲಭೆ.

೨) ಅರ್ಜುನನು ಸನ್ಯಾಸಿ ವೇಷದಲ್ಲಿ (ಕೃಷ್ಣನ ಸಹಾಯದಿಂದ) ಸುಭದ್ರೆಯನ್ನು ಅಪಹರಿಸಿ ಮದುವೆಯಾದಂತಿಲ್ಲ. ಆತನೂ ಸುಭದ್ರೆಯೂ ಪರಸ್ಪರ ಅನುರಾಗದಿಂದ ಕೃಷ್ಣನ ಸಹಾಯ ಪಡೆದು ಬಲರಾಮನಿಗೆ ತಿಳಿಯದಂತೆ ಇಂದ್ರಪ್ರಸ್ಥಕ್ಕೆ ತಪ್ಪಿಸಿಕೊಂಡು ಹೋದಂತೆ ಇಲ್ಲಿ ಹೇಳಿರುತ್ತದೆ.

೩) ಇಲ್ಲಿ ಶಿಶುಪಾಲವಧೆ ಕೃಷ್ಣನಿಂದಾಗುವುದು ಅರ್ಘ್ಯವನ್ನು ಕೊಟ್ಟ ತಳಿಗೆಯ ಮೂಲಕ, ಕೃಷ್ಣ ಚಕ್ರದಿಂದಲ್ಲ.

---

1 ಆದರೂ ಗುಣಾರ್ಣವನ ಜನನವನ್ನು ವಿಸ್ತಾರವಾಗಿ ವರ್ಣಿಸುತ್ತಾ, ದೇವತೆಗಳು, ಬ್ರಹ್ಮ, ಇಂದ್ರರು ಆತನ ಜನ್ಮೋತ್ಸವವನ್ನು ಆಗುಮಾಡಿಸಿದಂತೆ ಕಾವ್ಯದಲ್ಲಿ ಹೇಳಿರುತ್ತದೆ. ಅಂತು ಹಿರಣ್ಯಗರ್ಭ ಬ್ರಹ್ಮಂ ಮೊದಲಾಗಿ ವ್ಯಾಸ ಕಶ್ಯಪ ವಸಿಷ್ಠ ವಾಲ್ಮೀಕಿ ವಿಶ್ವಾಮಿತ್ರ.... ದಿವ್ಯ ಮುನಿಪತಿಗಳುಮೇಕಾದಶರುದ್ರರುಂ....ಮೂವತ್ತು ಮೂರು ದೇವರುಂ ಇಂದ್ರಂ ಬೆರಸು ವೈಮಾನಿಕದೇವರುಂ ನೆರೆದು ಪಾಂಡು ರಾಜನುಮಂ ಕೊಂತಿಯುಮಂ ಸರಸಿ ಕೂಸಿಂಗೆ ಜನ್ಮೋತ್ಸವಂ ಮಾಡಿ—ಇಲ್ಲಿ ಜಿನ ಬಾಲಕನ ಜನ್ಮೋತ್ಸವ ಸಂಪ್ರದಾಯದ ಪ್ರಭಾವಕ್ಕೆ ಪಂಪನು ಒಳಗಾಗಿರಬಹುದು.

೪) ದುರ್ಯೋಧನನು ಕಾಲವಂಚನೆಗಾಗಿ ಭೀಷ್ಮನಿಂದ ಜಲಮಂತ್ರೋಪದೇಶವನ್ನು ಪಡೆದು ವೈಶಂಪಾಯನ ಸರೋವರದಲ್ಲಿ ಅಡಗುವನು. ವ್ಯಾಸ ಭಾರತದಲ್ಲಿ ಅವನು ಭಯಚಕಿತನಾಗಿ ಅಡಗಿಕೊಂಡನೆಂದು ಹೇಳಿದೆ.

೫) ಇಲ್ಲಿ ಅರ್ಜುನ ಸುಭದ್ರೆಯರಿಗೆ ಪಟ್ಟಾಭಿಷೇಕವಾದರೆ, ವ್ಯಾಸ ಭಾರತದಲ್ಲಿ ಯುಧಿಷ್ಠಿರ ದ್ರೌಪದಿಯರಿಗೆ ಪಟ್ಟವಾಗುವುದು.

ಇನ್ನೂ ಇಂತಹ ಕೆಲವು ವ್ಯತ್ಯಾಸಗಳಿವೆ. ಪಾತ್ರಗಳ ಹೆಸರುಗಳಲ್ಲಿಯೂ ವ್ಯತ್ಯಾಸಗಳುಂಟು.

ತನ್ನ ಕಥಾನಕದಲ್ಲಿ ಸಂದರ್ಭೋಚಿತವಾಗಿ ಅರಿಕೇಸರಿಗೆ ಸಂಬಂಧಿಸಿದ ಕೆಲವು ಸಮಕಾಲೀನ ಚಾರಿತ್ರಿಕ ವಿಷಯಗಳನ್ನು ಪಂಪನು ಸೇರಿಸಿರುತ್ತಾನೆ. ಅಂದಿನ ಭಾರತದ ಇತಿಹಾಸ ಸಂಶೋಧಕರಿಗೆ ಇದೊಂದು ಅಪೂರ್ವ ಚಿನ್ನದ ಗನಿಯಾಗಿದೆ.[1] ಪಂಪನ ಮಾರ್ಗವನ್ನೇ ಅನುಸರಿಸಿದ ರನ್ನನ ಸಾಹಸಭೀಮ ವಿಜಯವೂ ಈ ಗುಣವನ್ನೊಳಗೊಂಡಿದೆ.

ಕವಿತಾಚಾತುರ್ಯ, ವರ್ಣನಾಸಾಮರ್ಥ್ಯ, ಪಾತ್ರನಿರೂಪಣೆ, ರಸಪುಷ್ಟಿ, 'ಹಿತಮಿತಮೃದುವಚನ'ಪೂರ್ವಕವಾದ ಶೈಲಿ, ಪ್ರೌಢವಾದರೂ ಅಲ್ಲಲ್ಲಿ 'ದೇಸಿ' ವೆತ್ತ 'ದೇಶೀ'ಪ್ರಕಾರಗಳು, ಅಂದವೂ ಮಾರ್ಮಿಕವೂ ಆದ ನಾಣ್ಣುಡಿಗಳು, ದೇಶಾಭಿಮಾನದ್ಯೋತಕ ವಾಗ್ಗುಂಫನಗಳು "ಪಂಪನನ್ನು ಕರ್ಣಾಟಕ ಕವಿತಾ ಸಾರ್ವಭೌಮನನ್ನಾಗಿ ಮಾಡಿರುವುವು." 'ರಾಜಸುಧಾನಿಯ ಪುಟವಹ ಸಾಜದ ಪುಲಿಗೆಱೆಯ ತಿರುಳ ಕನ್ನಡ'ದಲ್ಲಿ ರಚಿಸಿದ ಪಂಪನ ಕೃತಿಯನ್ನು ಪರೀಕ್ಷಿಸಿದರೆ. ಪ್ರಾಯಃ ಬೇರಾವ ಕನ್ನಡ ಕವಿಯೂ ಪಂಪನು ಪ್ರಯೋಗಿಸಿದಷ್ಟು ದೇಶ್ಯಶಬ್ದ

---

1 ನೋಡುವನಾ ಬ್ರಹ್ಮಂ ಮುಂ
ಡಾಡುವನಮರೇಂದ್ರನಿಂದ್ರನಚ್ಚರಸೆಯರೆ ।
ಟ್ಟಾಡುವರೆಂದೊಡೆ ಪೊಗೞ
ಲ್ಕೇಡ ಗುಣಾರ್ಣವನ ಜನ್ಮದಿನದ ಬೆಡಂಗಂ ॥

ಗಳನ್ನು ಪಯೋಗಿಸಲಿಲ್ಲವೆನ್ನಬಹುದು. ಅವಲ್ಲಿ ಕೆಲವಕ್ಕೆ ಇಂದು ಸರಿಯಾದ ಅರ್ಥವೂ ಆಗುವುದಿಲ್ಲ; ಅವು ಬಳಕೆಯಿಂದ ತಪ್ಪಿಹೋಗಿರುವುದೇ ಇದಕ್ಕೆ ಕಾರಣ.

ಪಂಪನ ಹಿರಿಮೆಯನ್ನು ಸೂಚಿಸಲಿರುವ ಎಲ್ಲ ಸನ್ನಿವೇಶಗಳನ್ನು ಪಾತ್ರ ರಚನಾಕೌಶಲ ಇತ್ಯಾದಿಯನ್ನು ಇಲ್ಲಿ ನಿದರ್ಶಿಸುವುದು ಕಷ್ಟಸಾಧ್ಯವಾದುದ ರಿಂದ, 'ವಿಕ್ರಮಾರ್ಜುನ ವಿಜಯ' ದಿಂದ ಮುಖ್ಯವಾದುವುಗಳಲ್ಲಿ ಒಂದೆರಡನ್ನು ದಿಗ್ದರ್ಶನಕ್ಕಾಗಿ ಕೊಡಲಾಗಿದೆ. ಅವೆಷ್ಟು ಸ್ವಾರಸ್ಯಮಯವಾಗಿವೆ ಎಂಬು ದನ್ನು ಸಮೀಕ್ಷಿಸಿರಿ.

ಅರ್ಜುನನ ಬಾಯಲ್ಲಿ ಪಂಪನು ಬನವಾಸಿ ದೇಶವನ್ನು ಹೊಗಳಿಸುವಾಗ ಯಾವ ಕನ್ನಡಿಗನ ಹೃದಯವು ತುಂಬಿ ಬರಲಿಕ್ಕಿಲ್ಲ! ಎಂತಹ ದೇಶಾಭಿ ಮಾನ !

ಸೊಗಯಿಸಿ ಬಂದಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ ।
ನಗೆ ಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋೞ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ ॥
ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಸರೆ ಮಾನಿಸರಂತವರಾಗಿ ಪುಟ್ಟಲೇ ।
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ ॥
ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದಗೇ
ಯಂ ಕಿವಿವೊಕ್ಕೊಡಂ ಬಿರಿದಮಲ್ಲಿಗೆಗಂಡೊಡಮಾದ ಕೆಂದಲಂ ॥
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ (IV-೨೮-೩೦)

"ಯಾರು ಅಂಕುಶ ಹಾಕಿದರೂ ಹಾಕಲಿ, ಬನವಾಸಿ ದೇಶವನ್ನು ನನ್ನ ಮನಸ್ಸು ಸದಾ ನೆನೆಯುವುದು ; ಅದನ್ನು ಮರೆಯಲಾರೆನು."

ಪಾಂಡುವಿನ ಮರಣ ಸಂಭವಿಸಿದೆ. ಮಾದ್ರಿ ವಿಧಿಪ್ರಕಾರ ಸಹಗಮನ ಮಾಡುವಳು. ಕುಂತಿ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಆಗ ಪಂಪನು ಹೇಳುವ ಮಾತು :

ಎಂದು ತಪೋವನದ ಮುನಿಜನಮುಂ ವನದೇವತಾಜನಮುಂ ತನ್ನಣ್ಮಂ ಪೊಗೞೆ, ಮಾದ್ರಿ ಪಾಂಡುರಾಜನೊಡನೆ ಕಿರ್ಚಂ ಪುಗೆ, ಕುಲದೊಳಂ ಚಲದೊಳಂ ಆವ ಕುಂದುಂ ಇಲ್ಲದೆ ತನ್ನೊರೆಗಂ ದೊರೆಗಂ ಆರುಂ ಇಲ್ಲ ಎನಿಸಿ ದಾಗಳ್, ಕೊಂತಿ ಶೋಕಾಕ್ರಾಂತೆಯಾಗಿರೆ, ತಪೋವನದ ತಪೋವೃದ್ಧರ್ ಆ ಕಾಂತೆಯನಿಂತೆಂದು ಸಂತೈಸಿದರ್——

ಕೞಿದವರ್ಗೞ್ವ ದೞ್ವೊಡವರೇೞ್ವೊಡ ಮಂತವರಿಂ ಬೞಿಕ್ಕೆ ತಾ
ಮೞಿವೊಡಮೇೞಿರಂತವರಣಂ ತಮಗಂ ಒರ್ದುಕಿಲ್ಲ ಧರ್ಮಮಂ ।
ಗೞಿಯಿಸಿಕೊಳ್ವುದೊಂದೆ ಚದುರಿಂತುಂಟು ಸಂಸ್ಕೃತಿ ಧರ್ಮಮೇಕೆ ಬಾ
ಯೞಿವುದಿದೇಕೆ ಚಿಂತಿಸುವುದೇ ಪಲುಂಬುವುದೇಕೆ ನೋವುದೋ ॥
(II–೨೭)

ಮೇಲಿನ ಹಳಗನ್ನಡಗದ್ಯದ ಶೈಲಿಯನ್ನು ಗಮನಿಸಿರಿ. ಎಷ್ಟು ದೇಶ್ಯ ಶಬ್ದಗಳು ಔಚಿತ್ಯದಿಂದ ಬಂದಿವೆ ! ಎಂಥ ಲಾಲಿತ್ಯ ! ಮತ್ತಿನ ಪದ್ಯ ಎಷ್ಟು ಸುಂದರವೂ ಅರ್ಥವತ್ತೂ ಆಗಿರುತ್ತದೆ !

———

1 ರುಂದ್ರಾಂಭೋಧಿ ಪರೀತಮ
ಹೀಂದ್ರರೊಳಾರಿನ್ನರೀನರೇಂದ್ರಂ ಸಾಕ್ಷಾ ।
ದಿಂದ್ರಂ ತಾನೆನೆ ಸಲೆ ನೆಗ
ೞ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ (I–೪೪)

ಇಲ್ಲಿ ಅರಿಕೇಸರಿಯ ಶೈಶವ ವರ್ಣನೆ ಇದೆಯೆಂಬುದಾಗಿಯೂ ; ಇಲ್ಲಿ ಹೇಳಿದ ಇಂದ್ರನು ರಾಷ್ಟ್ರಕೂಟದ ಮೂರನೆಯ ಇಂದ್ರನಾಗಿರಬೇಕು. ಆತನ ತಂಗಿ ಅರಿಕೇಸರಿಯ ತಾಯಿ ಜಾಕವ್ವೆಯಾಗಿರಬೇಕು ಇತ್ಯಾದಿ ಚಾರಿತ್ರಿಕಾಂಶಗಳನ್ನು ಮುಳಿಯ ತಿಮ್ಮಪ್ಪಯ್ಯನವರು ಅನುಮಾನಿಸುತ್ತಾರೆ. (ನಾಡೋಜ ಪಂಪ, ಪು. ೪೭)

ಗಾದೆಯು ಮಾತುಗಳನ್ನು ಪಂಪನು ಪೋಣಿಸುವ ಬೆಡಂಗನ್ನು ಇಲ್ಲಿ ನೋಡಬಹುದು.

೧. ಪೆಂಡಿರ್ ಪೆಂಡಿರೊಳದೆಂತು ಬೆರಸುವರ್ (I–೭೬)
೨. ಪಂದೆಯುಂ ಪಾವಡರ್ದಂತೆ (II–೮೨)
೩. ನೆಲಂ ಮುರಿವಿಟ್ಟಂತೆ (II–೮೬)
೪. ಪೊಳ್ಳುಮರನಂ ಕಿರ್ಚು–ಅಳುರ್ವಂತೆ (II–೮೮)
೫. ಪಡೆ ನೋಡಲ್ ಬಂದವರಂ ಗುಡಿಪೊಱಿಸಿದರೆಂಬುದಾಯ್ತು (III–೧೫)
೬. ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಮುಸಿದವೋಲ್ (IV-೪೮)
೭. ಪಾವುಗಳುಳ್ಳ ಪಗೆಯುಂ ಮಱಿಯವು (V–೯೯)
೮. ಬೇರೊಳ್ ಬೆನ್ನೀರಂ ಪೊಯ್ (VIII–೩೪)
೯. ಏವುದೊ ಶುಚಿಯಿಲ್ಲದವನ ಗುಂಡುಂತೊಂಡುಂ (VIII-೮೨)
೧೦. ಎನಿತುಂ ಕಾಯ್ದು ಬೆನ್ನೀರ್ ಮನೆಸುಡದು (IX–೩೮)
೧೧. ಸೆಟ್ಟಿಯು ಬಳ್ಳಂ ಕಿಱಿದು (XII–೧೭೫)
೧೨. ತನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತೆ (X–೧೩)
೧೩. ಆನೆ ಮೆಟ್ಟಿದ ಕುಳುಂಪೆಯ ನೀರಂತೆ (XI–೧೩೬)
೧೪. ಪೆಣನಿಱಿದು ಪಗೆಗೊಂಡರೆಂಬ ನಾಣ್ನುಡಿ
೧೫. ಸೂಜಿಯ ಕೂರ್ಪು ಕುಂಬಳದೊಳಡಂಗುವಂತೆ (XIII–೬೫)
೧೬. ಜಲಕ್ಕನೀಗಳಱಿದಂ ಸಿರಿ ಕಳ್ಳೊಡವುಟ್ಟಿತೆಂಬುದಂ (II–೫೯)
೧೭. ದೆಯ್ವಮನಾರಯ್ಯ ಮೀಱಿ ಬಾಟಲ್ ನೆಱಿವರ್ (IV–೩)

ಅಶ್ವಾಸಾದ್ಯಂತಗಳಲ್ಲಿ ಬಿಡದೆಯೆ ಅರಿಕೇಸರಿ ಸಮೀಕೃತ ಅರ್ಜುನನನ್ನು ಹೊಗಳಿ ಮಿಕ್ಕ ಕೆಲವೆಡೆಗಳಲ್ಲಿಯೂ ಆತನ ನಾಯಕತ್ವವನ್ನೇ ಎತ್ತಿ ಹಿಡಿದರೂ ಒಳಗಿಂದೊಳಗೆ ಪಂಪನ ಉದಾರತೆ ಕರ್ಣನತ್ತ ವಾಲಿಬಿಡುತ್ತದೆ. ಕರ್ಣನ ಪಾತ್ರವನ್ನು ಸಹಜಸುಂದರವಾಗಿ ಸೃಜಿಸಿ, ಆತನ ಬಾಯಿಂದ ಉದಾತ್ತ ವಚನವನ್ನು ನುಡಿಸುವನು.

ಬಿದಿವಸದಿಂದೆ ಪುಟ್ಟುವುದು ಪುಟ್ಟಿಸುವಂ ಬಿದಿ ಪುಟ್ಟಿದುದಿವಂ
ಗಿದು ಬಿಯುವೊಪ್ಪುವಂಗಿದು ಏನೋದವಿವಂಗಿದು ಸಾವ ಪಾಂಗಿವಂ ।

ಗಿದು ಪಡೆವಪಾತಿವಂಗಿದು ಪರಾಕ್ರಮಮೆಂಬುದನ್ನೆಲ್ಲ ಮಾಚಿಕ್ಕಿಯಿಂ
ಬಿದಿ ಸಮಕಟ್ಟಿಕೊಟ್ಟೊಡೆಡೆಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್

(XII-೧೮೨)

ಯುದ್ಧರಂಗದಲ್ಲಿ 'ಕುಲಶೈಲಂ ಬೀೞ್ವಂತೆ ನೆಲನದಿರೆ ಬಿದ್ದ ಕರ್ಣನ ಒಡಲಿನಿಂದ ನೋಡುತ್ತಿದ್ದಂತೆ ಒಂದು ತೇಜೋಮೂರ್ತಿ ಹೋಗಿ ಸೂರ್ಯನಲ್ಲಿ ಒಡಗೂಡಿತಂತೆ.

ಪಂಪನಿಗೆ ಭಾರತವೆಲ್ಲ 'ಕರ್ಣಮಯ'ವಾಯಿತು. ಅರಿಕೇಸರಿ ಕಥಾ ನಾಯಕನೆಂಬುದೂ ತತ್ಕಾಲಕ್ಕೆ ಮರೆತುಹೋದಂತೆಯೇ ಸರಿ :

ನೆನೆಯದಿರಣ್ಣ ಭಾರತದೊಳಿನ್ ಪೆಱರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ ।
ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ ।
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ॥

(XII-೨೧೭)

ಪಂಪನು ದುರ್ಯೋಧನ ಪಾತ್ರರಚನೆಯಲ್ಲಿಯೂ ಕೆಲವೆಡೆ ಸಹಾನು ಭೂತಿ ತೋರಿಸಿ ಕಾವ್ಯವನ್ನು ರಸಭರಿತವನ್ನಾಗಿ ಮಾಡಿದುದು ಒಂದು ವೈಶಿಷ್ಟ್ಯ. ತಾನು ಮಾಡಿದ ಪಾಪಕ್ಕೆ ತಾನೇ ಪ್ರಾಯಶ್ಚಿತ್ತಮಾಡಿಕೊಂಡ ಮಹಾನುಭಾವನಂತೆ ದುರ್ಯೋಧನನ ಕೊನೆಯ ಚಿತ್ರ ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಭೀಷ್ಮರು ಇನ್ನಾದರೂ ಸಂಧಿಗೊಡಂಬಡು ಎಂದು ದುರ್ಯೋಧನ ನಿಗೆ ಹೇಳುತ್ತಾರೆ. ಅದು ಅವನ ಗಂಟಲನ್ನು ಸುಡುವ ತುತ್ತು. ಮಾಡಿದ್ದಾ ಯಿತು. ಇನ್ನು "ಅಪ್ಪುದು ಆಕ್ಕೆ" ಎಂಬ ವೀರೋಚಿತ ವಾಣಿಯಿದು :

ಶರಶಯ್ಯಾಗ್ರದೊಳಿಂತು ನೀಮಿರೆ ಘಟಪ್ರೋದ್ಭೂತನಂತಾಗೆ ವಾ
ಸರನಾಥಾತ್ಮಜನುಂತು ಸಾಯೆ ರಣದೊಳ್ ದುಶ್ಶಾಸನಂ ತದ್ವೃಕೋ ।
ದರನಿಂದಂತಱಿದಟ್ಟಿಗೆ ಸೈರಿಸಿಯುಮಾಂ ಸಂಧಾನಮಂ ವೈರಿಭೂಪ
ರೊಳಿಂ ಸಂಧಿಸಿ ಪೇೞಿಮಾರ್ಗೆ ಮೆಱೆವೆಂ ಸಂಪತ್ತುಮಂ ಶ್ರೀಯುಮಂ ॥

(XII-೧೮೯)

ಬಿಡಿಮೆನ್ನ ನುಡಿಗೆ ಬೀಟ್ಕೊಳಿ
ನುಡಿಯದಿರಿಂ ಪೆಱತನಜ್ಞಮುಂ ನುಡಿದೆರಡಂ ।
ನುಡಿವೆನೆ ಚಲಮಂ ಬಲ್ವಿಡಿ
ವಿಡಿದೆಂ ತನ್ನಪ್ಪುದಕ್ಕೆ ಸಂಗರಧರೆಯೊಳ್ ॥ (XIII-೭೦)

ಪ್ರತಿನಾಯಕನನ್ನು ಹೀಗೆ ಮಹಾನುಭಾವನಾಗಿ ಚಿತ್ರಿಸಿ ಅವನ ದುರಂತದಲ್ಲಿ ನಮಗೆ ಮರುಕವುಂಟಾಗುವಂತೆ ಪಂಪ ಮಾಡಿದ್ದಾನೆ.

ಪಂಪನ ದೃಷ್ಟಿಯಿಂದ ಮಹಾಭಾರತದೊಳಗೆ ಸ್ಮರಣೀಯ ವ್ಯಕ್ತಿಗಳಾರೆಂಬುದನ್ನು ಕೆಳಗಿನ ಪದ್ಯ ಹೇಳುವುದು. ಪ್ರತಿಯೊಬ್ಬ ವ್ಯಕ್ತಿ ಒಂದೊಂದು ವಿಶಿಷ್ಟಗುಣವನ್ನು ಪ್ರತಿನಿಧಿಸುವ ಪಾತ್ರವೂ ಹೌದು.

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪ ವಿದ್ಯಾ ।
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ ।
(XIV-೬೪)

ಇಲ್ಲಿ ಶ್ರೀಕೃಷ್ಣನ ವಿಷಯವನ್ನು ಪಂಪನು ಏಕೆ ಹೇಳಲಿಲ್ಲವೊ ಆಶ್ಚರ್ಯ.

## (II) ಪೊನ್ನ (ಕ್ರಿ. ಶ. ೯೫೦)

ವೆಂಗಿವಿಷಯದ ಕಮ್ಮೆನಾಡಿಗೆ ಸೇರಿದ ಪುಂಗನೂರಿನಲ್ಲಿ ನಾಗಮಯ್ಯನೆಂಬ ಜೈನ ಬ್ರಾಹ್ಮಣನಿದ್ದನು. ಆತನ ಮಕ್ಕಳಾದ ಮಲ್ಲಪಯ್ಯ ಪುನ್ನಮಯ್ಯರು ವಾಣಿಯವಾಡಿಯಲ್ಲಿದ್ದ ತಮ್ಮ ಗುರು ಜಿನಚಂದ್ರರ ಗೌರವಾರ್ಥವಾಗಿ ಅವರ ಪರೋಕ್ಷದಲ್ಲಿ ವಿನಯಪೂರ್ವಕವಾಗಿ ಪೊನ್ನನಿಂದ ಶಾಂತಿಪುರಾಣವನ್ನು ಬರೆಸಿದರೆಂಬ ಹೇಳಿಕೆಯಿಂದ ಪೊನ್ನನ ಸ್ಥಳ ಪುಂಗನೂರೆಂಬುದು ನಿರ್ವಿವಾದ. ಈ ಪುಂಗನೂರು ಈಗ ಚಿತ್ತೂರು ಜಿಲ್ಲೆಯಲ್ಲಿರುವ ಪುಂಗನೂರೆ. ಇಲ್ಲಿ ಹೇಳಿದ ವಾಣಿಯವಾಡಿ ಆರ್ಕಾಟು ಜಿಲ್ಲೆಯಲ್ಲಿ ಪ್ರಸಿದ್ಧ ವ್ಯಾಪಾರ ಸ್ಥಳವಾಗಿರುವ

ಇಂದಿನ ವಾಣಿಯಂಬಾಡಿಯೆ ಎಂಬುದು ವಿಚಾರಾರ್ಹವಾಗಿದೆ.[1]

ಪೊನ್ನನು ೧೬ನೆಯ ತೀರ್ಥಂಕರನಾದ ಶಾಂತಿನಾಥನ ಚರಿತ್ರೆಯನ್ನೊಳಗೊಂಡ ಶಾಂತಿಪುರಾಣವನ್ನೂ ಜಿನಾಕ್ಷರಮಾಲೆಯನ್ನೂ ರಚಿಸಿದ್ದಾನೆ. ಇವು ಉಪಲಬ್ಧವಾಗಿವೆ. ಇವಲ್ಲದೆ ಭುವನೈಕರಾಮಾಭ್ಯುದಯವೆಂಬ ಲೌಕಿಕ ಕಾವ್ಯವನ್ನು ಬರೆದುದಾಗಿ ಆತನ ಶಾಂತಿಪುರಾಣದ XII–೬೬ನೇ ಪದ್ಯದಿಂದ ತಿಳಿದುಬರುತ್ತದೆ.

ವಿದಿತ ಭುವನೈಕ ರಾಮಾ
ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ ।
ಪದಿನಾಲ್ಕುಂ ಭುವನಂಗಳ್
ಪದಿನಾಲ್ಕಾಶ್ವಾಸ ರಚನೆಗಂ ಬೆಲೆಯಕ್ಕುಂ ॥

'ಭುವನೈಕರಾಮಾಭ್ಯುದಯವು' ೧೪ ಆಶ್ವಾಸಗಳಿಂದ ಕೂಡಿದ್ದು ಅದರ ಬೆಲೆ ೧೪ ಲೋಕಗಳ ಬೆಲೆಗೆ ಸಮಾನವೆಂಬುದಾಗಿ ಕವಿಯು ಪ್ರಶಂಸನೆ ಮಾಡಿಕೊಂಡಿದ್ದಾನೆ. ರಾಷ್ಟ್ರಕೂಟ ಮುಮ್ಮಡಿಕೃಷ್ಣ (ಕನ್ನರ)ನ (೯೩೯-೯೬೮) ಸಾಮಂತನಾಗಿದ್ದ ಶಂಕರಗಂಡನೆಂಬವನಿಗೆ 'ಭುವನೈಕರಾಮ' ಎಂಬ ಬಿರುದಿದ್ದಿತೆಂದು ತಿಳಿದು ಬಂದಿದೆ. ಆದುದರಿಂದ ಇದು ಆ ಭುವನೈಕರಾಮ ಬಿರುದಾಂಕಿತ ಶಂಕರಗಂಡನ ಪರಾಕ್ರಮವನ್ನು ಅಥವಾ ಕನ್ನರನ್ನು ತಕ್ಕೋಳದಲ್ಲಿ ಚೋಳರಾಜಾದಿತ್ಯನನ್ನು ಸೋಲಿಸಿದ ವಿಷಯವನ್ನು ವರ್ಣಿಸುವ ಕಾವ್ಯವಾಗಿರಬಹುದೆಂಬುದಾಗಿ ವಿಮರ್ಶಕರು ಅಭಿಪ್ರಾಯಪಡುತ್ತಾರೆ.[2] ಶಬ್ದಮಣಿದರ್ಪಣದಲ್ಲಿ (೧೨೬೦) ಕೇಶಿರಾಜನು ಈ ಗ್ರಂಥದಿಂದ ಉದ್ಧರಿಸಿದ ಭಾಗವನ್ನು ನೋಡಿದರೆ ಕಾವ್ಯವು ಉತ್ಕೃಷ್ಟವೂ, (ಐತಿಹಾಸಿಕ ದೃಷ್ಟಿಯಿಂದ) ಉಪಯುಕ್ತವೂ ಆಗಿರಬೇಕೆಂದು ನಿಸ್ಸಂದೇಹವಾಗಿ ಹೇಳಬಹುದು. ಆದರೆ ದುರ್ದೈವದಿಂದ ಸಮಗ್ರವಾಗಿ ಗ್ರಂಥವು ದೊರೆಯಲಿಲ್ಲ. ಶಬ್ದಮಣಿ ದರ್ಪಣದಲ್ಲಿ ಉದಾಹರಿಸಿದ ಪದ್ಯವಿದು :

---

1 "ಕಾವೇರಿಯಿಂದ ಗೋದಾವರಿ ವರಮಿರ್ದನಾಡದಾ ಕನ್ನಡ" ಎಂದ ಕಾಲದಲ್ಲಿ ಇದೂ ಕರ್ಣಾಟಾಂತರ್ಗತವಾದ ಪ್ರದೇಶವಲ್ಲವೆ ? ಆದರೆ ವೆಂಗಿ ವಿಷಯಕ್ಕೆ ಈ ಪ್ರದೇಶ ಸೇರಿರಲಾರದು.

2 ಕ. ಸಾ. ಚ, ಪು. ೧೦೧

ಉದಯಾಸ್ತೋನ್ನತಶೈಲ ಸೇತು ಹಿಮವತ್ಕುಕ್ಷಿಲ ಪರ್ಯಂತ ಸಂ
ಪದೆಯಂ ವಾರ್ಧಿತರತ್ನ ರಂಗನಿನದತ್ಕಾಂಚೀಕಲಾಪಾಂಚಿತಾ ।
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ
ರ್ಚಿದಗೆಲ್ಲಂ ಭುವನೈಕರಾಮ ಮಹಿಪಂಗಕ್ಕುಂ ಪೆಱರ್ಗಕ್ಕುಮೇ ॥

## ಪೊನ್ನನ ಕವಿತಾಶಕ್ತಿ ಇತ್ಯಾದಿ

ಪೊನ್ನನು ರತ್ನತ್ರಯರಲ್ಲಿ ಒಬ್ಬನು ; ಕನ್ನರನು ಆದರದಿಂದ ಕೊಟ್ಟ 'ಕವಿ ಚಕ್ರವರ್ತಿ' ಬಿರುದನ್ನು ಪಡೆದವನು ; ವಿದ್ವಾಂಸರಿಂದ 'ಉಭಯ ಕವಿ ಚಕ್ರವರ್ತಿ' ಎಂಬುದಾಗಿ ಹೊಗಳಿಸಿಕೊಂಡವನು. ಪಂಪನಿಗೆ ಕೂಡ ಅರಿಕೇಸರಿ ಕವಿ ಚಕ್ರವರ್ತಿ ಎಂಬ ಬಿರುದನ್ನು ದಯಪಾಲಿಸಿರಲಿಲ್ಲ. ಕನ್ನಡ ಸಾಹಿತ್ಯದಲ್ಲಿ ಕವಿ ಚಕ್ರವರ್ತಿ ಪದವಿಗೆ ಏರಿದವರು ಇನ್ನಿಬ್ಬರು, ರನ್ನ ಜನ್ನರು ; ಜನ್ನನು (೧೨೦೯) ಇದನ್ನು ಹೇಳುತ್ತಾನೆ :

ಕನ್ನರನಾದರದಿಂ ಕುಡೆ
ಪೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ ॥
ಮನ್ನಿಸಿ ಬಲ್ಲಾಳಂ ಕುಡೆ
ಜನ್ನಂ ಕವಿ ಚಕ್ರವರ್ತಿವೆಸರಂ ತಳೆದಂ ॥

ತನಗೆ ಉಭಯ ಕವಿ ಚಕ್ರವರ್ತಿ ಎಂಬ ಹೆಸರನ್ನು ಕೃಷ್ಣ ನೃಪನು ಕೊಟ್ಟುದನ್ನು ಪೊನ್ನನೇ ಈ ಪದ್ಯದಲ್ಲಿ ತಿಳಿಸುತ್ತಾನೆ :

ಭುವನದ ಕನ್ನಡ ಸಕ್ಕದ
ಕವಿಗಳ್ ಸಲೆ ಸಾಲೆ ಸೋಲೆ ಸವಣಂಗಿತ್ತ ॥
ಸವಿವೇಕಮುಭಯ ಕವಿ ಚ
ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ ॥

ಪೊನ್ನನಿಗೆ 'ಪೊನ್ನಿಗ, ಪೊನ್ನಮಯ್ಯ, ಸವಣ, ಕುರುಳ್ಗಳ ಸವಣ' ಎಂಬ ಹೆಸರುಗಳೂ ಉಂಟು. ಪೊನ್ನನು ತನಗಿಂತ ಹಿಂದಿದ್ದ ಪಂಪ ಅಥವಾ ಬೇರಾವ ಕನ್ನಡ ಕವಿಗಳನ್ನು ಸ್ತುತಿಸುವುದಿಲ್ಲ. ಮಾತ್ರವಲ್ಲ ತನ್ನ ಕವಿತಾ ಸಾಮರ್ಥ್ಯವನ್ನು ಶ್ಲಾಘಿಸಿಕೊಳ್ಳುವಾಗ ಸ್ವಲ್ಪ ಎಲ್ಲೆ ಮೀರಿದಂತೆ ಕಾಣುತ್ತದೆ :

ಕನ್ನಡಗವಿತೆಯೊಳಸಗಂ
ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್ ||
ಮುನ್ನುಳ್ಳ ಕಾಳಿದಾಸಂ
ಗನ್ನೂರ್ಮಡಿ ರಚನೆಯೊಳ್ ಕುರುಳ್ಗಳ ಸವಣಂ ||

(ಶಾ. ಪು. I–೧೧)

ಇಲ್ಲಿ ಹಿಂದಣ ಕನ್ನಡ ಕವಿವೃಷಭ ಅಸಗನಿಗಿಂತಲೂ ಸಂಸ್ಕೃತ ಕವಿ ಸಮ್ರಾಟ ಕಾಳಿದಾಸನಿಗಿಂತಲೂ ತಾನು ನೂರ್ಮಡಿ ಮಿಗಿಲೆಂಬುದಾಗಿ ಹೇಳಿದುದು ಸ್ವಲ್ಪ ಹೆಚ್ಚಲ್ಲವೆ ? ಅಸಗನ ಕವಿತೆಯ ಯೋಗ್ಯತೆಯನ್ನು ಇಂದು ನಮಗೆ ಹೇಳಲು ಸಾಧ್ಯವಿಲ್ಲದಿದ್ದರೂ, ಕಾಳಿದಾಸನ ಹಿರಿಮೆ ಜಗದ್ವಂದ್ಯ ವಾಗಿದೆಯಷ್ಟೆ !

## ಶಾಂತಿ ಪುರಾಣ

ಪೊನ್ನ ಮಹಾಕವಿಯಿಂದ ವಿರಚಿತವಾದ ಪುರಾಣ ಚೂಡಾಮಣಿಯೆಂಬ ಶಾಂತಿಪುರಾಣವು ೧೬ ನೆಯ ತೀರ್ಥಂಕರನಾದ ಶಾಂತಿನಾಥನ ಚರಿತೆ ; ಇದರಲ್ಲಿ ೧೨ ಆಶ್ವಾಸಗಳಿವೆ ; ಇದು ಚಂಪೂ ರೂಪದಲ್ಲಿದೆ. ಉಪಮಾತೀತವಾದ ಈ ಕೃತಿಯನ್ನು ಮಲ್ಲಪಯ್ಯ ಪುನ್ನಮಯ್ಯರೆಂಬ ಸಹೋದರರು ಬರೆಯಿಸಿ ಪ್ರಚುರಪಡಿಸಿದರಂತೆ.

ಉಪಮಾತೀತಂ ಕೃತಿ ಶಾಂ
ತಿಪುರಾಣಂ ಸಲೆ ಪುರಾಣ ಚೂಡಾಮಣಿ ಯೆಂ ।
ದುಪಶಮದಿಂ ಬರೆಯಿಸಿ ಮ
ಲ್ಲಪಯ್ಯನುಂ ಪುನ್ನಮಯ್ಯನುಂ ಬರೆಯಿಸಿದರ್ (I–೫೮)

ಪ್ರತಿ ಆಶ್ವಾಸಾಂತ್ಯದ ಗದ್ಯ ಹೀಗಿದೆ :

ಇದು ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ ಶ್ರೀಮದುಭಯ ಕವಿ ಚಕ್ರವರ್ತಿ ನಿರ್ವರ್ತಿತಮುಂ ಅಮ್ಮನ ಭಕ್ತಾಭಿಧಾನ ಮಲ್ಲ ಪಾರ್ಯ ತದನುಜಾತಾವಿಜಾತ ಸಾರಸ್ವತ ಪುನ್ನಮಾರ್ಯ ಕಾರಿತಮುಮಪ್ಪ ಪುರಾಣ ಚೂಡಾಮಣಿಯೊಳ್—ಆಶ್ವಾಸಂ.

ಕಾವ್ಯದ ೯ ಆಶ್ವಾಸಗಳವರೆಗೂ ಶಾಂತಿನಾಥನ ೧೧ ಪೂರ್ವಭವಗಳ ಕಥೆಯು ಬರುತ್ತದೆ. ಕೊನೆಯ ಮೂರು ಆಶ್ವಾಸಗಳಲ್ಲಿ ಮಾತ್ರ ಶಾಂತಿನಾಥನ ಚರಿತೆ ಹೇಳಲ್ಪಟ್ಟಿದೆ. ಕಥಾಭಾಗದಲ್ಲಿ ಶಾಂತಿಪುರಾಣಕ್ಕೂ ಕಮಲಭವ (೧೨೩೫) ಕವಿರಚಿತ ಶಾಂತೀಶ್ವರ ಪುರಾಣಕ್ಕೂ ಕೆಲವೆಡೆ ವ್ಯತ್ಯಾಸಗಳು ಕಂಡು ಬರುತ್ತವೆ.

ಭವಾವಳಿಯ ಕಥೆಗೆ, ಆಗಮಧರ್ಮಗಳ ವಿಚಾರಗಳಿಗೆ ಪೊನ್ನನು ಹೆಚ್ಚಿನ ಗಮನ ಕೊಟ್ಟಂತೆ ಕಾಣುವುದರಿಂದಲೋ ಏನೋ ಈತನ ಕೃತಿಯಲ್ಲಿ ಪಂಪನ ಕೃತಿಯಲ್ಲಿ ಕಂಡುಬರುವ 'ಕಾವ್ಯಧರ್ಮ'ದ ಮನೋಹರತೆ ಘನತೆಗಳು ಇರುವುದಿಲ್ಲ; ಇದು ಉತ್ತಮ ಕಾವ್ಯವೆಂಬುದಕ್ಕಿಂತ ಉತ್ತಮ ಜೈನ ಪುರಾಣವೆಂದರೆ ಒಪ್ಪುವದು. ಲೋಕಾಕಾರ, ದೇಶನಿವೇಶನ, ಚತುರ್ಗತಿ ಸ್ವರೂಪ ಇತ್ಯಾದಿ ಎಂಟು ಜೈನಪುರಾಣ ಲಕ್ಷಣಗಳೂ 'ಉದದಿ ಪುರಾಧಿಪ....' ಇತ್ಯಾದಿ ಲಾಕ್ಷಣಿಕರು ಹೇಳುವ ೧೮ ಮಹಾಕಾವ್ಯ ಲಕ್ಷಣಗಳೂ ಶಾಂತಿ ಪುರಾಣದಲ್ಲಿವೆ; ಅಲ್ಲಲ್ಲಿ ವಿವಿಧ ರಸೋತ್ಪತ್ತಿಗನುಗುಣವಾದ ರಚನೆಗಳೂ ಬಂದಿವೆ. ಆದರೂ ಪಂಪ ರನ್ನರಲ್ಲಿ ಕಂಡುಬರುವ ವರ್ಣನಾಸೌಂದರ್ಯ ಪಾತ್ರರಚನಾ ಕೌಶಲ ಪೊನ್ನನಲ್ಲಿ ಇರುವುದಿಲ್ಲವೆಂದೇ ಹೇಳಬೇಕಾಗಿದೆ.

ಪೊನ್ನನ ಬಂಧವು ಬಹಳ ಪ್ರೌಢವಾಗಿಯೇ ಇದೆ. ಪಾರಿಭಾಷಿಕ ಪದಗಳೂ ಆತನಿಗಿರುವ ಸಂಸ್ಕೃತ ವ್ಯಾಮೋಹವೂ ಒಟ್ಟಿನಲ್ಲಿ ಶೈಲಿಯನ್ನು ಕ್ಲಿಷ್ಟವಾಗಿ ಮಾಡಿವೆ; ಆದರೂ ಕವಿತೆಯಲ್ಲಿ ಸಹಜತೆಯುಂಟು, ನಿರರ್ಗಳತೆಯುಂಟು, ಪಾಂಡಿತ್ಯವುಂಟು.

## ಕೆಲವು ಉತ್ತಮ ರಚನೆಗಳಿಗೆ ನಿದರ್ಶನ

ಪೂರ್ವವಿದೇಹ ದೇಶದ ಉದ್ಯಾನದಲ್ಲಿ ತುಂಬಿಗಳಿಗೆ ಒಂದೊಂದೇ ಹೂವಿನ ಸೌರಭವನ್ನೂ ಕೀರ ಪಿಕಾಳಿಗೆ ಒಂದೊಂದೇ ಹಣ್ಣಿನ ರಸವನ್ನೂ ಸವಿಯಲಾರದೆ ಅಜೀರ್ಣವಾಗುವಂತಾಯಿತಂತೆ :

ಮೆಯ್ವಸವೊಂದೆ ಪೂವಿನೊಳೆ ಪೋಗೆ ತೆಱಂದಿಱಿದಳ್ಳಗೊಂಬಿನೊಳ್
ಪಾಯ್ವದುಮೊಂದೆ ಪಣ್ಣಿರಸಮಂ ಸವಿದಾಱಿರದೆ ಚಂಚುವಂ ಕೆಲ ॥

ಕ್ಕುಯ್ವುದುಮೊಂದೆ ಕೋರಕದೊಳಟ್ಕಿಮೆವೆತ್ತವಚತ್ತು ಲಾಘನಂ
ಗೆಯ್ವುದುಮಾದುದಾ ಮಧುಪ ಕೀರಪಿಕಾಳಿ ನಂದನಂಗಳೊಳ್ (I–೬೩)

ಅಲ್ಲಿನ ಗಂಧಶಾಲಿ ಗದ್ದೆಗಳು :

ಅಮಿತ ಗುಣವರ್ಣನ ಪ್ರ
ಕ್ರಮಕ್ಕೆ ಸಲೆ ನಾಣ್ಚಿತಲೆಯುನೆಱಗಿದ ಸುಜನೋ ।
ತ್ತಮರಂತೆ ಭರದಿನೆಱಗಿದು
ವಮೇಯ ಪರಿಪಕ್ವ ಗಂಧಶಾಲಿವನಂಗಳ್ ॥ (I–೫೯)

ಐದನೆಯ ಆಶ್ವಾಸದಲ್ಲಿ ಜ್ಯೋತಿಃಪ್ರಭೆಯ ಸ್ವಯಂವರವರ್ಣನೆಯು ಈ ಕಾವ್ಯದೊಳಗಣ ಒಂದು ರಮಣೀಯವಾದ ಭಾಗ. ವಂದಿವೃಂದಾರಕರು ಪವಡಿಸಿರ್ದ ಖೇಚರ ರಾಜಕುಮಾರನನ್ನು ಉಪ್ಪಡಿಸಯ್ಯಾ ಎಂಬ ಪದ್ಯಗಳು :

ವಾರಿಜಗಂಧಿ ವಿಭಾತ ಸ
ಮೀರಂ ನಿಜ ಸುರಭಿ ನಿನ್ನಸುಯ್ಯದಱೊಳದಂ
ತೋರಂತಕ್ಕುಮೊ ಪರಗುಣ
ಹಾರಿಗೆ ನಿಜಗುಣಮದೇಕೆ ಸಮನಿಸಿದಪುದೋ ॥

ಇರುಳಿನ ಸೂಱಿಂ ನಿದ್ರೆಗೆ
ಸಿರಿ ಕೊಟ್ಟು ವಿಯೋಗಭರದಿನಿರೆ ಪಗಲಿನ ಸೂಱು ।
ಸಿರಿಗಾಗಲೆ ವೇಟ್ಟುದು ತಡ
ದಿರದುಪ್ಪವಡಿಸು ವಿಯಚ್ಚರಾಂಬರ ಭಾನೂ ॥ (V–೮೫–೮೬)

ಮುದದಿಂ ದಿನನುದಯಂಗೆ
ಯ್ಯದೆಯುಂ ಕಟ್ಟಲೆಯನರುಣನಲೆದೊಂ ನಿನ್ನ ॥
ಭ್ಯುದಯದೊಳಾಂತರಿ ಸೇನೆಯ
ನಿದಿರ್ಚಿ ತಲೆವಿಲ್ಲನೆಱೆದು ತವಿಸುವ ತೆಱದಿಂ ॥ (V–೯೦)

ಇಲ್ಲಿ ಕಾಳಿದಾಸ ಮಹಾಕವಿಯ ರಘುವಂಶದಲ್ಲಿ ಬರುವ ಇಂದುಮತೀ

ಸ್ವಯಂವರವರ್ಣನೆಯ ಅನೇಕ ಪದ್ಯಗಳು ಪೊನ್ನನಿಂದ ಅನುವಾದಿತವಾಗಿವೆ ಎಂಬುದಾಗಿ ವಿದ್ವಾಂಸರು ತೋರಿಸಿರುತ್ತಾರೆ. 'ಮುನ್ನುಳ್ಳ ಕಾಳಿದಾಸಂಗ ನ್ನೂರ್ಮಡಿ' ಎಂಬುದಾಗಿ ಹೇಳಿದವನಿಗೆ ಇದು ಸರಿಯೆ ?

ಛಂದಸ್ಸಿನ ವಿಚಾರ : ಸುಮಾರು ೧೯ ವಿವಿಧ ಛಂದಸ್ಸುಗಳನ್ನು ಪೊನ್ನನು ಬಳಸಿರುವನು. ಚಂಪೂವಿಗೆ ಒಗ್ಗುವ ಖ್ಯಾತವಾದ ಅಕ್ಷರ ವೃತ್ತಗಳೂ ಕಂದ ಗಳೂ ಅಧಿಕ. ಅವುಗಳಲ್ಲಿಯೂ ಶಾಂತಿರಸಾಭಿವ್ಯಕ್ತಿಗೆ ಅನುಗುಣವಾದ ಕಂದ ಗಳೇ ೧೧೭೯ ಎಂಬುದಾಗಿ ಆರ್. ತಾತಾ ಲೆಕ್ಕ ಹಾಕಿದ್ದಾರೆ. (ಒಟ್ಟು ಗ್ರಂಥ ದಲ್ಲಿ ೧೬೩೬ ಪದ್ಯಗಳುಂಟು.) ರಗಳೆಯೂ ೩ ತ್ರಿಪದಿಗಳೂ ಬಂದಿವೆ.

ಪೊನ್ನನು ಪಂಪನಷ್ಟು ನಾಣ್ಣುಡಿಗಳನ್ನು ಪ್ರಯೋಗಿಸದಿದ್ದರೂ ಸಂದರ್ಭೋಚಿತವಾಗಿ ಕೆಲವನ್ನು ಕೊಟ್ಟಿದ್ದಾನೆ :

(೧) ಅಱಿಯದ ಜಡಂ ಪಾಲಂ ದುಗ್ಧಾಬ್ಧಿಗುಯ್ವವೊಲ್ (X-೧೭೪)
(೨) "ಅರ್ಥೀ ದೋಷಂ ನ ಪಶ್ಯತಿ" (X-೧೭೪)
(೩) ಪೞಗಾಂಪರ ನುಡಿ ಮುತ್ತುಂ ಮೆೞಸುಂಗೋದಂದದಕ್ಕೆ (X-೧೮೧)
(೪) ನೆಲ್ಲುಂ ಮೋರುಂ ಕೋದಂತೆ (ಕುಡಿದಂತೆ) (X-೧೮೨)
(೫) ಎರೆಗೆಱಗುವ ಕಿಱುಮೀನಂತಿರೆ (V-೭೬)
(೩) ಮತ್ತು (೪) ಕವಿರಾಜಮಾರ್ಗದಲ್ಲಿ II. ೪, ೫ರಲ್ಲಿ ಬಂದಿವೆ.

## (iii) ರನ್ನ (೯೯೩)

ರತ್ನತ್ರಯರಲ್ಲಿ ಮೂರನೆಯವನಾದ ರನ್ನನು ಹೀಗೆ ಹೇಳಿಕೊಂಡಿದ್ದಾನೆ :

ಕವಿಜನದೊಳ್ ರತ್ನತ್ರಯ
ಪವಿತ್ರರೆನೆ ನೆಗಟ್ದ ಪಂಪನುಂ ಪೊನ್ನಿಗನುಂ ।
ಕವಿರತ್ನನುಮಾ ಮೂವರ್
ಕವಿಗಳ್ ಜಿನಸಮಯ ದೀಪಕರ್ ಪೆಱರೊಳರೇ

(ಅಜಿತ, ೧೨-೩೭)

ಆತನು ಅಜಿತ ಪುರಾಣವನ್ನೂ ಗದಾಯುದ್ಧವೆಂಬುದಾಗಿ ಜನರು ಪ್ರೀತಿ ಯಿಂದ ಕರೆಯುವ ಸಾಹಸಭೀಮವಿಜಯವನ್ನೂ ರನ್ನಕಂದವೆಂಬ ನಿಘಂಟು ವನ್ನೂ ರಚಿಸಿದ್ದಾನೆ. ಅಜಿತ ಪುರಾಣದ (೧೨-೪೨) ಪದ್ಯದಿಂದ ರನ್ನನು

'ಪರಶುರಾಮ ಚರಿತ' ಮತ್ತು 'ಚಕ್ರೇಶ್ವರ ಚರಿತ' ಎಂಬ ಇನ್ನೆರಡು ಕೃತಿಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಆದರೆ ಅವು ದೊರೆತಿಲ್ಲ. ಪ್ರಾಯಶಃ ಅವು ಚರಿತ್ರಾಂಶಗಳನ್ನೊಳಗೊಂಡ ಕಾವ್ಯಗಳಿರಬಹುದು.

ರನ್ನನು ಅಜಿತ ಪುರಾಣದ (೧೨-೪೭) ಪದ್ಯದಲ್ಲಿ ತಾನು ಸೌಮ್ಯ ಸಂವತ್ಸರದಲ್ಲಿ (೯೪೯ರಲ್ಲಿ) ಜನಿಸಿರುವಂತೆ ಹೇಳಿದ್ದಾನೆ ; ತನ್ನ ಅಜಿತ ತೀರ್ಥಂಕರ ಪುರಾಣವನ್ನು 'ಶಕವರ್ಷಂ ಪಂಚದಶಾಧಿಕನವಶತಮಾಗೆ' ವಿಜಯ ಸಂವತ್ಸರದಲ್ಲಿ (೧೨-೫೪) ಪ್ರಕಟಿಸಿದುದಾಗಿ ಹೇಳಿದ್ದಾನೆ (ಶಕವರ್ಷ ೯೧೫= ಕ್ರಿ. ಶ. ೯೯೩). ಗದಾಯುದ್ಧ ರಚನೆಯ ಕಾಲವನ್ನು ಹೇಳುವ ಪದ್ಯದಲ್ಲಿ ಸ್ವಲ್ಪ ತೊಡಕುಂಟು (ಗದಾ. ೧೦-೨೩). ಆದರೆ ಅದನ್ನು ತಿದ್ದಿಕೊಂಡು ರಚನಾ ಕಾಲ ಸು. ೯೮೨ ಇದ್ದರೂ ಇರಬಹುದೆನ್ನುತ್ತಾರೆ.

ಬೆಳುಗಲಿಯಯ್ನೂಱಱೊಳ
ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ ।
ತಿಳಕಮೆನೆ ನೆಗಟ್ದ ಮುದುವೊಳ
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ॥

(ಅಜಿತ, ೧೨-೪೫)

ಈ ಪದ್ಯದಿಂದ ರನ್ನನು ಬೆಳುಗಲಿ ಐನೂರೆಂಬಲ್ಲಿನ ಜಂಬುಖಂಡಿ ಎಪ್ಪತ್ತಕ್ಕೆ ಸೇರಿದ ಮುದುವೊಳಲಿನಲ್ಲಿ (ಇಂದಿನ ಮುಧೋಳ್) ಜನಿಸಿದನೆಂದು ತಿಳಿದುಬರುತ್ತದೆ. ತಾಯಿ ಅಬ್ಬಲಬ್ಬೆ ; ತಂದೆ ಜಿನವಲ್ಲಭೇಂದ್ರ ; ಸಹೋದರರು ದೃಢಬಾಹು, ರೇಚಣ, ಮಾರಯ್ಯ ; ಮಡದಿಯರು ಜಕ್ಕಿ ಮತ್ತು ಶಾಂತಿ ; ಮಗನ ಹೆಸರು ರಾಯ, ಮಗಳ ಹೆಸರು ಅತ್ತಿಮಬ್ಬೆ ; ಗುರುಗಳು ಅಜಿತಸೇನಾಚಾರ್ಯರು ಎಂಬ ಸ್ವವಿಷಯಗಳೂ ಅಜಿತ ತೀರ್ಥಂಕರ ಪುರಾಣದ ೧೨ನೆಯ ಅಶ್ವಾಸದಲ್ಲಿ ಉಲ್ಲೇಖಿತವಾಗಿವೆ. ಮಾತ್ರವಲ್ಲ, ಮೊದಲು (ಅತ್ತಿಮಬ್ಬೆ ಚಾವುಂಡರಾಯರಂತಹವರ) ಸಾಮಂತರ ಮತ್ತು ಮಾಂಡಲಿಕರ ಆಶ್ರಯದಲ್ಲಿ ಅಭ್ಯುದಯಪರನಾಗಿ ಕೊನೆಯಲ್ಲಿ ತೈಲಪ ಚಕ್ರವರ್ತಿ (೯೭೩-೯೯೭) ಮತ್ತು ಯುವರಾಜ ಸತ್ಯಾಶ್ರಯ ಇವರ ಆಶ್ರಯದಲ್ಲಿ ತಾನು ಉದಯ ಪರಂಪರೆಯನೆಯ್ದಿದಂತೆ ಹೇಳುತ್ತಾನೆ :

ಮೊದಲೊಳ್ ಸಾವಂತರಿನಿನಿ
ಸುದಿತೋದಿತನಾಗಿ ಮಂಡಲೇಶ್ವರನಿಂದ ।
ಭ್ಯುದಯಪರನೆನಿಸಿ ಚಕ್ರಿಯಿ
ನುದಯ ಪರಂಪರೆಯನೆಯ್ದಿದಂ ಕವಿರನ್ನಂ ॥

(ಗದಾ. ಯು. ೧-೩೪)

ಈತನಿಗೆ ಕವಿರತ್ನ, ಕವಿಚಕ್ರವರ್ತಿ, ಕವಿಕುಂಜರಾಂಕುಶ, ಉಭಯ ಕವಿ, ಕವಿ ತಿಲಕ ಇತ್ಯಾದಿ ಬಿರುದುಗಳಿದ್ದಂತೆ ತಿಳಿದುಬರುತ್ತದೆ.

ತನಗಿಂತ ಹಿಂದೆ ಇದ್ದ ಕನ್ನಡ ಕವಿಗಳಲ್ಲಿ ಪಂಪ ಪೊನ್ನರನ್ನು ಈತನು ಸ್ಮರಿಸಿದ್ದಾನೆ ; ನಾಗಚಂದ್ರ (೧೧೦೦), ನಯಸೇನ (೧೧೧೨), ಪಾರ್ಶ್ವ (೧೨೦೫), ಮಧುರ (೧೩೮೫) ಮಂಗರಸ ಮೊದಲಾದವರು ರನ್ನನನ್ನು ಹೊಗಳಿದ್ದಾರೆ.

ರನ್ನನು ತನ್ನ ಕವಿತಾಸಾಮರ್ಥ್ಯವನ್ನು ಎಲ್ಲೆಮೀರಿತೋ ಎಂಬಂಥ ಆತ್ಮವಿಶ್ವಾಸ ಸ್ವಾಭಿಮಾನಪೂರ್ವಕವಾದ ಮಾತುಗಳಲ್ಲಿ ಘೋಷಿಸುತ್ತಾನೆ. ವಸುಂಧರೆಯು 'ಬಹುರತ್ನೆ' ಎಂಬ ಮಾತನ್ನು ಸುಳ್ಳುಮಾಡಿಸಿದನಂತೆ ; 'ವಾಗ್ದೇವಿಯ ಭಂಡಾರದ ಮುದ್ರೆಯನ್ನು' ತನ್ನ 'ಸಾರಸ್ವತಮೆನಿಪ ಕವಿತೆಯೊಳ್' ಒಡೆದನಂತೆ ; ಇತ್ಯಾದಿ.

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ ।
ಮುಸುಳಿಸಿದನೊ ಬಹುರತ್ನಾ
ವಸುಂಧರಾ ಎಂಬ ವಾಕ್ಯಮಂ ಕವಿರತ್ನಂ ॥

(ಅಜಿತ, ೧-೬೪)

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ ।
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥

(ಗದಾ. ಯು. ೧-೩೮)

ರತ್ನ ಪರೀಕ್ಷಕನಾಂ ಕೃತಿ
ರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾ ।
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ ॥

(ಗದಾ. ಯು. ೧-೪೪)

ರಸಮಂ ಭಾವಮುಮಂ ಕಾ
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ ।
ಪೊಸದೇಸೆಯ ನುಡಿಗಳೊಳಂ
ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ ॥ (೧-೩೯)

ಚಕ್ರವರ್ತಿಗೆ ಅವಶ್ಯಂಭಾವಿಯಾದ ಕೋಶ, ಕಂಠಿಕೆ, ಶ್ವೇತಾತಪತ್ರ, ಸಿಂಹಾಸನ ಇತ್ಯಾದಿ ರಾಜಚಿಹ್ನೆಗಳನ್ನು ಈ ಕವಿಚಕ್ರವರ್ತಿ ಹೇಗೆ ತಾಳ್ದು ತನ್ನ ಪಟ್ಟವನ್ನು ಸಾರ್ಥಕ್ಯಗೊಳಿಸಿದನೆಂಬುದನ್ನು ಕೇಳಿರಿ :

ಮತಿಕೋಶಂ ಪದವಿದ್ಯೆಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿಮಾದೇವಿ ಪದೋಕ್ತಿ ಭೇರಿ ಕಲಿತಂ ಸಿಂಹಾಸನಂ ಸಂದಲಂ ॥
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ ॥

(ಅಜಿತ, ೧-೮೬)

ರನ್ನನ ಮಡದಿಯರು ಜಕ್ಕಿ, ಶಾಂತಿ ; ಮಗನ ಹೆಸರು ರಾಯ, ಮಗಳ ಹೆಸರು ಅತ್ತಿಮಬ್ಬೆ, ಗುರುಗಳು ಅಜಿತಸೇನಾಚಾರ್ಯರು, ಮೊದಲಾದ ಸ್ವವಿಷಯ ಗಳು ಅಜಿತ ತೀರ್ಥಂಕರ ಪುರಾಣದ ೧೨ನೆಯ ಆಶ್ವಾಸದ ಇತರ ಪದ್ಯಗಳಲ್ಲಿ ಉಲ್ಲೇಖಿತವಾಗಿವೆ. ಮಾತ್ರವಲ್ಲ, ಮೊದಲು ಚಾವುಂಡರಾಯನಂಥವರ ಆಶ್ರಯದಲ್ಲಿದ್ದು ಬಳಿಕ ಚಾಲುಕ್ಯ ಚಕ್ರವರ್ತಿ ತೈಲಪ ಮತ್ತು ಆತನ ಮಗ ಸತ್ಯಾಶ್ರಯ (೯೯೭-೧೦೦೮) ಇವರ ಆಸ್ಥಾನವನ್ನು ಸೇರಿದಂತೆ ತೋರುವುದು.

## ಅಜಿತ ತೀರ್ಥಂಕರ ಪುರಾಣ ತಿಲಕ

ಇದು ರನ್ನನು ಬರೆದ ಧಾರ್ಮಿಕ ಗ್ರಂಥ. ಎರಡನೆಯ ತೀರ್ಥಂಕರನಾದ ಅಜಿತನಾಥನ ಚರಿತೆಯನ್ನು ೧೨ ಆಶ್ವಾಸಗಳಾಗಿ ಚಂಪೂ ರೂಪದಲ್ಲಿ ದಾನ

ಚಿಂತಾಮಣಿ ಅತ್ತಿಮಬ್ಬೆಗಾಗಿ ಇವನು ರಚಿಸಿದನು. ಇದರಲ್ಲಿ ಸಗರ ಚಕ್ರವರ್ತಿಯ ಕಥೆಯೂ ಬಂದಿರುತ್ತದೆ. ಗ್ರಂಥ ಪ್ರಾರಂಭದಲ್ಲಿ ಅತ್ತಿಮಬ್ಬೆಯ ಪವಿತ್ರ ಜೀವನವನ್ನು ಮನಸಾರೆ ಹೊಗಳಿ ಒಂದಿಷ್ಟು ಸಮಕಾಲೀನ ಚರಿತ್ರಾಂಶಗಳನ್ನು ಎರಚಿದ್ದಾನೆ. ಇತರ ಜೈನಪುರಾಣಗಳಲ್ಲಿ ಕಂಡುಬರುವ ಭವಾವಳಿಯ ಗೊಂದಲವಿಲ್ಲಿ ಬರುವುದಿಲ್ಲ. ಅಷ್ಟು ಮತಪ್ರಕ್ರಿಯೆಗಳೂ ಇರುವುದಿಲ್ಲವಾದುದರಿಂದ ಜೈನೇತರರೂ ಓದಿ ಸುಲಭವಾಗಿ ರಸಾಸ್ವಾದನೆ ಮಾಡಬಹುದಾದ ಕಾವ್ಯವಿದು.

ಇದು ಸಕಲ ಮುನೀಂದ್ರ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀಪಾದಪದ್ಮ ಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿ ಚಕ್ರವರ್ತಿ ಕವಿರತ್ನ ನಿರ್ಮಿತ ಶ್ರೀ ದಾನಚಿಂತಾಮಣಿ ನಿರ್ಮಾಪಿತ ಶ್ರೀಮದಜಿತ ತೀರ್ಥಂಕರ ಪುರಾಣ ತಿಲಕದೊಳ್....

ಇದು ಜೈನಪುರಾಣ ಗ್ರಂಥವಾದುದರಿಂದ ಪಾತ್ರನಿರೂಪಣೆ ಸನ್ನಿವೇಶ ರಚನೆಗಳಲ್ಲಿ ಕವಿಗೆ ಮತ್ತಿನ ಲೌಕಿಕ ಕಾವ್ಯವಾದ ಗದಾಯುದ್ಧದಲ್ಲಿ ವಹಿಸಬಹುದಾದ ಸ್ವಾತಂತ್ರ್ಯವಿಲ್ಲ, ಆದರೂ ಭಕ್ತಿ ಜ್ಞಾನ ವೈರಾಗ್ಯಗಳ ಪಾವನ ಚಿತ್ರಣದ ಮೂಲಕ ತನ್ನ ಅದ್ಭುತ ಕವಿತಾ ಸಾಮರ್ಥ್ಯವನ್ನು ತೋರಿಸಿದ್ದಾನೆ. ಶೈಲಿಯಲ್ಲಿ ಸಹಜ ಸೌಂದರ್ಯವುಂಟು. ಉಭಯ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯವಿದ್ದು ಸಂಗೀತ ನಾಟ್ಯಶಾಸ್ತ್ರಕೋವಿದನೂ ಆಗಿದ್ದನೆಂಬುದು ಆತನು ಜಿನ ಶಿಶುವಿನ ಜನ್ಮಾಭಿಷೇಕ, ಇತ್ಯಾದಿ ಸಂದರ್ಭಗಳಲ್ಲಿ ಮಾಡುವ ವರ್ಣನೆಗಳಿಂದ ಸ್ಪಷ್ಟವಾಗುವುದು :

ಇಂದ್ರನು ಜಿನಶಿಶುವನ್ನು ಮಣಿಮಯೋತ್ತುಂಗ ಸಿಂಹಾಸನದ ಮೇಲೆ ಪೂರ್ವಾಭಿಮುಖನಾಗಿರಿಸಿ ಪರಮೋತ್ಸವವನ್ನು ಮಾಡಿದನು.

ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ ಶೃಂಗಾರಾದಿಗಳಪ್ಪೊಂಬತ್ತುಂ ರಸಂಗಳುಮನೆಂಟುಂ ಸ್ಥಾಯಿಭಾವಂಗಳುಮಂ ಮೂವತ್ತು ಮೂಱು ಸಂಚಾರಿಗಳುಮಂ ಎಂಟು ಸಾತ್ವಿಕ ಭಾವಂಗಳುಮನಾಂಗಿಕ|ಸಾತ್ವಿಕ|ವಾಚಿಕಾಹಾರ್ಯಕಮೆಂಬ ನಾಲ್ಕಭಿನಯಮುಮಂ ಲೋಕಧರ್ಮಿ ನಾಟ್ಯಧರ್ಮಿಯೆಂಬೆರಡು ಧರ್ಮಿಯುಮಂ ಭಾರತಿಯುಂ ಸಾತ್ವತಿಯುಂ ಕೈಶಿಕಿಯುಮಾರಭಟಿಯುಮೆಂಬ

ನಾಲ್ಕು ವೃತ್ತಿಯುಮಂ ಮನಾವತಿಯುಮಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರಮಾಗಧಿಯೆಂಬ ನಾಲ್ಕು ವೃತ್ತಿಯುಮಂ . . . . ಸಪ್ತ ಸ್ವರಮುಮಂ . . . . ದಶರೂಪ ಲಕ್ಷಣಮುಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ ಭರತಸಾರ ಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮ ಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್—

ಸರಸದ ವಾದ್ಯದೊಳ್ ನೆಗೞೆ ಸಂನಿನಿವಂತತಿ ಘೇರಿಘೇರಿಮಾ
ಯ್ಗಗಿಗಮಮಂ ಮಧೂರುಗಮಕ್ರೆಂಕಟಕ್ರೆಂಪಮಪತ್ರಕುತ್ರರುಃ ।
ಸರಿಪಮತಂಬಿತಂತತಿವಿಕುದ್ರಕಕುದ್ರಕಮೆಂಬ ಭೇದದೊಳ್
ಪರಿಣತಿ ರಂಜಿಸುತ್ತುಮಿರೆ ರಂಜಿಸಿದರ್ ಪೊಸದೇಸೆಕಾರ್ತಿಯರ್ ॥

ಪಳವದ ಶಿವಳಯ ಜುಂಕದ
ಮೊಳಸಿನ ಜೇಕಿರದ ಸಿಪಿಱಿ ಸಿಪ್ಪಿನ ಲಯದಿಂ ।
ದಳಲದೆ ಕುಣಿದರ್ ಕೆಲಬರ್
ಕಳರುತಿಗಳೆ ತಾಳಮಾಗೆ ಕುಣಿದರ್ ಕೆಲಬರ್ ॥

(V ವ. ೨೯–೩೦)

ಅಂತು ವಾದಕನುಪವಾದನಿನೆಸೆವ ಹೃದ್ಯವಾದ್ಯ ವಿಶೇಷಂಗಳೊಳ್ ನೆಗೞ್ವ ಸಮಪಾಣಿಯುಮಧಃಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ ದ್ರುತವಿಲಂಬಿತಮಧ್ಯಮುಮೆಂಬ ಲಯತ್ರಯದೊಳಂ ಸಮಯ ಶ್ರೋತಾವಹೆಯುಂ ಗೋಪುಚ್ಛೆಯುಮೆಂಬ ತ್ರಿತಯದೊಳಂ ಚಿತ್ರೆ ದಕ್ಷಿಣೆ ಕಾರ್ತಿಕೆಯೆಂಬ ವೃತ್ತಿತ್ರಯದೊಳಂ ಗುರುಸಂಚಯ ಲಘುಸಂಚಯ ಗುರು ಲಘುಸಂಚಯಮೆಂಬ ಸಂಚಯತ್ರಯದೊಳಂ ಸಮಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯದೊಳಂ ಮತ್ತಂ—

ಅಕ್ಷರಸಮಂ ಮಂಗಸಮಂ ತಾಳಸಮಂ ಯತಿಸಮಂ ಲಯಸಮಂ ಚ ।
ನ್ಯಾಸಸಮಂ ಪಾದಸಮಂ ಪಾಣಿಸಮಂ ವಾದ್ಯಮಷ್ಟವಿಧಂ ॥

ಎಂಬ ವಾದ್ಯಕ್ಕುಪಗತಮಾಗೆ ಮೂವತ್ತಾಱು ದೃಷ್ಟಿವಿಕಲ್ಪದೊಳಂ ಪದಿಮೂಱು ಶಿರೋವಿನ್ಯಾಸದೊಳಂ ಏೞು ಭ್ರೂರೇಚಿತದೊಳಂ ಮೂಱುಂ ಗುಣಾನಿಯೊಳಂ ಮೂಱುಂ ನಾಸಿಕಾಸ್ಫುರಿತದೊಳಂ ಮೂಱು ಮಧರ ಸ್ಪಂದನದೊಳು

ಮೂಱುಂ ಚಿಬುಕವಿಕಾರದೊಳವೊಂಬತ್ತು ಗ್ರೀವಾಭಂಗಿಯೊಳ ಮಱುವತ್ತು ನಾಲ್ಕು ಮಸ್ತಕಕ್ರಿಯೆಯೊಳೆಮಯ್ದು ಪಾರ್ಶ್ವವಿಧಿಯೊಳಂ ಮೂಱು ಮುದರಕರ್ಮದೊಳವ್ಯೆದು ಕಟೀವಿಧಾನದೊಳವ್ಯೆದು ಮೂರು ವಿಲಸಿತ ದೊಳವ್ಯೆದು ಪದಸಂಚಾರದೊಳ್ ನೆಱಿದು—ಇತ್ಯಾದಿ.

ಇಲ್ಲಿ ರನ್ನನು ಸಂಗೀತಶಾಸ್ತ್ರಕಾರನ ಪಾತ್ರವನ್ನು ವಹಿಸಿಬಿಟ್ಟಿದ್ದಾನೆ.

ಅಜಿತ ತೀರ್ಥಂಕರ ಪುರಾಣದಲ್ಲಿ ತಿಲಕಪ್ರಾಯವಾಗಿರುವ ಒಂದು ಸನ್ನಿವೇಶವೆಂದರೆ ದ್ವಿತೀಯಾಶ್ವಾಸದಲ್ಲಿ ಸುಸೀಮಾನಗರದ ರಾಜನಾದ ವಿಮಲ ವಾಹನನು ವೈರಾಗ್ಯಪರನಾಗಿ ಆಡಿದ ಮಾತು :

X X X

ಮತಿಗೆಟ್ಟು ಜೀವಧರ್ಮಾ
ಮೃತಮಂ ಸೇವಿಸದಧರ್ಮಮಂ ಸೇವಿಸಿ ದು ।
ರ್ಗತಗಿಱಿದೀ ಜವನೆಂಬಟ
ಸಿತಿಂಬ ದೈವಕ್ಕೆ ಪೋಗಿ ಪಾಟಿಂಬಡುವೈ ॥ (II–೫೯)

ಎನಿತೆನಿತು ಕಟಿದ ಭವಮಂ
ನೆನೆದಪೆಯೆನಿತೆನಿತೆನಿತು ಭವದ ಬಂಧುಗಳಂ ನೀ ।
ನೆನೆದಪೆಯೆನಿತೆನಿತೊಡಲಂ
ನೆನೆದಪೆಯೆಲೆ ಜೀವ ನೀನೆ ಪೇಟಿ ಪವಣೊಳವೇ ॥ (II–೬೦)

ಎನಿತಂ ಕಕ್ಕುದಿಗುದಿದಪೆ
ಎನಿತಂ ಕಕ್ಕುಲಗಲ್ದಪೈ ಜೀವನೆ ನೀ ।
ನೆನಿತಂ ಮಲ್ಮಲ ಮಱುಗುವೆ
ಎನಿತಂ ಸಂಸಾರದೊಳಗೆ ತಿಱ್ರನೆ ತಿರಿವಯ್ ॥ (II–೬೧)

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಡಂ ।
ಬಡುಜೀವ ನಿನ್ನಕಾಲಂ
ಪಿಡಿವೆಂ ಧರ್ಮಮನೆ ಮಗುಟಿ ಬಲ್ಪಿಡಿವಿಡಿಯಾ ॥ (೬೩)

ಜನನ ಮೃತಿ ದೇವನಾರಕ
ಮನುಷ್ಯತಿರ್ಯಗ್ವಿಕಲ್ಪಗತಿಗಳೊಳೆನಸುಂ ।
ನಿನಗೆ ಸುಖಮಿಲ್ಲ ನೆಟ್ಟನೆ
ಮನದೊಳ್ ಭಾವಿಪೊಡಸಾರಮೀ ಸಂಸಾರಂ ॥ (೬೬)

ಜಸಮಂ ಧರ್ಮಮುಮನುಪಾ
ರ್ಜಿಸುವೊಡೆ ಚದುರ್ದುವೆ ನಿಟ್ಟೆ ನಿಮಗಕ್ಕಟ ಮಾ ।
ನಸವಾಟ್ಗೆ ಮಱುಗಿ ಸೋಲ್ತಪಿ
ರೆಸಗುವುದೆಟ್ಟಿಯೊಳೆ ಜಸಮುಮಂ ಧರ್ಮಮುಮಂ ॥ (II–೭೮)

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶಾರೀರಮಾನಸಾಗಂತುಕ ದುಃ ।
ಖಂಗಳೆನೆ ಮಾಟ್ಪಿವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ ॥ (II–೮೦)

ಮುಮುಕ್ಷುವಿಗೆ ಇದರಿಂದ ಬೇರೆ ಯಾವುದು ಗತಿಯುಂಟು ?

## ಸಾಹಸಭೀಮ ವಿಜಯ

ರನ್ನನ ಧವಳಕೀರ್ತಿ ಅಮರವಾಗಿ ನಿಲ್ಲುವುದು ಅವನ ಸಾಹಸಭೀಮ ವಿಜಯ (ಗದಾಯುದ್ಧ)ದಿಂದ. ಇದರಲ್ಲಿ ನಿಜವಾಗಿಯೂ ಕವಿ ವಾಗ್ದೇವಿಯ ಭಂಡಾರದ ಬೀಗಮುದ್ರೆಯೊಂದನ್ನು ಒಡೆದ ರಸಿಕವೀರನು.

ಈ ಕೃತಿಯೂ ಚಂಪೂರೂಪದಲ್ಲಿ ಹತ್ತು ಆಶ್ವಾಸಗಳಾಗಿ ರಚಿತವಾಗಿದೆ. ಪಂಪನ ಶಿಷ್ಯನೊ ಎಂಬಂತೆ ಪಂಪಭಾರತದ ೧೩ನೆಯ ಆಶ್ವಾಸದೊಳಗಣ 'ಭೀಮ ದುರ್ಯೋಧನ ಗದಾಯುದ್ಧಂ, ದುರ್ಯೋಧನ ವಧೆ' ವಸ್ತುವನ್ನೇ ಇಟ್ಟುಕೊಂಡು ರನ್ನನು ಒಂದು ಅತ್ಯುತ್ತಮ ಕಾವ್ಯವನ್ನು ರಚಿಸಿರುವನು.[1] ಇಱಿವಬೆಡಂಗ, ಸಾಹಸಭೀಮ, ಅಕಳಂಕಚರಿತ ಇತ್ಯಾದಿ ಬಿರುದುಗಳುಳ್ಳ ಸತ್ಯಾಶ್ರಯನನ್ನು ಕಥಾನಾಯಕನನ್ನಾಗಿ ಮಾಡಿ ಭೀಮನೊಡನೆ ಹೋಲಿಸಿ ಈ ಗದಾಯುದ್ಧವನ್ನು ರಚಿಸಿರುವುದಾಗಿ ಹೇಳುತ್ತಾನೆ. ಪಂಪನು ಯುದ್ಧಾಂತ್ಯದಲ್ಲಿ ಅರ್ಜುನ ಸುಭದ್ರೆಯರಿಗೆ ಪಟ್ಟಾಭಿಷೇಕ ಮಾಡಿದರೆ, ರನ್ನನು ಭೀಮ ದ್ರೌಪದಿಯರಿಗೆ ಪಟ್ಟಾಭಿಷೇಕ ಮಾಡುತ್ತಾನೆ. "ಪಂಪನು ಕಗ್ಗಲ್ಲಿನಿಂದ

---

1 'ಸಾಹಸಭೀಮ' ಎಂಬುದು ಪಂಪನ ಮಾತು (ಕ. ಕೈಪಿಡಿ, ಸಂ. ೨. ಪು ೫೯೮)

ಅದ್ಭುತ ವಿಗ್ರಹವನ್ನು ಕಡೆದು ಮಹೋನ್ನತಿಯನ್ನೂ ಶಕ್ತಿಯನ್ನೂ ತೋರಿಸಿದರೆ, ರನ್ನನು ಸಣ್ಣ ವಿಗ್ರಹವನ್ನು ಸುಂದರವಾದ ಸೂಕ್ಷ್ಮಕಲಾಕರ್ಮದಲ್ಲಿ ತೋರಿ, ಉನ್ನತಿಯನ್ನೂ ಶಕ್ತಿಯನ್ನೂ ಬಿಡದೆ, ಪಂಪನಿಗೆ ಸರಿತೂಕವಾಗಿ, ಕಡೆಗೆ ಒಂದು ಕೈ ಮೇಲೋ ಎಂಬಂತೆ ಸಾಹಸಭೀಮ ವಿಜಯದಲ್ಲಿ ಕಾಣುವನು" ಎಂಬುದಾಗಿ ಶ್ರೀಯವರು ಹೇಳಿದ ಮಾತನ್ನು ಇಲ್ಲಿ ನೆನೆಯಬಹುದು.[1] ಈ ಮಹಾಕೃತಿಯಲ್ಲಿ ಇನ್ನೊಂದು ವೈಶಿಷ್ಟ್ಯವುಂಟು—ಅದರಲ್ಲಿ ಉದ್ದಕ್ಕೂ ಕಂಡುಬರುವ ನಾಟಕೀಯತೆ. ಇಲ್ಲಿ ಭಟ್ಟನಾರಾಯಣನ 'ವೇಣೀಸಂಹಾರ ನಾಟಕ'ವೂ ಭಾಸನ 'ಊರುಭಂಗ'ವೂ ತಮ್ಮ ಪ್ರಭಾವವನ್ನು ಬೀರಿವೆ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಗಳುಂಟು. ಈ ರೂಪಕಗಳ ಪ್ರಭಾವವನ್ನು ಪ್ರಸ್ತಾಪಿಸುವಲ್ಲಿಯೂ ಪಂಪರನ್ನರ ವಿಷಯದಲ್ಲಿ ಶ್ರೀಯವರು ಹೇಳಿದಂತೆ ಭಟ್ಟನಾರಾಯಣ ಭಾಸರಿಗೆ "ಸರಿತೂಕವಾಗಿ, ಕಡೆಗೆ ಒಂದು ಕೈ ಮೇಲೋ" ಎಂಬಂತೆ ರನ್ನನು ಕಾಣುವನು ಎಂದರೆ ಅತಿಶಯೋಕ್ತಿಯಾಗದು. ಕೆಳಗಿನ ಸಂವಾದಿ ಶ್ಲೋಕಗಳನ್ನು ನೋಡಿದರೆ ಸಾಕು.[2] ಇನ್ನು ಇದರ ನಾಟಕೀಯತೆಯ ಪ್ರಶಸ್ತಿ ಎಷ್ಟೆನ್ನುವುದಕ್ಕೆ ಶ್ರೀಯವರು ಅಲ್ಲೊಂದು ಇಲ್ಲೊಂದು ಮಾತನ್ನು ಬಿಟ್ಟು ಇದನ್ನು "ಗದಾಯುದ್ಧ ನಾಟಕಂ" ಎಂಬ ವೀರರಸಪ್ರಧಾನವಾದ ರುದ್ರನಾಟಕವನ್ನಾಗಿ ಮಾಡಿದುದೇ ಸಾಕ್ಷಿ. ಇನ್ನೊಂದು ನೂತನ ಕ್ರಮ ರನ್ನನದು—'ಸಿಂಹಾವಲೋಕನಕ್ರಮ'ದಿಂದ ಭಾರತದೊಳಗಣ ಕಥೆಯೆಲ್ಲವನ್ನೂ ಪಾತ್ರಗಳ ಬಾಯಲ್ಲಿ ಹೇಳಿಸುವುದು. ಭೀಮಸೇನನ ಪ್ರತಿಜ್ಞೆ, ದುರ್ಯೋಧನನ ಪ್ರಲಾಪ, ಭೀಮದುರ್ಯೋಧನರ ಪರಸ್ಪರ ಮೂದಲಿಕೆ ಮೊದಲಾದ ಸಂದರ್ಭಗಳಲ್ಲಿ ಭಾರತದ ಕಥೆಯ ಮುಖ್ಯಾಂಶಗಳು ಸ್ವಾರಸ್ಯವಾಗಿ ನಿರೂಪಿಸಲ್ಪಟ್ಟಿವೆ.

---

[1] ಕನ್ನಡ ಕೈಪಿಡಿ, ಸಂ. ೨. ಪು. ೫೯.

[2] ಎಂ. ಎ. ರಾಮಾನುಜೈಯ್ಯಂಗಾರ್ಯರಿಂದ ಪರಿಶೋಧಿತವಾದ ಮುದ್ರಣ. ಗದಾಯುದ್ಧ, ಪು. XLV :

ಗದಾಯುದ್ಧ

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾನಾಲ್ವರುಂ ಸಂಗರಾ
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತ ವ್ರತಾ ।

ರನ್ನನ ಶೈಲಿ, ಪಾತ್ರರಚನಾ ಕೌಶಲ, ರಸಪುಷ್ಟಿ ವಿಧಾನ, ಸನ್ನಿವೇಶ ನಿರ್ಮಾಣ ಇತ್ಯಾದಿ ಗುಣಗಳನ್ನು ಕೊಂಡಾಡುವ 'ರನ್ನಕವಿ ಪ್ರಶಸ್ತಿ' ಎಂಬ ವಿದ್ವಾಂಸರ ವಿಮರ್ಶಾತ್ಮಕ ಲೇಖನ ಸಂಗ್ರಹವನ್ನು ಪರಿಶೀಲಿಸಬೇಕು.

ರನ್ನನು ಮಹಾಕವಿ. ಆತನು ಚಿತ್ರಿಸಿದ ದುರ್ಯೋಧನನ ಪಾತ್ರವನ್ನು ನೋಡಿದರೆ ಸಾಕು ; ಕನ್ನಡ ಸಾಹಿತ್ಯದಲ್ಲಿ ಎಲ್ಲಿ ಹುಡುಕಿದರೂ ಅಂಥ ಚಿತ್ರಣ ದೊರೆಯುವುದು ದುರ್ಲಭವೆನ್ನಬಹುದು. ಪ್ರತಿನಾಯಕನಾದ ದುರ್ಯೋಧನನ ಪತನವು ವಿಧಿವಿಲಸನದಿಂದ ಅನಿವಾರ್ಯವಾದಂತೆಯೇ ಸರಿ ; ಆದರೆ ಆವನಲ್ಲಿ ನಿರೂಪಿತವಾದ ಕೆಲವು ಉದಾತ್ತ ರೇಖೆಗಳಿಂದ ಅವನಲ್ಲಿ ನಮಗೆ ಅನುಕಂಪವುಂಟಾಗುವಂತೆ ಕವಿ ಇಂದ್ರಜಾಲವಾಡಿದ್ದಾನೆ. ದುರ್ಯೋ

---

ಚರಣವ್ಯಾಪಿಕೆಯುಂ ಭವತ್ಪರಿಭವಂ ಸಂಚಾರಕಂ ಕೌರವೇ
ಶ್ವರನೀತಂ ಪಶುವಾಗೆ ಬೇಳ್ದನಿವನು ಕೋಪಾಗ್ನಿಯಿಂದಗ್ನಿಜೇ ॥ (VIII–೪೬)

ಜನನೀ ಸ್ತನ್ಯಮನುಂಡೆನಾ ಒಟಿಕ ನೀಂ ಸೋಮಾವ್ಯತಂ ದಿವ್ಯ ಭೋ
ಜನಮೆಂಬಿಂತಿವನುಂಡೆನಾಂ ಬಟಿಕ ನೀಂ ಬಾಲತ್ವದಿಂದೆಲ್ಲಿಯುಂ ।
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕನ್ನಿಂದೆ ನೀಂ ಮುಂಚಿದೆಯ್
ಮನೆಯೊಳ್ ಸೂಟ್ಟಿಡಮಾಯ್ತಿದೆಂದೆಡೆಯೊಳಂ ಹಾ ವತ್ಸ ದುಶ್ಶಾಸನಾ ॥
(V–೭)

ವೇಣೀಸಂಹಾರ ನಾಟಕ

ಚತ್ವಾರೋ ವಯಮೃತ್ವಿಜಃ ಸ ಭಗವಾನ್ ಕರ್ಮೋಪದೇಷ್ಟಾ ಹರಿಃ
ಸಂಗ್ರಾಮಾಧ್ವರದೀಕ್ಷಿತೋ ನರಪತಿಃ ಪತ್ನೀ ಗೃಹೀತವ್ರತಾ ।
ಕೌರವ್ಯಾಃ ಪಶವಃ ಪ್ರಿಯಾಪರಿಭವಕ್ಲೇಶೋಪಶಾಂತಿಃ ಫಲಂ
ರಾಜನ್ಯೋಪನಿಮಂತ್ರಣಾಯ ರಸತಿ ಸ್ಫೀತಂ ಯಶೋದುಂದುಭಿಃ (I–೨೫)

ಮಯಾ ಪೀತಂ ಪೀತಂ ತದನು ಭವತಾಂಬಾಸ್ತನಯುಗಂ
ಮದುಚ್ಛಿಷ್ಟೈರ್ವೃತ್ತಿಂ ಜನಯಸಿ ರಸೈರ್ವತ್ಸಲತಯಾ ।
ವಿತಾನೇಷ್ವಪ್ಯೇವಂ ಮಮ ತವ ಚ ಸೋಮೇ ವಿಧಿರಭೂತ್
ನಿವಾಪಾಂಭಃ ಪೂರ್ವಂ ಪಿಬಸಿ ಕಥಮೇವಂ ತ್ವಮಧುನಾ ॥ (VI–೧೮)
ಇತ್ಯಾದಿ.

ಧನನು ಶತ್ರುಪುತ್ರನಾದ ಅಭಿಮನ್ಯುಕುಮಾರನ ಕಳೇಬರವನ್ನು ಕಂಡು ಆತನ ಗುಣಗಾನವನ್ನು ಮನಸಾರೆ ಮಾಡಿದುದು, ತನ್ನ ಮಗನಾದ ಲಕ್ಷಣ ಕುಮಾರನನ್ನು ನೆನೆದು 'ಜನಕಂಗೆ ಜಲಾಂಜಲಿಯಂತನೂಭವಂ ಕುಡುವುದುಚಿತಮದು ಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ' ಎಂಬುದಾಗಿ ಮಮ್ಮಲ ಮರುಗಿದುದು, ಕರ್ಣದುಶ್ಶಾಸನರ ಮೃತದೇಹಗಳನ್ನು ಕಂಡು 'ಮನ್ಯೂದ್ಗತ ಕಂಠನಾಗಿ, ದಹ್ಯಮಾನಾಂತಃಕರಣನುಮಾಗಿ' ದುಃಖಿಸಿದುದು, ಪಾಂಡವರೂ ಸುಳ್ಳು ಹೇಳಿದ್ದಾರೆಂಬುದನ್ನು ತೋರಿಸುವುದು, ಭೀಮನೊಡನೆ ಗದಾಯುದ್ಧವಾಗುತ್ತಿದ್ದಾಗ ದುರ್ಯೋಧನನು ಯುದ್ಧಧರ್ಮವನ್ನು ಬಿಡಲಿಲ್ಲ (ಇಱಿಯೆಂ ಬಿಟ್ಟನನೆಂಬೀ ಬಿಱುಬಿಂದಂ VIII–೩೨), ಆದರೂ ಭೀಮನು, ಬಲದೇವಾದಿಗಳು 'ಆಗದಾಗದೊದೆಯಲ್ಕೆ ಏಕಾದಶಾಕ್ಷೋಹಿಣೀ ಬಲಲಕ್ಷ್ಮೀಪತಿಯಂ' ಎಂದು ಆಕ್ಷೇಪಿಸುತ್ತಿದ್ದಂತೆ ಕೌರವೇಂದ್ರನ ಮಕುಟವನ್ನು ವಾಮಾಂಘ್ರಿಯಿಂದ ಭಂಗಿಸಿದುದು, ಕೊನೆಯಲ್ಲಿ ಅಶ್ವತ್ಥಾಮನು ತಂದ ಉಪಪಾಂಡವರ ತಲೆಗಳನ್ನು 'ನೀಡುಂ ಭಾವಿಸಿ ನೋಡಿ', 'ವಿವೇಕ ವಿಕಳರವೋಲ್ ಬಾಲರ ತಲೆಯನರಿದು ತಂದೆಯೊ ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ' ಎಂಬುದಾಗಿ ಗುಡುಗಿದುದು, ಇತ್ಯಾದಿ ಸನ್ನಿವೇಶಗಳು ದುರ್ಯೋಧನನನ್ನು ನಿಜವಾಗಿಯೂ ಮಹಾನುಭಾವನನ್ನಾಗಿ ಮಾಡಿಬಿಟ್ಟಿವೆ. ಇದನ್ನು ನೋಡಿ ಕೆಲವರು 'ರನ್ನನ ಭೀಮನು ಗೆದ್ದು ಸೋತನು, ದುರ್ಯೋಧನನು ಸೋತು ಗೆದ್ದನು' ಎಂಬುದಾಗಿ ಹೇಳುವುದುಂಟು

ಮೇಲೆ ಹೇಳಿದ ಸನ್ನಿವೇಶಗಳಲ್ಲಿ ಆಯ್ದುಕೊಂಡ ಭಾಗಗಳನ್ನು ರನ್ನನ ರಸಘಟ್ಟಗಳೆನ್ನಬಹುದು. ಅವಲ್ಲಿ ಕೆಲವು :

ದುರ್ಯೋಧನನು ಅಭಿಮನ್ಯುವಿನ ಕಳೇಬರವನ್ನು ಕಂಡು ಆಡಿದ ಉದಾತ್ತ ವಚನಗಳು :

ಪಲರಿರ್ದು ಕಾದಿದರ್ ಮೆ
ಯ್ಗಲಿಗಳ್ ನಿನ್ನೊಂದೆ ಮೆಯ್ಯೊಳಂ ತವೆ ಕೊಂದೈ ।
ಪಲರಂ ನಿನ್ನಂ ಪೆತ್ತಳ್
ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್ ॥ (IV–೫೫)

ಅಸಮಬಲ ಭವದ್ವಿಕ್ರಮ
ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ ।
ರ್ಥಿಸುವೆನಭಿಮನ್ಯು ನಿಜ ಸಾ
ಹಸೈಕದೇಶಾನುಮರಣಮೆಮಗಕ್ಕೆ ಗಡಾ ॥ (IV–೫೬)

ಕರ್ಣನನ್ನು ನೋಡಿ ಕಣ್ಣೀರನ್ನು ಕೋಡಿಯಾಗಿ ಹರಿಸುತ್ತಾ ರಾಜಾಧಿರಾಜನು ಪ್ರಲಾಪಿಸುವುದು ಎಂಥ ಕಲ್ಲೆದೆಯನ್ನಾದರೂ ಕರಗಿಸುವುದು.

ನಿನ್ನ ಕೆಳೆಯಂ ಸುಯೋಧನ
ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ ।
ನೆನ್ನದೆ ಜೀಯೆನ್ನದೆ ದೇ
ವೆನ್ನದೆಯೇಕುಸಿರದಿರ್ಪೆಯಂಗಾಧಿಪತೀ ॥ (VI–೧೬)

ಅನೃತಂ ಲೋಭಂ ಭಯಮೆಂ
ಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿಸಂ ।
ದನ ನನ್ನಿಚಾಗಮಣ್ಮಿಂ
ಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ ॥ (VI–೧೭)

ಆನಱಿವೆಂ ಪೃಥೆಯಱಿವಳ್
ದಾನವರಿಪುವಱಿವನರ್ಕನಱಿವಂ ದಿವ್ಯ ।
ಜ್ಞಾನಿ ಸಹದೇವನಱಿವಂ
ನೀನಾರ್ಗೆಂದಾರುಮಱಿಯರಂಗಾಧಿಪತೀ ॥ (VI–೧೮)

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ ।
ನೀನುಳ್ಳೊಡುಂಟು ಪೋಟಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ ॥ (VI–೨೦)

ಇನ್ನೂ ಅನೇಕ ತೆರನಾಗಿ ಹಲುಬಿ ಸಂಜಯನೊಡನೆ ಹೇಳುತ್ತಾನೆ—

ಕೆಳೆಯಂಗಾಯ್ತುಸುವೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ ।

ಡಳಮುಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ
ನಳನಿಂ ಸುಟ್ಟೆನುಮಿಲ್ಲ ಮತ್ಕ್ರಿಯತಮಂ ಕರ್ಣಂಗಿದೇಂ ಕೂರ್ತನೋ ॥ (V-೩೧)

ಕವಿಯು ಒಂದು ಸುಂದರವಾದ ಸಮಯೋಗಾಲಂಕಾರದ ಮೂಲಕ ಕುರುಕುಲಾರ್ಕನೂ, ಅರ್ಕನೂ ಅಸ್ತಮಿಸಿದರು ಎಂಬ ಚರಮಗೀತವನ್ನು ಹಾಡುತ್ತಾನೆ—

ಪಂಕಜಮುಂ ಸುಹೃದ್ವದನ ಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ದು ಚ ।
ಕ್ರಾಂಕಮಗಲ್ವಿನಂ ಕ್ರಮದಿನಂಬರವಂ ಬಿಸುಟುರ್ಬಿನಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ॥ (IX-೩೫)

## › ೩. ನಾಗವರ್ಮ I (ಸು. ೯೯೦)

ನಾಗವರ್ಮರು ಒಬ್ಬರೇ, ಇಬ್ಬರೇ, ಮೂವರೇ, ಅವರ ಕಾಲವಾವುದು ಇತ್ಯಾದಿಯಾಗಿ ಅನೇಕ ವಾದವಿವಾದಗಳು ನಡೆದಿವೆ.[1] ಅಂತು ಪ್ರಸಿದ್ಧವಾದ ನಾಗವರ್ಮರಿಬ್ಬರಿದ್ದರೆಂಬುದು ವಿದ್ವಾಂಸರ ಬಹುಮತಕ್ಕೆ ಒಪ್ಪಿದುದಾಗಿದೆ. ಅವರಲ್ಲಿ ಮೊದಲನೆಯ ನಾಗವರ್ಮನು ಛಂದೋಂಬುಧಿಯನ್ನೂ ಕರ್ಣಾಟಕ ಕಾದಂಬರಿಯನ್ನೂ ರಚಿಸಿದ್ದಾನೆ.

ನಾಗವರ್ಮ ವಿರಚಿತ ಛಂದೋಂಬುಧಿಯಲ್ಲಿ ಬರುವ—

ಅರಸಂ ರಕ್ಕಸಗಂಗಂ
ಗುರುಗಳ್ ನೆಗಟ್ದಜಿತಸೇನದೇವರ್ ದಯೆಯಿಂ ।
ಪೊರೆವ ನೃಪನಣ್ಣನೆನೆ ಮ
ಚ್ಚರಿಸುವರಾರ್ ನಾಕಿಯಿರುಳೊಳೇಂ ಪುಟ್ಟದನೇ ॥ (I–೨೭)

ಗಂಡರ ಮೂಕುತಿಯೆನಿಸಿದ
ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ ।

---

1 ಕ. ಕ. ಚ., ಸಂಪುಟ ೧, ಪು. ೫೨ ; 'ಕೆಲವು ಕನ್ನಡ ಕವಿಗಳ ಕಾಲ ವಿಚಾರ' (ಡಾ॥ ವೆಂಕಟಸುಬ್ಬಯ್ಯ).

ಕೊಂಡಾಡಿ ಪೊರೆದನೆನೆ ಧರೆ
ಕೊಂಡಾಡದೆ ಕೊಂಡುಕೊನೆಯದೇ ನಾಕಿಗನಂ ॥ (I–೨೮)

ಈ ಪದ್ಯಗಳ ವಿಚಾರವಾಗಿ ಕೆಲವರು ಇವು ಪ್ರಕ್ಷಿಪ್ತವಾಗಿರಬಹುದೆನ್ನುತ್ತಾರೆ. ಇವುಗಳು ಸ್ವೀಕೃತವಾದರೆ ನಾಗವರ್ಮನು ರಾಚಮಲ್ಲನ (೯೭೪–೯೮೪) ತಮ್ಮನಾದ ರಕ್ಕಸಗಂಗನ ಕಾಲದಲ್ಲಿ ಆತನ ಮಂತ್ರಿಯಾದ 'ಅಣ್ಣ,' 'ರಾಯ' ಇತ್ಯಾದಿ ಹೆಸರುಗಳಿಂದ ಪ್ರಸಿದ್ಧನಾದ ಚಾವುಂಡರಾಯನ ಆಶ್ರಿತನಾಗಿಯೂ ಅಜಿತಸೇನಾಚಾರ್ಯರ ಶಿಷ್ಯನಾಗಿಯೂ ಇದ್ದನೆನ್ನಬಹುದು. ಅಲ್ಲದೆ ಕಾದಂಬರಿಯಲ್ಲಿ, "ಸತ್ಕೃತಿವನಿತೆಗಿದೌಚಿತ್ಯಮೆಂದಿತ್ತನತ್ಯುತ್ಸವದಿಂದ ವಿದ್ವತ್ಸಭಾಮಂಡಲಿ ತಣಿವಿನೆಗಂ ಭೋಜರಾಜಕ್ಷಿತೀಶಂ" ಎಂದು ಹೇಳಿರುವುದನ್ನು ಗಮನಿಸಿ, ರಾ. ನರಸಿಂಹಾಚಾರ್ಯರು ನಾಗವರ್ಮನು ಉಲ್ಲೇಖಿಸಿದ ಭೋಜರಾಜನು ೧೦ನೆಯ ಶತಮಾನದ ಅಂತ್ಯದಲ್ಲಿ ಧಾರಾಪುರವನ್ನಾಳಿದ ಭೋಜರಾಜನಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಕಾರಣಗಳಿಂದ ನಾಗವರ್ಮನು ಸುಮಾರು ೯೯೦ರಲ್ಲಿದ್ದಿರಬೇಕು ಎನ್ನುವರು.[1] ಛಂದೋಂಬುಧಿಯಲ್ಲಿ ತಾನು ಸಯ್ಯಡಿಯಾತನೆಂದೂ ತನ್ನ ತಂದೆ ವೆಂಗಿಪಟುವಿನ ವೆಣ್ಣಮಯ್ಯನೆಂಬ ವೈದಿಕ ಬ್ರಾಹ್ಮಣನೆಂದೂ ಹೇಳಿಕೊಂಡಿದ್ದಾನೆ. ಪಂಪ ಪೊನ್ನರಂತೆ ಇವನೂ ವೆಂಗಿ ವಿಷಯದವನು. ಪಂಪನಂತೆ ಇವನ ಪೂರ್ವಜರೂ ಬ್ರಾಹ್ಮಣರು. ನಾಗವರ್ಮನು ಜೈನನೆಂಬುದಾಗಿ ತಿಳಿಯಬಹುದು. ಹಿಂದೆ ಸೂಚಿಸಿದಂತೆ ಆತನು ಅಜಿತಸೇನಾಚಾರ್ಯರ ಶಿಷ್ಯನಾಗಿದ್ದನು ; ಮಾತ್ರವಲ್ಲದೆ ಛಂದೋಂಬುಧಿಯ (ಕಿಟಲ್ ಸಂಪಾದಿತ) ಆಶ್ವಾಸಾಂತ್ಯ ಗದ್ಯದಲ್ಲಿ—

"ಇದು ಸಮಸ್ತ ಸುರಾಸುರೇಂದ್ರ ಮುನೀಂದ್ರ ಮಣಿಮಕುಟ ಘಟಿತ ಶ್ರೀಮದ್ಭಗವದರ್ಹತ್ ಪರಮೇಶ್ವರ ಚಾರುಚರಣಾರವಿಂದ ದ್ವಂದ್ವಮಕರಂದ ಮತ್ತಮಧುಕರಾಯಮಾನ ವಿಬುಧಜನ ಮನಃಪದ್ಮಿನೀರಾಜಹಂಸಂ ಶ್ರೀಮತ್ಕವಿರಾಜಹಂಸ ನಾಗವರ್ಮನಿರ್ಮಿತಮಪ್ಪ ಛಂದೋಂಬುಧಿಯೊಳ್" ಎಂಬುದಾಗಿ ಅರ್ಹಂತನ ಸ್ಮರಣೆ ಬಂದಿರುತ್ತದೆ. ಇನ್ನು ನಾಗವರ್ಮ ಎಂಬುದಾಗಿ 'ವರ್ಮ' ಅಭಿಧೇಯ ಬ್ರಾಹ್ಮಣವರ್ಗದವರಿಗೆ ಹಿಂದಣ

---

1 ಕ. ಕ. ಚ., ಸಂ. ೧, ಪು. ೫೨.

ಕಾಲದಲ್ಲಿ, ರೂಢವಲ್ಲ, ('ಶರ್ಮ', ಇಲ್ಲವೆ, ತಂದೆಯಂತೆ 'ಅಯ್ಯ' ಸೇರಿದ ನಾಗವಯ್ಯ ಇತ್ಯಾದಿ ಹೆಸರಿರಬಹುದಿತ್ತು). ಯಾವ ಕಾರಣದಿಂದಲೋ ನಾಗವರ್ಮನು ಪಂಪಪೊನ್ನರ ದಾರಿಯಲ್ಲಿ ಧಾರ್ಮಿಕ ಗ್ರಂಥರಚನೆಗೆ ಪ್ರವೇಶಿಸ ಲಿಲ್ಲ. ತಾನು ಯುದ್ಧವೀರನೆಂದೂ, ಸತ್ಕವಿಯೆಂದೂ ಹೇಳಿಕೊಂಡಿದ್ದಾನೆ.

ಕುಂತೀಪುತ್ರಂ ಪೊಣರ್ದ ರಣದೊಳ್ ಪದ್ಮಜಂ ಶಾಸ್ತ್ರದೊಳ್ ಶ್ರೀ
ಕಾಂತಂ ಮತ್ತಂ ಪಿರಿಯಸಿರಿಯೊಳ್ ಸಿಂಧುಜಂ ಶೌಚದೊಳ್ ಕ ।
ರ್ಣಂ ತಪ್ಪಿಲ್ಲೆಂದೆನಿಪ ನುಡಿಯೊಳ್ ವಿಕ್ರಮಾದಿತ್ಯನಂತೋ
ರಂತಾಂತೌದಾರತೆಯೊಳೆಸೆದಂ ಕಂದಕಂದರ್ಪನೆಂದು ॥ (ಛಂದೋಂ. I—೨೪)

ನವರಸಮುಣ್ಮೆ ಮಾತು ಪೊಸತಾಗಿರೆ ದೇಸಿಯೆ ದೇಸೆವೆತ್ತುದಂ
ಬವೊಲಿರೆ ಜಾಣ್ ಮನಂಗೊಳಿಸೆ ಪೂಣ್ದಿರದರ್ಥಕೃತಿಪ್ರಬಂಧಮಂ ।
ಕಿವಿಗಿನಿದಾಗೆ ಪೊಚ್ಚಪೊಸತಾಗಿ ಮನೋಹರಮಾಗೆ ಪೇಳ ಸ
ತ್ಕವಿ ಕವಿರಾಜಹಂಸ ಎನೆಪೆಟಲೊಡರ್ಚಿದೆನೀ ಪ್ರಬಂಧಮಂ ॥
(ಛಂದೋಂ. I—೧೧)

ಪ್ರಸ್ತುತ ಬಾಣಕೃತ ಕಾದಂಬರೀ ಅನುವಾದವಾದ ಕರ್ಣಾಟಕ ಕಾದಂಬರಿಯನ್ನು ಕುರಿತು ಸ್ವಲ್ಪ ಪರಿಶೀಲನೆ ಮಾಡೋಣ. "ಕನ್ನಡ ಸಾಹಿತ್ಯ ದಲ್ಲಿ ಕಾದಂಬರಿಯಷ್ಟು ಮೇಲಾದ ಪರಿವರ್ತನವು ಇನ್ನೊಂದಿಲ್ಲ ಎಂದು ಧೈರ್ಯವಾಗಿ ಹೇಳಬಹುದು. ಇಷ್ಟಾದರೂ ಈ ಪರಿವರ್ತನವು ಬಾಣ ಕಾದಂಬರಿಯ ಅದ್ಭುತ ಪಾಂಡಿತ್ಯಪ್ರತಿಭೆಗಳ ಅವಿಚ್ಛಿನ್ನ ಪ್ರವಾಹದ ದರ್ಶನ ವನ್ನು ಮಾಡಿಕೊಟ್ಟಿಲ್ಲ ಎಂದರೆ ತಪ್ಪಾಗದು", ಎಂಬ ಮುಗಳಿಯವರ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದು.[1] ಸಂಸ್ಕೃತದ ಮೂಲಗ್ರಂಥ ಕಾವ್ಯ ಮಯವಾದ ಗದ್ಯದಲ್ಲಿದೆ. ಆದರೆ ಅದು ಅನೇಕ ಕಡೆ ಕಬ್ಬಿಣದ ಕಡಲೆ; ಶಬ್ದಾರ್ಥಚಮತ್ಕೃತಿಗಳ ಗೊಂಡಾರಣ್ಯದಲ್ಲಿ ಎಂತಹ ಪಂಡಿತನಾದರೂ ಎಡವಿ ಬೀಳುವನು. ಇಂತಹ ಮಹಾಕೃತಿಯನ್ನು ಚಂಪೂರೂಪಕ್ಕೆ ಕನ್ನಡದಲ್ಲಿ ಇನಿದಾಗಿ ಇಳಿಸಿದ ನಾಗವರ್ಮನು ಅಭಿನಂದನಾರ್ಹನು. ಇದು ಮೂಲದ

---

1 ಮುಗಳಿ, ಕ. ಸಾ. ಚ., ಪು. ೧೬೬.

ಪ್ರತಿಪದಾರ್ಥ ಅನುವಾದವಲ್ಲ. ಅನೇಕ ವರ್ಣನಾಭಾಗಗಳನ್ನು ಬಿಟ್ಟಿದ್ದಾನೆ. ಆದರೆ ಮೂಲದ ಆನುಪೂರ್ವಿ ಸ್ವಾರಸ್ಯಗಳು ಕೆಡದಂತೆ ತನ್ನದೇ ಆದ ಮಾರ್ಗದಲ್ಲಿ ಇದೊಂದು ಸ್ವತಂತ್ರ ಕೃತಿಯೊ ಎಂಬಂತೆ ಕವಿಯು ತನ್ನ ಕಾರ್ಯವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿರುವನು.

ಇದೊಂದು ಪ್ರೇಮಶೃಂಗಾರದ ಮಹಾಕೃತಿ. ಸೌಂದರ್ಯ ಕರುಣೆಗಳ ಮನೋಹರ ಚಿತ್ರ. ಮೂರು ಜನ್ಮಗಳಲ್ಲಿ ಇನಿಯರು ಪಡಲಾರದ ಬವಣೆಗಳನ್ನನುಭವಿಸಿ ಕೊನೆಯಲ್ಲಿ ಪವಿತ್ರ ಪ್ರೇಮಧ್ವಜವನ್ನು ಎತ್ತಿಹಿಡಿದ ಕಥೆಯಿದು.

## ಕೆಲವು ಸುಂದರ ಉದಾಹರಣೆಗಳು

ಪಂಪಾ ಸರೋವರದ ಉತ್ಪತ್ತಿಯನ್ನು ಉತ್ಪ್ರೇಕ್ಷಿಸಿ ವರ್ಣಿಸಿದ ರೀತಿ :

ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದನಬ್ಜೋದ್ಭವಂ
ಪಡೆದಂ ಪೆರ್ಗಡಲಂ ಮಹಾಪ್ರಳಯದೊಳ್ ದಿಕ್ಸಂಧಿಗಳ್ ಬಂಧಮಂ ।
ಬಿಡೆ ಬಿಟ್ಟಿತ್ತಿಳೆಗಾಗಸಂ ಧರಣಿಯಂ ಪೆರ್ಬಂದಿ ಕಿೞ್ತಿತ್ತಿದೊಂ
ದೆಡೆ ನೀರ್ ತೀವಿತೆನಲ್ಕೆ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ ॥

(ಕಾದಂಬರೀ ಸಂಗ್ರಹ, ಪು. ೮–ಪ. ೩೭)

ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ
ಜಲಮಾದತ್ತಲ್ತು ಚಂದ್ರಾತಪಮಮೃತರಸಾಕಾರಮಾಯ್ತಲ್ತು ಹೈಮಾ ।
ಚಲಮಂಭೋರೂಪದಿಂದಂ ಪರಿಣಮಿಸಿದುದಂತಲ್ತು ನೈರ್ಮಲ್ಯ ಶೋಭಾ
ಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವದಾಯ್ತಚ್ಛಷಂಡಂ ॥

ಮಹಾಶ್ವೇತೆಯ ವೃತ್ತಾಂತದಲ್ಲಿ ಬರುವ ಪದ್ಯಗಳು—

ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮ
ತ್ತಿತ್ತ ಮದೋತ್ಕಕೋಕಿಲ ಕದಂಬಕವೆಯ್ದೆ ವಿಜೃಂಭಿಸಿತ್ತು ತಾ ।
ನಿತ್ತಲಡರ್ದ ಚಂದ್ರಹತಕಂ ತಲೆದೋಱಿದನೋವೊ ಕೆಟ್ಟೆನೀ
ಚಿತ್ತಜತಾಪವಗ್ಗಲಿಸಿದಪ್ಪುದು ಮದ್ಧೃದಯಾಂತರಾಳದೊಳ್ ॥

(ಪು. ೬೦–ಪ. ೭೮)

ಕರುಣಿಸು ದೈವಮೆ ಪಾಲಿಸು
ಹರಾದ್ರಿ ರಕ್ಷಿಸೆಲೆ ರಾತ್ರಿ ಶರಣಾಗು ಸರೋ ।

ವರಮೆ ವನದೇವಿಯರಿರಾ
ನೆರೆದೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ ॥ (ಪ್ರ. ೬೩—ಪ. ೨೫)

ಚಂದ್ರಾಪೀಡನು ಮಹಾಶ್ವೇತೆಯೊಡನೆ ಸತ್ತವರಿಗಾಗಿ ಅಳುವುದು ನಿಷ್ಫಲವೆಂದು ಹೇಳಿ ಗಂಡ ಸಾಯಲು ಸಾಯದಿದ್ದ ಮಹಾಸತಿಗಳ ಪಟ್ಟಿಯನ್ನು ಕೊಡುತ್ತಾನೆ :

ಸತ್ತಳೆ ಕಾಮದೇವನ ಪರೋಕ್ಷದೊಳಾ ರತಿ ಪಾಂಡು ಸತ್ತೊಡಂ
ಸತ್ತಳೆ ಕುಂತಿ ಮತ್ತಭಿಮನ್ಯು ಕುಮಾರಕನಂದು ಸತ್ತೊಡೇ ।
ನುತ್ತರೆ ಸತ್ತಳೇ ನೆಗಟ್ದ ಸಿಂಧು ನೃಪಾಲಕನಂದು ಸತ್ತೊಡಂ
ಸತ್ತಳೆ ದುಶ್ಶಳಾನೆನಿತೆಯಿಂತಿವು ನೀವಱಿದಂದವಲ್ಲವೇ ॥
(ಪ್ರ. ೬೯—ಪ. ೧೨೨)

ಮಂತ್ರಿ ಶುಕನಾಸನು ಚಂದ್ರಾಪೀಡನಿಗೆ ಹೇಳಿದ ನೀತಿಯಲ್ಲಿ ಬರುವ ಒಂದು ಪದ್ಯ :

ಮೊದಲೊಳ್ ರಾಜ್ಯಾಭಿಷೇಕ ಪ್ರಬಲ ಜಲಮೆ ಕರ್ಚುತ್ತು ದಾಕ್ಷಿಣ್ಯಮಂ ಹೋ
ಮದ ಧೂಮಂ ಚಿತ್ತದೊಳ್ ತೊಟ್ಟನೆ ಮಲಿನತೆಯಂ ಪೊರ್ದಿಸಿತ್ತೋಪಿರಲ್ಕ ।
ಟ್ಟಿದ ಪಟ್ಟಂ ಬರ್ಪಮುಪ್ಪಂ ಮೆಱೆಯಿಸಿತಧಿಕಕ್ಷಾಂತಿಯಂ ವಿಪ್ರವರ್ಗಾ
ಸ್ಪದದರ್ಭಾನೀಕ ಸಮ್ಮಾರ್ಜನಿ ಕಳೆದುದೆನಲ್ ದುಷ್ಕರಪ್ಪರ್ ನೃಪಾಲರ್ ॥

ತನ್ನ ಗ್ರಂಥದ ಉತ್ಕೃಷ್ಟತೆಯನ್ನು ನಾಗವರ್ಮನು ಹೀಗೆ ಗ್ರಂಥಾಂತ್ಯ ಪದ್ಯದಲ್ಲಿ ಹೇಳುತ್ತಾನೆ :

ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಮೆಂದೀಗಳಾ
ದುದು ಕಾದಂಬರಿ ಸೇವ್ಯ ಮಾದ.ದನಿತುಂ ತಾನೆಯ್ತೆ ಭೂಭಾಗದೊಳ್ ।
ವಿದಿತ ಶ್ರೀಕವಿ ನಾಗವರ್ಮನ ವಚಃಸಂದೋಹದಿಂ ದೋಷಮೊಂ
ದದಲಂಕಾರದ ವಸ್ತು ಬಂಧಮಿದು ತಾನೇಂ ಮಾಡದೇಂ ಗೆಯ್ಕದೋ ॥

ನಾಗವರ್ಮನ ಕನ್ನಡ ಸರಳವಾಗಿಯೂ ಶಕ್ತಿಯುತವಾಗಿಯೂ ಇದೆ. ಕಥನ ನಿರೂಪಣೆ ನಿರರ್ಗಳವಾಗಿ ಸಾಗುತ್ತದೆ. ಕೆಲವೆಡೆ ಮೂಲದ ಭಾವಗಳು ಬಿಟ್ಟುಹೋಗಿವೆ. "ಹೀಗೆ ಅಲ್ಲಲ್ಲಿ ಕವಿ ಎಡವಿರುವನಾದರೂ ಮೂಲದ

ಭಾವಗಳನ್ನು ಸಂಗ್ರಹಿಸುವಾಗ ಹಲವು ಕಡೆ ವಿವೇಚನೆಯನ್ನುಪಯೋಗಿಸಿದ್ದಾನೆ."[1] ಇದು ಸ್ತುತ್ಯವೇ ಸರಿ.

### ೪. ದುರ್ಗಸಿಂಹ (೧೦೩೦)

ಮುಂದೆ ಚಂಪೂಕಾವ್ಯಕ್ಷೇತ್ರದಲ್ಲಿ ಹನ್ನೊಂದನೆಯ ಶತಮಾನದ ಪೂರ್ವಾರ್ಧದವರೆಗೆ ಯಾವ ಗಣ್ಯಕವಿಯೂ ಉದಯಿಸಿದಂತೆ ಕಂಡುಬರುವುದಿಲ್ಲ. ಚಾಲುಕ್ಯ ಜಗದೇಕಮಲ್ಲ ಜಯಸಿಂಹನ (೧೦೧೨–೪೨) ಸಂಧಿವಿಗ್ರಹಿಯಾಗಿದ್ದ ದುರ್ಗಸಿಂಹನೆಂಬ ಬ್ರಾಹ್ಮಣಕವಿ ಪಂಚತಂತ್ರವೆಂಬ ನೀತಿಗ್ರಂಥವನ್ನು ಚಂಪೂರೂಪದಲ್ಲಿ ಬರೆದನು. ಇದು ವಸುಭಾಗಭಟ್ಟ ಕೃತ ಪಂಚತಂತ್ರದ ಕನ್ನಡ ಅನುವಾದವೆಂಬುದಾಗಿ ಕವಿ ಹೇಳಿರುತ್ತಾನೆ.

ವಸುಭಾಗ ಭಟ್ಟಕೃತಿಯಂ
ವಸುಧಾಧಿಪಹಿತಮನಖಿಲವಿಬುಧಸ್ತುತಮಂ ।
ಪೊಸತಾಗಿರೆ ವಿರಚಿಸುವೆಂ
ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ ॥

ದುರ್ಗಸಿಂಹನು ತನ್ನ ವಿಷಯವಾಗಿ ಕೆಲವಂಶಗಳನ್ನು ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ : ಕರ್ಣಾಟಕಾಂತರ್ಗತವಾದ ಕಿಸುಕಾಡಿನಲ್ಲಿ ಸಯ್ಯಡಿ ಎಂಬಲ್ಲಿ "ಶ್ರುತಿವಿಹಿತ ಶುದ್ಧಮಾರ್ಗನುಂ ನಿತ್ಯಹೇಮಾಧ್ಯಯನಾನೇಕ ಯಾಗಾವಭೃತಸ್ನಾನ ಪವಿತ್ರಗಾತ್ರನುಂ, ಭಗವನ್ನಾರಾಯಣ ಚರಣಾಂಬುಜ ಸ್ಮರಣ ಪರಿಣತಾಂತಃಕರಣನುಂ, ತರ್ಕ ವ್ಯಾಕರಣ ಕಾವ್ಯನಾಟಕ ಭರತ ವಾತ್ಸ್ಯಾಯನಾದ್ಯಶೇಷ ವಿದ್ಯಾಸಮುದ್ರತರುಣಗುಣೈಕ ಪುಣ್ಯನುಂ ಧರಾಮರಾಗ್ರಗಣ್ಯನುಂ" ಆಗಿದ್ದ ದುರ್ಗಮಯ್ಯನ ಮಗ ದೇವದ್ವಿಜಗುರು ಜನಪದಸೇವಾನಿರತ ಈಶ್ವರಾರ್ಯನಿದ್ದನು ; ಕಮ್ಮೆಕುಲದ ಗೌತಮಗೋತ್ರೋದ್ಭವನಾದ ಈಶ್ವರಾರ್ಯನ ಮಗನೇ ದುರ್ಗಸಿಂಹ. ಈತನು ಸಯ್ಯಡಿಯಲ್ಲಿ ಹರಿಹರ ದೇವಾಲಯಗಳನ್ನೂ ಕಟ್ಟಿಸಿರುವನಂತೆ. ಈ ಅಂಶಗಳಿಂದಲೂ ಕವಿಯು

---

1 ಟಿ. ಎಸ್. ವೆಂಕಣ್ಣಯ್ಯ, ಕಾದಂಬರೀ ಸಂಗ್ರಹ, ಪು. lxiii

ಗ್ರಂಥಾವತಾರದಲ್ಲಿ ಮಾಡಿದ ವಿಷ್ಣು ಶಿವ ಬ್ರಹ್ಮ ಸರಸ್ವತಿ ಚಂದ್ರ ಸೂರ್ಯ ಗಣಪತಿ ದುರ್ಗಿ ಪರವಾದ ಸ್ತೋತ್ರಗಳಿಂದಲೂ ಆತನು ಭಾಗವತ ಸಂಪ್ರದಾಯದ ಸ್ಮಾರ್ತ ಬ್ರಾಹ್ಮಣನೆಂಬುದಾಗಿ ತಿಳಿಯಬಹುದು. ಸುಮಾರು ೧೦೩೦ರಲ್ಲಿ ಇದ್ದನು.

## ದುರ್ಗಸಿಂಹನ ಪಂಚತಂತ್ರ

ಹಿಂದೆ ಸೂಚಿಸಿದಂತೆ ವಸುಭಾಗಭಟ್ಟನು ಸಮಸ್ತಜನೋಪಕಾರಾರ್ಥವಾಗಿ ಹೇಳಿದ ಪಂಚತಂತ್ರ ಕಥೆಯನ್ನು ಕನ್ನಡದಲ್ಲಿ ದುರ್ಗಸಿಂಹನು "ಹೊಸತಾಗಿರುವಂತೆ ವಿರಚಿಸಿದನು." ಸಂಸ್ಕೃತದಲ್ಲಿ ವಿಷ್ಣುಶರ್ಮ ವಿರಚಿತ ಪಂಚತಂತ್ರವು ಪ್ರಸಿದ್ಧ. ಇದು ಅನೇಕ ಪಾಠಾಂತರಗಳಲ್ಲಿ ಉಪಲಬ್ಧವಾಗಿದೆ. ಆದರೆ ಸಂಸ್ಕೃತದಲ್ಲಿ ವಸುಭಾಗಭಟ್ಟಕೃತಪಂಚತಂತ್ರವಿದ್ದಿತೆಂಬುದು ದುರ್ಗಸಿಂಹನ ಮೂಲಕ ತಿಳಿದುಬಂದಿದೆ. ಈ ದೃಷ್ಟಿಯಿಂದ ಇದಕ್ಕೆ ಭಾರತೀಯ ಮಹತ್ವವಿದೆ.[1] ವಿಷ್ಣುಶರ್ಮನ ಪಂಚತಂತ್ರದ ಕಥೆಗಳಿಗೂ ಇದಕ್ಕೂ ಕೆಲವೆಡೆಗಳಲ್ಲಿ ವ್ಯತ್ಯಾಸವುಂಟು. ದುರ್ಗಸಿಂಹನು ಪ್ರಸಿದ್ಧನಾದ ವಿಷ್ಣುಶರ್ಮನ ಹೆಸರನ್ನು ತನ್ನ ಕೃತಿಯಲ್ಲಿ ಹೇಳದಿರುವುದು ಆಶ್ಚರ್ಯವೇ ಆಗಿದೆ. ಇದರಲ್ಲಿ ಜೈನ ಧರ್ಮದ ಪ್ರಭಾವ ಒಂದೆರಡು ಕಡೆಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಮೂಲದ ವಸುಭಾಗಭಟ್ಟನ ಕೃತಿಯೇ ಕಾರಣವಾಗಿರಬಹುದು.

ಇದು ಚಂಪೂರೂಪವಾದರೂ, ಕಥಾನಿರೂಪಣೆಗೆ ಸಹಜವಾದ ಗದ್ಯವೇ ಇದರಲ್ಲಿ ಹೆಚ್ಚು. ಗದ್ಯದ ಶೈಲಿ ಸುಂದರವಾಗಿಯೂ ಸುಲಭವಾಗಿಯೂ ಬಂದಿದೆ; ಅಲ್ಲಲ್ಲಿ ಬಂದಿರುವ ವೃತ್ತಗಳು ತುಂಬ ಸಂಸ್ಕೃತಭೂಯಿಷ್ಠವಾಗಿದ್ದು, ಮೃಗಪಕ್ಷಿಗಳ ಮಧ್ಯೆ ಸ್ವಲ್ಪ ಕೃತಕವಾಗಿ ಕಾಣುತ್ತವೆ. ರತ್ನತ್ರಯರ ಮಹಾಕಾವ್ಯಗಳ ಬೆನ್ನಿನಲ್ಲಿ ಬಂದ ಈ ಚಂಪೂಕೃತಿ ಒಂದು ಮಹಾಕಾವ್ಯವಲ್ಲವಾದರೂ ಅನುವಾದವಾಗಿದ್ದರೂ ಲೋಕಾನುಭವ ನೀತಿಗಳ ಬೆಳಕಿನಿಂದ ಅಂದಿನ ಕನ್ನಡ ಸಾಹಿತ್ಯಕ್ಕೊಂದು ವೈವಿಧ್ಯವನ್ನು ತಂದಿರುತ್ತದೆ.

ಇದರಲ್ಲಿನ ಐದು ತಂತ್ರಗಳು ಇವು : (೧) ಭೇದ ಪ್ರಕರಣ ವರ್ಣನಂ. (೨) ಪರೀಕ್ಷಾ ವ್ಯಾವರ್ಣನಂ, (೩) ವಿಶ್ವಾಸ ಪ್ರಕರಣ ವರ್ಣನಂ, (೪)

---

1 ಕ. ಸಾ. ಚ., ಪು. ೧೧೮.

ವಂಚನಾ ಪ್ರಕರಣ ವರ್ಣನಂ. (೫) ಮಿತ್ರಕಾರ್ಯ ಪ್ರಕರಣಂ. ಒಟ್ಟಿನಲ್ಲಿ ೪೫೭ ಪದ್ಯಗಳು, ೨೩೦ ಶ್ಲೋಕಗಳು, ೪೮ ಉಪಕಥೆಗಳು ಇರುತ್ತವೆ.

ದುರ್ಗಸಿಂಹನ ಸಂಸ್ಕೃತಭೂಯಿಷ್ಠ ಶೈಲಿಯನ್ನು ತೋರಿಸುವ ಸಮುದ್ರ ವರ್ಣನೆಯ ಒಂದು ಪದ್ಯ :

ಬಲವೈರಿಸ್ಫಾರವಜ್ರಾಧಿಕಭಯಚಕಿತೋದಸ್ತಾತ ಮೈನಾಕಗೋತ್ರಾ
ಚಲ ಪಕ್ಷತ್ರಾಯಿ ಸಿಂಧುಪ್ರಿಯತಮನತಿಗಂಭೀರನಂತರ್ನಿವಿಷ್ಟಾ ।
ಖಿಲಲೋಕಂ ಸಕ್ರಚಕ್ರಸ್ಫುರದುರುತರಯಾದಶ್ಚರಾಧ್ಯಾಸಿತಪ್ರೋ
ತ್ಕಲಿತಾಂಭಃಕುಂಭಿಕುಂಭೋನ್ಮದರಸವಿಲಸತ್ ಕ್ಷೋಭರೌದ್ರಂ ಸಮುದ್ರಂ ॥

ಇದರಲ್ಲಿ ಒಂದೇ ಒಂದು ಕನ್ನಡ ಶಬ್ದವಿಲ್ಲ. ಎಲ್ಲವೂ ಹೀಗಿರುವುದಿಲ್ಲ. ಗ್ರಂಥದಲ್ಲಿ ಅರಸರ ವಿಷಯ ಸ್ವಭಾವವನ್ನು ವರ್ಣಿಸುವ ಸುಂದರವಾದ ಪಿರಿಯಕ್ಕರವೃತ್ತ :

ಕುಲಜನಪ್ಪನಂ ಕುಲಹೀನನೆಂದಪರ್ ಕುಲಹೀನನಂ ಕುಲಜಾತನೆಂಬರ್
ಕಲಿಯಂ ಕಡುಪಂದೆಯೆಂದು ಮಾತಾಡುವರ್ ಕಡುಪಂದೆಯಂ ಕಲಿಯೆಂದು
ನುಡಿವರ್ ।
ಪಲಬರ್ ಜೀಯೆನೆ ಸನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ
ನೆಲದೊಳೀತನೆ ಪುಸಿಯಿಲ್ಲದವನೆಂಬರರಸುಗಳ್ಗಿದು ನೈಜಗುಣಮಾಗಿರ್ಕುಂ ॥
(ಪು. ೫೧, ಪ. ೧೮೪)

ದುರ್ಗಸಿಂಹನ ಗದ್ಯಕ್ಕೆ ನಿದರ್ಶನ : ನರಿಯುಂ ಭೇರಿಯುಂ

ಆ ಜಂಬುಕನೊಂದು ದಿವಸಂ ಆಹಾರವಿಹಾರಾಕಾಂಕ್ಷೆಯಿಂದಡವಿಯೆಲ್ಲಮಂ ತೊಟಲ್ದು ಎಲ್ಲಿಯುಮೇನುಮಂ ಪಡೆಯದೆ ತನಗೆ ಸಹಾಯನಪ್ಪುದೊಂದು ವಾಯಸನಿರ್ದಲ್ಲಿಗೆ ಬರ್ಪುದುಮಾ ವಾಯಸಂ ಇದಿರ್ವಂದು ಎಲೆ ಭಾವ, ಏಂ ಬಡವಾದಿರೆನ್ನೆ, ಪಲವು ದಿವಸಮಾಹಾರಂಬಡೆಯದೆ ಬಡವಾಗಿ ನಿನ್ನಲ್ಲಿ ಆಸೆಪಟ್ಟು ಬಂದೆನೆಂಬುದುಂ—ಇದಾವಗಹನಮಾಗಳಾಂ ಪೋಗಿ ಬರ್ಪನ್ನೆವರಮಿಲ್ಲಿಯೇ ನಿಲ್ಲಿಮೆಂದು ವಾಯುವೇಗದಿಂ ವಾಯಸಂ ಪೋಗಿಪಂದು— ಈ ತೋರ್ಪ ನದಿಯ ತೀರದೊಳ್ ಚತುರ್ಬಲಯುತರಿರ್ಪರರಸುಗಳ್ ಕಾದಿ

ದಲ್ಲಿ ಪೆಣಮಯಮಾಗಿರ್ದ ರಣಭೂಮಿಯಂ ಕಂಡೆಂ ನಿನ್ನೊಡಲ ಬಡತನಂ ಕಿಡುವಿನಮಾಹಾರಕ್ಕೆಡೆಯಾದುದುದಲ್ಲಿಗೆ ಪೋಗೆಂದು ಪೇೞ್ವುದುಂ........

ಎಷ್ಟು ಲಲಿತವಾದ ಕನ್ನಡದಲ್ಲಿ ಕಥೆ ಹೇಳಲ್ಪಟ್ಟಿದೆ. ಉದ್ದವಾದ ವಾಕ್ಯ ರಚನೆಯನ್ನು ಗಮನಿಸಿರಿ.

## ೫. ಶಾಂತಿನಾಥ (೧೦೬೮)

ಶಿಕಾರಿಪುರ ೧೩೬ನೆಯ ಶಾಸನದ ಆಧಾರದಿಂದ ಶಾಂತಿನಾಥನ ಕಾಲ ೧೦೬೮ ಆಗಿರಬೇಕೆಂದು ನಿರ್ಧರಿಸಿದ್ದಾರೆ. ಅದರ ಮೂಲಕ ಆತನು ಚಾಲುಕ್ಯ ಭುವನೈಕಮಲ್ಲ ಸೋಮೇಶ್ವರನ (೧೦೬೮–೧೦೭೬) ಪಸಯಿತನಾದ ಲಕ್ಷ್ಮ ನೃಪನ ಮಂತ್ರಿಯಾಗಿ ಬನವಸೆ ಪನ್ನಿರ್ಛಾಸಿರಕ್ಕೆ ಅರ್ಥಾಧಿಕಾರಿಯೂ, ಕಾರ್ಯದುರಂಧರನೂ, ತದ್ರಾಜ್ಯಸಮುದ್ಧರಣನೂ ಆಗಿದ್ದನೆಂಬುದಾಗಿ ತಿಳಿದು ಬರುತ್ತದೆ. ಶಾಂತಿನಾಥ ಕವಿ ಸುಕುಮಾರಚರಿತೆ ಎಂಬ ಚಂಪೂಕಾವ್ಯ ವನ್ನು ಬರೆದನು. ತನಗೆ 'ಸರಸ್ವತೀಮುಖಮುಕುರಂ', 'ಸಹಜಕವಿ', 'ಚತುರಕವಿ', 'ನಿಸ್ಸಹಾಯಕವಿ' ಎಂಬ ಬಿರುದುಗಳಿದ್ದಂತೆ ಹೇಳಿಕೊಂಡಿ ದ್ದಾನೆ.

### ಸುಕುಮಾರಚರಿತೆ

ಇದರಲ್ಲಿ ೧೨ ಆಶ್ವಾಸಗಳಿರುವಂತೆ ತೋರುತ್ತದೆ. ಗ್ರಂಥವು ಸಮಗ್ರವಾಗಿ ಲಭಿಸಲಿಲ್ಲ. ತಿರ್ಯಗುಪಸರ್ಗಗಳನ್ನು ವರ್ಣಿಸುವ ಭವಾವಳಿಯ ಸುಂದರವೂ, ಮಾರ್ಮಿಕವೂ ಆದ ಜೈನ ಪುರಾಣ ಕಥೆಯಿದು. ಇದರ ಕಥಾವಸ್ತು ಯಾವುದೋ ಅನಿರ್ದಿಷ್ಟ ಪ್ರಾಕೃತ ಮೂಲದಿಂದ ವಡ್ಡಾರಾಧನೆಯ "ಸುಕುಮಾರಸ್ವಾಮಿಯ ಕಥೆಯ" ಮಾರ್ಗವಾಗಿ ಶಾಂತಿನಾಥನಿಗೆ ಬಂದಿರ ಬೇಕೆಂದು ವಿದ್ವಾಂಸರ ಅಭಿಪ್ರಾಯ.[1] ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಇತರ ಸುಕುಮಾರಚರಿತೆಗಳು ಬಂದಿವೆ. ಆದರೆ ಅವೆಲ್ಲವೂ ಶಾಂತಿನಾಥನ ಸುಕುಮಾರಚರಿತೆಗಿಂತ ಪುತ್ತಿನವು.

---

1 ಡಿ. ಎಲ್. ನರಸಿಂಹಾಚಾರ್, ಟಿ. ಎಸ್. ಶಾಮರಾವ್ : ಸುಕುಮಾರ ಚರಿತಂ, ಪು. lxxx

ಈ ಕಥೆಯಲ್ಲಿ ಅಗ್ನಿಭೂತಿ ವಾಯುಭೂತಿಗಳೆಂಬ ಇಬ್ಬರು ಸಹೋದರರ ಭವಾವಳಿಗಳೂ ಅವರು ಗುರಿಯಾಗುವ ಉಪಸರ್ಗಗಳೂ ಸುದೀರ್ಘವಾಗಿ ವರ್ಣಿಸಲ್ಪಟ್ಟಿವೆ. ಕೊನೆಯಲ್ಲಿ ಜೀವಸಂಸ್ಕಾರ ಪಡೆದು ದುರ್ಮಾರ್ಗಿ ಯಾಗಿದ್ದ ವಾಯುಭೂತಿಯು ಸುಕುಮಾರಸ್ವಾಮಿಯಾಗಿ "ದೀಕ್ಷೆಯಂ ಕೈಕೊಂಡು ತಿರ್ಯಗುಪಸರ್ಗಮಂ ನೆಗಟ್ದು ಪಂಚಾಣುತ್ತರಗಳ ನಡುವಣ ಸರ್ವಾರ್ಥಸಿದ್ಧಿಯೊಳಹಮಿಂದ್ರ ದೇವನಾದೊಂ." ಇದು ಕಥೆಯ ಜೀವಾಳ ವಾದರೂ, ಅನೇಕ ಪರಿಕರಗಳು ಸುಂದರವಾಗಿ ಬಂದಿವೆ.

ಈ ಸುಕುಮಾರಚರಿತದೊಳ್ ನೋಟಿಸ್ಲಿ ಕಾವ್ಯಧರ್ಮಮುಮನವುಳ ಜಿನಧರ್ಮಮುಮಂ" (I-೬೨) ಎಂದೂ "ಪೇಟಿಸ್ವಸುದ್ದಾಮ ಕವಿತ್ವ ತತ್ವ ರುಚಿಯಿಂ ಸುಕುಮಾರ ಕಥಾ ಪ್ರಬಂಧಮಂ" (I-೬೪) ಎಂಬುದಾಗಿಯೂ ಶಾಂತಿನಾಥ ಪಂಪನಂತೆ ಪ್ರತಿಜ್ಞೆಮಾಡಿ ತನ್ನ ಕಾವ್ಯೋದ್ದೇಶವನ್ನು ಸಾರಿ ದ್ದಾನೆ. ಈ ಪ್ರತಿಜ್ಞೆಯಲ್ಲಿ ಬಹಳ ಮಟ್ಟಿಗೆ ಶಾಂತಿನಾಥನು ಕೃತಕೃತ್ಯ ನಾಗಿದ್ದಾನೆ ಎನ್ನಬಹುದು.

ಜಿನಧರ್ಮದ ವಿಚಾರಗಳನ್ನು ಹೇಳುವಲ್ಲಿ ಶಾಂತಿನಾಥನು ಅಧಿಕವಾಗಿ ಪಾರಿಭಾಷಿಕಗಳನ್ನುಪಯೋಗಿಸಲಿಲ್ಲ. ಸರಳವಾದ ಭಾಷೆಯನ್ನೇ ಬಳಸಿದ್ದಾನೆ. ವರ್ಣನೆಗಳಿಗೆಡೆ ಸಿಕ್ಕಿದಲ್ಲಿ ಸಂಗ್ರಹವಾಗಿಯಾದರೂ ಹೃದಯಂಗಮವಾಗಿ ಹಾಡಿದ್ದಾನೆ. ಪಾತ್ರರಚನೆಯಲ್ಲಿ ಕುಶಲತೆ ತೋರಿದ್ದಾನೆ. ಹೀಗೆ ಮಾಡುವುದ ರಿಂದ ಕಾವ್ಯಧರ್ಮವನ್ನು ಧರ್ಮದೊಡನೆ ಸುಲಭವಾಗಿ ಎರಕಹೊಯ್ಯಲು ಅನುವಾಯಿತು. ಸುಕುಮಾರಚರಿತೆಯ ಇನ್ನೊಂದು ಮುಖ್ಯ ವೈಶಿಷ್ಟ್ಯ ವೆಂದರೆ, ಶಾಂತಿನಾಥನ ಸುಂದರವಾದ ಕಥಾನಿರೂಪಣ ಕ್ರಮ. ವಡ್ಡಾರಾಧ ನೆಯ ಪ್ರಭಾವ ಈ ದಿಸೆಯಲ್ಲಿಯೂ ಅವನ ಮೇಲಾಗಿರಬಹುದು; ಮಾತ್ರವಲ್ಲ ಮುಂದೆ ನಯಸೇನನಂಥವರಿಗೆ ಒಂದು ದೃಷ್ಟಿಯಿಂದ ಈತನು ಮಾರ್ಗದರ್ಶಕ ನಾದನೆಂದರೆ ತಪ್ಪಾಗಲಾರದು.

ಶಾಂತಿನಾಥನ ಕವಿತಾಶಕ್ತಿಯಲ್ಲಿರುವ ಸಹಜತೆಯನ್ನು ಕಾಣಿಸುವುದಕ್ಕೆ ಕೆಲವು ನಿದರ್ಶನಗಳು :

ವಾಯುಭೂತಿ ಗರ್ವಿಷ್ಠನಾಗಿ ಸೋದರಮಾವನೂ ಗುರುವೂ ಮುನಿಯೂ ಆದ ಸೂರ್ಯಮಿತ್ರನನ್ನು ತೆಗಳುವ ರೀತಿ :

ಮನೆಯೊಳ್ ಮೈವಮೆಗೆ ಬಾತುಕೊಡು ಸಿರಿಯೊಳ್ಕಣ್ಗಾಣದೊಡ್ಡಯ್ಯುಮಂ
ದಿನ ನೀಮಾರ್ಗೆಲೆ ನಿಮ್ಮ ನ ಟಿಯೆಮೆಂದೆಮ್ಮಂ ತೊಡಂಕಿಕ್ಕುವಾ ।
ದಿನ ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುಮಂ
ದಿನ ಸೊರ್ಕಕ್ಕಟ ಮುಕ್ಕುವೋಗಿ ಕಡಿಯೊಳ್ ಭೈಕ್ಷಕ್ಕೆ ಪಕ್ಕಾದಿರೇ ॥

(IV–೨೬)

ನೀಂ ಬೇಪಾದೊಡೆ ನಿನ್ನ ಕು
ಟುಂಬಿನಿಯುಂ ಕಯ್ಪೆಸೊರೆಯ ಕುಡಿಯೇಂ ಮಿಡಿಯೇ ।
ನೆಂಬಂತೆ ದರಸಿಯೊಂದಳಿ
ದೇಂ ಬಳ್ವಳ ಬಳದ ಬಂಘುತನಮಿನಿದಾಯ್ತೋ ॥ (IV–೨೮)

(ಇಲ್ಲಿ ರನ್ನನ "ಕಯ್ಪೆಸೊರೆಯ ಕುಡಿಯೇಂ ಮಿಡಿಯೇಂ" ಎಂಬ ಮಾತು ನೆನಪಾಗುವುದು )

ಆಗ ಮಹಾ ಮುನೀಶ್ವರರಾದ ಸೂರ್ಯಮಿತ್ರ ಭಟ್ಟಾರಕರು "ಕ್ಷಮಾ ಸ್ವರೂಪವೆ ರೂಪುಗೊಂಡಂತೆ" ಹೇಳುವ ಮಾತು :

ಕ್ಷಮೆಯಾ ಮೊದಲ್ ಸಮತೆಯ ಬಿ
ತ್ತು ಮೊದಲ್ ಸೈರಣೆಯ ಮೊತ್ತಮೊದಲನೆ ನೆಗಟ್ದಿ ।
ರ್ದ ಮನುಷ್ಯನಾವನಾತನೆ
ಸಮಾನನಾತನೆ ಮುನೀಂದ್ರನಾತನೆ ದೇವಂ ॥

ಪಗೆಯಾವುದು ಕಳೆಯಾವುದು
ಬಗೆ ವೊಡೆ ಭಾವಿಸುವೊಡೆಂದುಂ ।
ಪಗೆ ಕರ್ಮಮೆ ಕೆಳೆ ಧರ್ಮಮೆ
ಜಗದೊಳ್ಮುನಿಪತಿಗೆ ಪರಮಜಿನಪತಿಮತದಿಂ ॥ (IV–೩೫, ೩೬)

ಸುಕುಮಾರನು ಕಾಣದಾಗಲು, ಆತನ "ಮೂವತ್ತಿರ್ವರ್ ಕಾಂತೆಯರುಂ ಆತ್ಮೀಯ ಪತಿವಿಯೋಗೋದ್ವೇಗದಿಂ ಶೋಕಾಕ್ರಾಂತೆಯರಾಗಿ ಮೆಯ್ಯರಿ ಯದೆ", "ವನತರುಲತಾವನಚರಂಗಳಂ ಕಂಡತಿಪ್ರಳಾಪಂ" ಗೆಯ್ದುದು :

ಎಳೆಮಾವೇ ಲತೆಯೋ ತಮಾಳಚಯಮೋ ಪೆಣ್ಣಂಚೆಯೋ ಕೊಂಚೆಯೋ
ವಿಲಸಚ್ಚಂಪಕಮೋ ಲಸತ್ಪುಳಿನಮೋ ಪುನ್ನಾಗಮೋ ಪೂಗಮೋ ।
ಕೊಳನೋ ಪಂಕಜಮೋ ನಮೇರು ಕುಜಮೋ ಬಾಚೊಂಪಮೋ ಕೋಗಿಲೇ
ಗಿಳಿಯೋ ಕಂಡಿರೆ ಪೇಟೀಮೆಮ್ಮ ಪತಿಯಂ ಶ್ರೀರೂಪಕಂದರ್ಪನಂ ॥

(XII–೨೧)

## ೬ ನಾಗಚಂದ್ರ (೧೧೦೦)

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ದುಂದುಭಿಯನ್ನು ಮೊಳಗಿಸಿದ ಮೊದಲನೆಯ ಕವಿ ಅಭಿನವ ಪಂಪನೆಂಬ ಬಿರುದು ಪಡೆದ ನಾಗಚಂದ್ರನೆನ್ನ ಬಹುದು ಈತನ ಕಾಲದೇಶಗಳನ್ನು ನಿಷ್ಕೃಷ್ಟವಾಗಿ ಹೇಳುವುದು ಸ್ವಲ್ಪ ಕಷ್ಟವಾಗಿಯೇ ಉಳಿದಿದೆ. "ವಿಜಯಪುರಕ್ಕೆ ಅಳಂಕರಣವಾಗಿ" ಒಂದು ಜಿನೇಂದ್ರಗೇಹವನ್ನು ಕಟ್ಟಿಸಿರುವಂತೆ ತನ್ನ ಕೃತಿಯಲ್ಲಿ ಹೇಳಿರುವುದರಿಂದ, ಈತನ ಸ್ಥಳ ಬಿಜಾಪುರ (ವಿಜಯಪುರ) ಆಗಿರಬಹುದೆಂಬುದಾಗಿ ವಿದ್ವಾಂಸರು ಅಭಿಪ್ರಾಯಕ್ಕೆ ಬಂದಿರುತ್ತಾರೆ. ಈತನು ತನ್ನ ಗುರುಗಳೆಂದು ಹೇಳಿಕೊಂಡಿರುವ ಬಾಲಚಂದ್ರ ಮೇಘಚಂದ್ರಯತಿಗಳು ಸುಮಾರು ೧೧೦೦ರಲ್ಲಿದ್ದರೆಂಬುದಾಗಿ ತಿಳಿದು ಬಂದಿರುವುದರಿಂದ ಈತನ ಕಾಲ ೧೧೦೦ ಎಂದು ಹೇಳಬಹುದು. ನಾಗಚಂದ್ರನು ಯಾವ ರಾಜರ ಆಶ್ರಯದಲ್ಲಿಯೂ ಇರಲಿಲ್ಲವೆಂದು ತೋರುತ್ತದೆ. "ಕಂತಿಹಂಪನ ಸಮಸ್ಯೆ" ಎಂಬ ಚಾಟುಪದ್ಯಗಳ ಆಧಾರದಿಂದ ನಾಗಚಂದ್ರನು ಹೊಯ್ಸಳ ಬಲ್ಲಾಳರಾಯನ ಆಸ್ಥಾನಕವಿಯಾಗಿದ್ದನೆಂಬರು. ಈ ಆಧಾರಕ್ಕೆ ಬಲವಿಲ್ಲ.

ಇವನಿಗೆ ಭಾರತೀಕರ್ಣಪೂರ, ಕವಿತಾಮನೋಹರ, ಸಾಹಿತ್ಯವಿದ್ಯಾಧರ, ಚತುರಕವಿ ಜನಸ್ಥಾನರತ್ನಪ್ರದೀಪ, ಸಾಹಿತ್ಯಸರ್ವಜ್ಞ, ಸೂಕ್ತಿಮುಕ್ತಾವತಂಸ ಇತ್ಯಾದಿ ಬಿರುದುಗಳಿದ್ದಂತೆ ಇವನ ಗ್ರಂಥಗಳಿಂದ ತಿಳಿದುಬರುತ್ತದೆ. ಈತನು ಉದ್ದಾಮಕವಿ. ಪಂಪಪೊನ್ನರನ್ನರಂತೆ ಎರಡು ಮಹಾ ಕೃತಿಗಳನ್ನು ರಚಿಸಿದ್ದಾನೆ: ಇವು ಮಲ್ಲಿನಾಥಪುರಾಣ ಮತ್ತು ಪಂಪ ರಾಮಾಯಣವೆಂಬುದಾಗಿ ಖ್ಯಾತಿಯನ್ನು ಪಡೆದಿರುವ ರಾಮಚಂದ್ರಚರಿತ ಪುರಾಣ.

ನಾಗಚಂದ್ರನ ಗ್ರಂಥಗಳಲ್ಲಿ ಕ್ಷಾತ್ರಕ್ಕಿಂತ ಭಕ್ತಿವೈರಾಗ್ಯಗಳು ಹೆಚ್ಚಾಗಿ ಹರಿಯುತ್ತವೆ. ಜೀವನವೆಲ್ಲಾ ಶಾಂತರಸದ ಮಂಜಿನ ಮೂಲಕ ಈತನ ಕಣ್ಣಿಗೆ ಕಾಣಿಸುತ್ತದೆ.[1] ಶಾಂತ ವಾತಾವರಣಕ್ಕೆ ಅನುಕೂಲವಾದ ಶೈಲಿಯನ್ನು ನಾಗಚಂದ್ರನಲ್ಲಿ ಕಾಣುತ್ತೇವೆ. ಪಂಪರನ್ನರಿಗಿಂತ ಹೆಚ್ಚು ಲಲಿತವೂ ಸುಲಭವೂ ಆದ ಭಾಷೆ ಅವನದು. ವಸ್ತುರಚನೆಯಲ್ಲಿಯೂ ವರ್ಣನಾ ವೈಖರಿಯಲ್ಲಿಯೂ ಪಾತ್ರಸೃಷ್ಟಿಯಲ್ಲಿಯೂ ರಸಪುಷ್ಟಿ ಕೊಡುವುದರಲ್ಲಿಯೂ ನಾಗಚಂದ್ರನಲ್ಲಿ ತನ್ನದೇ ಆದ ಒಂದು ನಯವಿದೆ. ಇವೆಲ್ಲವೂ ಅವನನ್ನು ಮಹಾಕವಿಗಳ ಸ್ಥಾನಕ್ಕೇರಿಸಿರುತ್ತವೆ. ತನ್ನ ಕವಿತೆಯ ವಿಷಯವಾಗಿ ಮಲ್ಲಿನಾಥಪುರಾಣದಲ್ಲಿ (I-೪೨) ಹೀಗೆ ಹೇಳುತ್ತಾನೆ :

ಪದರಚನೆ ಸಜ್ಜನಶ್ರವ
ಣದೊಳಂಚೆಯ ತುಪ್ಪುಳಿಂಚೆಯಿಂ ತಿರಿಪಿದವೋಲ್ ।
ಮೃದುವೆನೆ ಪೊಸಟಗೆ ರಸಭಾ
ವದೊಳೋಕುಳಿಯಾಡೆ ಪೇಟ್ದನಭಿನವಪಂಪಂ ।

ಮೃದುತ್ವದ ಮೂಲಕ ಇಲ್ಲಿ ಹೇಳಿದಂತೆ ಒಂದು ಹೊಸ ಬಗೆಯ ರಸ ದೋಕುಳಿಯಾಡಿಸುತ್ತಾನೆ. ನಾಗಚಂದ್ರನು ಅಭಿನವಪಂಪನೆಂಬುದು ಆತನ ಕೃತಿಗಳನ್ನೋದಿದವರಿಗೆ ಅನುಭವಕ್ಕೆ ಬಾರದಿರದು. ತಾನು ಕಂಡುಕೊಂಡ ರಸದ ವಿಷಯವನ್ನು ಎಷ್ಟು ಸುಂದರವಾಗಿ ಹಾಡಿ ರಸವನ್ನು ಕ್ರಮವಾಗಿ ಅಮರತ್ವಕ್ಕೇರಿಸಿರುವನು !

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮ ರಸಮನಳಿಮಾಲೆ ಸುಧಾ ।
ರಸಮಂ ಸುರರಕ್ಷಯ ಸುಖ
ರಸಮಂ ಪರಮಾತ್ಮನಱಿವನುಱಿದವರಱಿಯರ್ ॥

(ಮಲ್ಲಿ.೧- ೨೮)

## ಮಲ್ಲಿನಾಥಪುರಾಣ

ಇದು ಕವಿಯ ಮೊದಲಿನ ಕೃತಿಯೆನ್ನುವರು ; ಇದರಲ್ಲಿ ಕವಿಯು ೧೯ನೆಯ

---

[1] ಕ. ಕೈ. ಸಂ., ೨, ಪು. ೬೧೩.

ತೀರ್ಥಂಕರನಾದ ಮಲ್ಲಿನಾಥನಚರಿತೆಯನ್ನು ಅಷ್ಟಾದಶವರ್ಣನೆಗಳ ಮೂಲಕ ಉತ್ತಮ ಚಂಪೂಕಾವ್ಯವಾಗಿ ರಚಿಸಿರುವನು ; ಹದಿನಾಲ್ಕು ಆಶ್ವಾಸಗಳಿವೆ. ಇದರಲ್ಲಿ ಭವಾವಳಿಯ ಕಥೆಗಳು ಬಾರದೆ ಇರುವುದರಿಂದ ಜೈನೇತರರಿಗೂ ಇದು ಸುಲಭಗ್ರಾಹ್ಯವಾಗಿದೆ. ಉತ್ತರಪುರಾಣದಲ್ಲಿ ಬಹಳ ಕಿರಿದಾಗಿ ಹೇಳಲ್ಪಟ್ಟ ಈ ಕಥೆಯನ್ನು ಮಲ್ಲಿಜಿನೇಂದ್ರ ಮಹಾಪ್ರಬಂಧವಾಗಿ ರಚಿಸಿರುವನು.

ಕಥೆಯ ಸಾರಾಂಶ ಇಷ್ಟೆ : ಕಚ್ಛಾವತಿವಿಷಯದ ವೀತಶೋಕಪುರದ ವೈಶ್ರವಣನೆಂಬ ರಾಜನು ಬಿರುಗಾಳಿಗೆ ಬಿದ್ದ ವಟವೃಕ್ಷವನ್ನು ನೋಡಿ ನಿರ್ವೇಗ ಪರನಾಗಿ ಮಗನಿಗೆ ಪಟ್ಟಕಟ್ಟಿ ತಾನು ಜಿನದೀಕ್ಷೆಯನ್ನು ನಾಗಯತಿಗಳಲ್ಲಿ ಕೈಕೊಂಡು ಅಪರಾಜಿತ ವಿಮಾನದಲ್ಲಿ ಅಹಮಿಂದ್ರನಾಗುವನು. ಮತ್ತಿನ ಜನ್ಮದಲ್ಲಿ ಮಿಥಿಳಾಪುರದ ರಾಜನಿಗೆ ಮಲ್ಲಿನಾಥನೆಂಬ ಮಗನಾಗಿ ಹುಟ್ಟಿ ಸನ್ನಿಹಿತ ಕಾಲದಲ್ಲಿ ಪರಿನಿಷ್ಕ್ರಮಣಕಲ್ಯಾಣ ಸಮವಸರಣ ಕೇವಲ ಜ್ಞಾನೋತ್ಪತ್ತಿಗಳಾಗಿ ಜಿನನಾಗುವನು.

ಮಲ್ಲಿನಾಥಪುರಾಣದ ಶ್ರೇಷ್ಠತೆಯನ್ನು ಹೀಗೆ ಹೇಳಿರುತ್ತಾನೆ :

ಸಮಚಿತ್ತರಪ್ಪ ವಿದ್ವ
ತ್ತ ಮರಿರ್ದಾರಯ್ಯ ಸರಸಕವಿತಾರಸದೊಳ್ ।
ಸಮನಕ್ಕುಮಧಿಕಮಕ್ಕುಂ
ಸಮಸ್ತ ಕಾವ್ಯಕ್ಕೆ ಮಲ್ಲಿನಾಥಪುರಾಣಂ ॥

ಧರೆ ಪೊಗಳೆ ವೀತರಾಗನ
ಚರಿತದೊಳಳವಡಿಸಿ ಸಕಲ ರಸಮಂ ಕವಿತಾ ।
ಪರಿಣತಿಯಿಂ ಮೆಱೆದಂ ಕಾ
ವ್ಯರತ್ನಾರ್ಣವಪೂರ್ಣಚಂದ್ರನಭಿನವಪಂಪಂ ॥ (I–೩೯)

ಬೇಂದ್ರೆಯವರು ಹೀಗೆ ಹೇಳಿರುವರು :[1] "ಮಲ್ಲಿನಾಥಪುರಾಣದ ಗುಣವೆಲ್ಲವೂ ರಾಮಚಂದ್ರಚರಿತಪುರಾಣದಲ್ಲಿವೆ ; ರಾಮಚಂದ್ರಚರಿತಪುರಾಣದ

[1] ಅಭಿನವಪಂಪ, ಪು. ೪–೫.

ಪಾತ್ರಸೃಷ್ಟಿಯು ಮಲ್ಲಿನಾಥಪುರಾಣದಲ್ಲಿಲ್ಲ....ಮಲ್ಲಿನಾಥಪುರಾಣವು ಹತ್ತೆಂಟು ಎಸಳಿನ ಹೂವು ಅರಳಿದಂತೆ ; ರಾಮಚಂದ್ರಚರಿತಪುರಾಣವು ಸಾವಿರ ಕಂಬದ ಬಸ್ತಿಯನ್ನು ಕಟ್ಟಿದಂತೆ ; ಮಲ್ಲಿನಾಥವು ಮೂರ್ತಿಶಿಲ್ಪ, ಚರಿತಪುರಾಣವು ವಾಸ್ತುಶಿಲ್ಪ.” ಇದರಿಂದ ಮಲ್ಲಿನಾಥಪುರಾಣದ ಯೋಗ್ಯತೆ ಕಡಿಮೆಯೆನ್ನ ಲಾಗುವುದಿಲ್ಲ ; ವಸ್ತುಸ್ಥಿತಿಯಿಂದಲೇ ಮಲ್ಲಿನಾಥಪುರಾಣದಲ್ಲಿ ಕವಿಯ ಸ್ವಾತಂತ್ರ್ಯಕ್ಕೆ ಅವಕಾಶ ಕಡಿಮೆ ; ಆದುದರಿಂದ ಪಾತ್ರ ಸೃಷ್ಟಿಯು ಮಲ್ಲಿನಾಥ ನಲ್ಲಿ ಹಾಗಾದುದು ಅನಿವಾರ್ಯವೆನ್ನಬಹುದು. ಮತ್ತು ಬೇಂದ್ರೆಯವರು ಮುಂದೆ ಹೇಳಿದಂತೆ “ಮಲ್ಲಿನಾಥಪುರಾಣದಲ್ಲಿ ಬರೆದ ಪದ್ಯಗಳನ್ನು ಭಾವ ಸೌಂದರ್ಯದಲ್ಲಿ ಮೀರುವ ಪದ್ಯಗಳನ್ನು ಬರೆಯುವುದು ತನಗೆ ಅಸಾಧ್ಯವೆಂಬಂತೆ ಅತ್ಯಂತ ಮಹತ್ವವುಳ್ಳ ನೂರಾರು ಪದ್ಯಗಳನ್ನು ಇದ್ದಕ್ಕಿದ್ದಂತೆ ಚರಿತಪುರಾಣದಲ್ಲಿ ಎತ್ತಿಕೊಂಡಿದ್ದಾನೆ ನಾಗಚಂದ್ರನು.”

ಒಂದೇ ಅಂಥ ಉದಾಹರಣೆಯನ್ನು ನೋಡೋಣ. ಬೆಟ್ಟದ ಮೇಲಿನ ಚೈತ್ಯಾಲಯದಲ್ಲಿ ಬರುವ ಜಿನಸ್ತುತಿ. ಶ್ರೀಯವರು ಇದನ್ನು ಅಭಿನವ ಪಂಪನ ಆತ್ಮಸಾರವೆಂದು ಹೊಗಳಿದ್ದಾರೆ. ಮಲ್ಲಿನಾಥಪುರಾಣದಲ್ಲಿನ Xನೆಯ ಆಶ್ವಾಸದ ೧೨೦-೧೨೭ ಪದ್ಯಗಳೂ ಚರಿತಪುರಾಣದ VIIನೆಯ ಆಶ್ವಾಸದ ೪೦–೪೭ ಪದ್ಯ ಗಳೂ ಒಂದೇ ಆಗಿವೆ :

ಜಯಜಿತವೃಜಿನಜಿನೇಶ್ವರ
ದಯಾನದೀಪುಳಿನರಾಜಹಂಸ ಭವಾಂಭೋ ।
ಧಿಯ ತಡಿಯನೆಯ್ದಿಸೆನ್ನಂ
ನಯನಿಕ್ಷೇಪ ಪ್ರಯಾಣ ಪಾತ್ರದಿನರ್ಹಾ ॥

ನೇವಾಳಮೇದು ಕೆಲಬರ್
ಪಾವಂ ಪಿಡಿವಂತೆ ದೇವ ನೀನಲ್ಲದರಂ ।
ದೇವರಿವರೆಂದು ಪಿಡಿದಿ
ನ್ನೇವಿಧಿವಟ್ಟಪರೋ ಮೋಹಮೂರ್ಛೆಯಿನರ್ಹಾ ॥

ನಿನಗೆ ರಸವೊಂದೆ ಶಾಂತಮೆ
ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾ ।
ಹನಮಿರ್ದು ಮಿಕ್ಕ ರಸಮಂ
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ ॥

ಮಣಿಭೂಷಣಭರದಿಂ ತನು
ಕಿಣಮಪ್ಪುದದೇಕೆ ನಿನ್ನ ನಿರ್ಮಲಗುಣ ಭೂ ।
ಷಣಮುಂ ದಯೆಗೆಯ್ ಪಡೆವೆಂ
ಪ್ರಣಯಮನಪವರ್ಗಲಕ್ಷ್ಮಿಗದಱಿಂದರ್ಹಾ ॥

x x x

ನಿತ್ಯಸುಖಮಾತ್ಮರೂಪಮ
ನಿತ್ಯಸುಖಂ ಮೋಹರೂಪಮೆಂಬ ವಿವೇಕಂ ।
ಸತ್ಯಸ್ವರೂಪಮದಱೊಳ
ಗತ್ಯಂತಾನುಭವವಿಭವಮಕ್ಕೆನಗರ್ಹಾ ॥

ಇನ್ನು ಕೆಲವು ಮನೋಹರವಾದ ಮಲ್ಲಿನಾಥಪುರಾಣದ ಆಣಿಮುತ್ತುಗಳು :

## ಮಕ್ಕಳ ಬಯಕೆ

ಪರಿದಾಡುವ ಸುತನ ಪದಾಂ
ಬುರುಹಂಗಳೊಳುಲಿವ ಪೊನ್ನಗೆಜ್ಜೆಯ ದನಿಯುಂ ।
ತಿರೆ ನಚ್ಚಿನ ವೀಣಾವೇ
ಣುರವಂಗಳ್ ಕಱಿಯವಲ್ತೆ ಕರ್ಣಾಮೃತಮಂ ॥ (III–೧೯)

ವಸಂತಕಾಲದಲ್ಲಿ, "ಅತನು" —ಚೂತನಿಗೂ ಮಲ್ಲಿಕಾಲತೆಗೂ ಮದುವೆ ಮಾಡಿಸಿದ್ದು—

ಕಲಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋ
ಕಿಲನಾದಂ ವೇದಮಂತ್ರಂ ಕುಡಿಗುಡಿ ಮಧುಮೌಹೂರ್ತಿಕಂ ಪೂತವಲ್ಲೀ ।
ಕುಲಮೆಲ್ಲಂ ನಿಬ್ಬಣಂ ಬಂದಬಲೆಯರೆನೆ ಚೂತಂಗಮಾ ಮಲ್ಲಿಕಾಕೋ
ಮಲೆಗಂ ಕೊಂಡಾಡಿ ಕೈನೀರೆಱೆದ ತನು ಲಾವಣ್ಯಪುಣ್ಯಾಂಬುವಿಂದಂ
(VI–೪೪)

## ಚಂದ್ರೋದಯ

ದಾಂಗುಡಿಮಿಟ್ಟು ದಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿಕಾ
ಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ ।

ದಿಂಗಡರೆಂಬ ಸಜ್ಜಮನೆಯೊಳ್ ತೆರೆದೊಟ್ಟಿಲ ಮೇಲೆ ಕಂಬೆರ
ಲ್ದಿಂಗಣೆಗಟ್ಟಿದಂತುದಯ ಶೈಲಶಿಖಂಡದೊಳಿಂದು ಮಂಡಳಂ ॥

## ರಾಮಚಂದ್ರಚರಿತಪುರಾಣ

ಜೈನಸಂಪ್ರದಾಯದಂತೆ ರಾಮಾಯಣದ ಕಥೆ ಇದರಲ್ಲಿ ಹೇಳಲ್ಪಟ್ಟಿದೆ. ಕಾವ್ಯದೃಷ್ಟಿಯಿಂದ ಈ ಕೃತಿ ಮಲ್ಲಿನಾಥಪುರಾಣಕ್ಕಿಂತ ಚಿತ್ತಾಕರ್ಷಕವಾಗಿದ್ದು ನಾಗಚಂದ್ರನಿಗೆ ಅಭಿನವಪಂಪನೆಂಬ ಬಿರುದನ್ನು ಸಾರ್ಥಕಗೊಳಿಸಿದೆ. ಆದಿಕವಿ ಪಂಪನು ವಿಕ್ರಮಾರ್ಜುನವಿಜಯವೆಂಬ ಬೆಂಗದಿರನಿಂದ ಕನ್ನಡ ಲೋಕವನ್ನು ಬೆಳಗಿದರೆ ಅಭಿನವಪಂಪನು ರಾಮಚಂದ್ರಚರಿತಪುರಾಣವೆಂಬ ತಣ್ಗದಿರನಿಂದ ಕನ್ನಡ ಲೋಕವನ್ನು ಬೆಳಗಿರುವನು.

ತನ್ನ ಕಥಾವಸ್ತುವಿನ ವಿಷಯವಾಗಿ ಹೀಗೆ ಹೇಳುತ್ತಾನೆ :

ವಿಪುಲಾಚಲದೊಳ್ ವೀರ ಜಿ
ನ ಪಾರ್ಶ್ವದೊಳ್ ಗೌತಮಂ ಗಣಾಗ್ರಣಿಮಗಧಾ ।
ಧಿಪನಱಿಯೆ ನೆಱೆಯೆ ಪೇೞ್ದುದ
ನಪೂರ್ವಮೆನೆ ರಾಮಕಥೆಯನಭಿವರ್ಣಿಸುವೆಂ ॥ (I–೪೦)

ವಿಪುಲಾಚಲದಲ್ಲಿ ಜಿನನ ಪಾರ್ಶ್ವದಲ್ಲಿ ಗೌತಮನು ಮಗಧಾಧಿಪತಿಗೆ ಹೇಳಿದ ರಾಮಕಥೆಯನ್ನು ಅಭಿವರ್ಣಿಸಿರುವುದಾಗಿ ಹೇಳುತ್ತಾನೆ. "ಮಾತ್ರವಲ್ಲ ಜಿನರುಂ ಗಣಾಧೀಶ್ವರರುಂ ಕ್ರಮಂ ಬಿಡದೆ ಮುನ್ನಂ ಪೇೞ್ದುದಂ" ತಾನು ಆಧಾರವಾಗಿಟ್ಟುಕೊಂಡು ರಾಮಕಥೆಯನ್ನು ರಚಿಸಿರುವುದಾಗಿ ಹೇಳಿರುತ್ತಾನೆ. ಇವನು ತನ್ನ ವಸ್ತುವನ್ನು ಮುಖ್ಯವಾಗಿ ವಿಮಲಸೂರಿಯ ಪಉಮಚರಿತವೆಂಬ ಒಂದನೆಯ ಶತಮಾನದ ಪ್ರಾಕೃತಗ್ರಂಥದಿಂದಲೂ ರವಿಷೇಣನ ಪದ್ಮಪುರಾಣವೆಂಬ ಏಳನೆಯ ಶತಮಾನದ ಸಂಸ್ಕೃತ ಗ್ರಂಥದಿಂದಲೂ ಆಯ್ದುಕೊಂಡಿರಬೇಕೆಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. (ಪದ್ಮನೆಂದರೆ ರಾಮನು)

ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ ದೇಸಿಮಾರ್ಗಮಂ
ಬೆರಡಱಿಯೊಳಂ ರಸಂಬಡೆದು ಪಂಡಿತಮಂಡಲಿ ಮೆಚ್ಚೆನೇರ್ಪುವೆ ।

ತ್ರಿರಲವಿರೋಧಮಾಗೆ ಕೃತಿವೇಟಿಕ್ಕೊಡೆ ಸತ್ಯವಿ ನಾಗಚಂದ್ರನಂ
ತಿರೆ ಪೆಜಿರಾರ್ ಸರಸ್ವತಿ ಕುಡಲ್ ಪಡೆದರ್ ವರಮಂ ಕವೀಶ್ವರರ್ ॥

ಹಿರಿದಾದ ರಾಮಾಯಣ ಕಥೆಯನ್ನು ಸಂಕ್ಷೇಪವಾಗಿ ಹೇಳಿದ್ದಾನೆ; ಇದರಲ್ಲಿ 'ದೇಸಿ' ಮತ್ತು 'ಮಾರ್ಗ'ಗಳ ಸುಂದರ ಸಮ್ಮಿಲನವುಂಟು; ಇದರ ರಸಪುಷ್ಟಿಯಿಂದ ಪಂಡಿತಮಂಡಲಿ ಮೆಚ್ಚಿ ತಲೆದೂಗಿದೆ; ಇದು ಸರಸ್ವತಿಯ ವರಪ್ರಸಾದ; ಬೇರಾವ ಕವೀಶ್ವರರಿಗೆ ಈ ಭಾಗ್ಯವುಂಟು ?

ಜಗಮಂ ಯುಗಮಮಂ ಮನ್ವಾ
ದಿಗಳಂ ಕಾಲಸ್ವರೂಪಮಂ ಜಿನರಂ ಚ ।
ಕ್ರಿಗಳಂ ಹಲಧರಕೃಷ್ಣಾ
ದಿಗಳಂ ಶ್ರೀರಾಮಚರಿತದೊಳ್ ವರ್ಣಿಸುವೆಂ ॥ (೧—೪೧)

ಎಂಬ ಪದ್ಯದಲ್ಲಿ ಹೇಳಿರುವಂತೆ ಲೋಕಕಾಲಸ್ವರೂಪಗಳನ್ನೂ ಮನು ಜಿನಚಕ್ರಿಗಳ ಮತ್ತು ಹಲಧರಕೃಷ್ಣಾದಿಗಳ ಚರಿತ್ರೆಯನ್ನೂ ಮೊದಲನೆಯ ಆಶ್ವಾಸದೊಳಗೆ ಮುಗಿಸಿ, ಎರಡನೆಯ ಆಶ್ವಾಸದಲ್ಲಿ ದಶರಥನ ವೃತ್ತಾಂತ ವನ್ನು ಪ್ರಾರಂಭಿಸುತ್ತಾನೆ. ಮತ್ತಿನ ಆಶ್ವಾಸಗಳಲ್ಲಿ ಅನುಕ್ರಮವಾಗಿ ಕುಮಾರೋದಯ ವರ್ಣನೆ, ಜನಕಜಿನಭವನ ದರ್ಶನ ವರ್ಣನೆ, ಸೀತಾ ಸ್ವಯಂವರ ವರ್ಣನೆ, ವನಪ್ರವೇಶ, ಶರದ್ವರ್ಣನೆ, ಚಾರಣಯುಗಳ ಯತಿಗಳ ದರ್ಶನ, ಸೀತಾಹರಣ, ದಶವದನವಂಶವೃತ್ತಾಂತ, ಲಂಕಾದಹನ ವರ್ಣನೆ, ಲಂಕಾದಿಗ್ವಿಜಯ ಪ್ರಯಾಣ ವರ್ಣನೆ, ಬಲಾಚ್ಯುತಪುಣ್ಯಪ್ರಭಾ ವೋದಯ ವರ್ಣನೆ, ರಘುವೀರವಿಜಯ, ಸೀತಾಪರಿತ್ಯಾಗ, ಪರಿನಿರ್ವಾಣ ಕಲ್ಯಾಣೋತ್ಸವ ಎಂಬ ವರ್ಣನೆಗಳಿಂದ ಮಹಾಕಾವ್ಯಕ್ಕೆ ಲಾಕ್ಷಣಿಕರ ದೃಷ್ಟಿ ಯಿಂದ ಆವಶ್ಯಕವಾಗಿರುವ ೧೮ ಅಂಗಗಳನ್ನು ತುಂಬಿರುವನು.

ಈ ಕಥೆಯು ವಾಲ್ಮೀಕಿರಾಮಾಯಣವನ್ನು ಅನೇಕ ಕಡೆಗಳಲ್ಲಿ ಹೋಲ ದಿರುವುದರಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ನಾಗಚಂದ್ರನು ವಿಮಲಸೂರಿ ರವಿಷೇಣರ ಜೈನಸಂಪ್ರದಾಯವನ್ನು ಅನುಸರಿಸಿದವನು. ಎರಡಕ್ಕೂ ಇರುವ ಮುಖ್ಯ ವ್ಯತ್ಯಾಸಗಳು :

(೧) ರಾಮ ವಿಷ್ಣುವಿನ ಅವತಾರವಲ್ಲ. ,ಜೈನಪುರಾಣಕ್ಕನುಸಾರವಾಗಿ ರಾಮನು ಬಲದೇವನು. ಲಕ್ಷ್ಮಣನು ಶೇಷನ ಅವತಾರವಲ್ಲ, ವಾಸುದೇವನು. ರಾವಣನು ಜಯವಿಜಯರಲ್ಲೊಬ್ಬನಲ್ಲ, ಪ್ರತಿವಾಸುದೇವನು. ರಾಮನು

ಧರ್ಮನಾಯಕ, ಲಕ್ಷ್ಮಣನು ವೀರನಾಯಕ ; ಪ್ರತಿವಾಸುದೇವನಾದ ರಾವಣನನ್ನು ಕೊಲ್ಲುವುದು ರಾಮನಲ್ಲ, ಲಕ್ಷ್ಮಣನು.

(೨) ಯಜ್ಞಯಾಗಾದಿಗಳಿಲ್ಲ ; ಶಿವಧನುಸ್ಸನು ಮುರಿದು ಸೀತೆಯನ್ನು ರಾಮನು ವರಿಸುವುದಲ್ಲ ; ಖೇಚರೇಶ್ವನ ಬಿಲ್ಲುಗಳನ್ನು ಮುರಿದು ಸೀತೆಯನ್ನು ಮದುವೆಯಾಗುವುದು.

(೩) ಸೀತೆ ಭೂಮಿಜೆಯಲ್ಲ. ಜನಕನ ಮಡದಿಯ ಹೊಟ್ಟೆಯಲ್ಲಿ ಜನಿಸಿದವಳು. ಅವಳಿಗೆ ಪ್ರಭಾಮಂಡಲನೆಂಬ ಅಣ್ಣನಿದ್ದಾನೆ. ಒಮ್ಮೆ ನಾರದನು ಸೀತೆಯನ್ನು ಮೋಹಿಸುವ ಸನ್ನಿವೇಶ ಬಂದುದುಂಟು.

(೪) ಪರಶುರಾಮ ವಿಶ್ವಾಮಿತ್ರ ಮಂಥರೆಯರು ಇಲ್ಲಿ ಬರುವುದಿಲ್ಲ. ರಾಮಲಕ್ಷ್ಮಣರಲ್ಲಿ ಹೊಟ್ಟೆಕಿಚ್ಚುಪಡುವ ಮಗ ಭರತನಿಗಾಗಿ ಕೈಕೆ ರಾಜ್ಯವನ್ನು ದಶರಥನಲ್ಲಿ ಬೇಡುವಳು.

(೫) ರಾವಣ ಮುಂತಾದವರು ಭೀಮರಾಕ್ಷಸ ಎಂಬ ರಾಜನ ಪೀಳಿಗೆಯವರು ; ರಾವಣನಿಗೆ ಹತ್ತು ತಲೆಗಳಿಲ್ಲ ; ಕನ್ನಡಿಯಲ್ಲಿ ಹತ್ತು ತಲೆಗಳ ಪ್ರತಿಫಲನವಾದುದರಿಂದ, ದಶಮುಖನಾದನು ; ವಾಲಿ ಸುಗ್ರೀವ ಹನುಮಾದಿಗಳು ಕಪಿಗಳಲ್ಲ, ಕಪಿಧ್ವಜರು. ಇಲ್ಲಿ ರಾಮನು ಮಾಡುವ ವಾಲಿವಧೆಯ ಪ್ರಸ್ತಾಪವೇ ಇರುವುದಿಲ್ಲ.

(೬) ಸೇತುಬಂಧನ ಪ್ರಸಂಗವಿಲ್ಲ : ಕಪಿಧ್ವಜರಾದ ಖೇಚರರು ಆಕಾಶಗಾಮಿನೀವಿದ್ಯೆಯ ಬಲದಿಂದ ಸಮುದ್ರವನ್ನು ಲಂಘಿಸುವರು.

(೭) ರಾಕ್ಷಸರಿಗೂ ವಾನರರಿಗೂ ಬಾಂಧವ್ಯವಿತ್ತು ; ಹನುಮಂತನು ರಾವಣನ ತಂಗಿಯ ಅಳಿಯ. ರಾವಣನ ದುರಾಚಾರಕ್ಕೆ ಹೇಸಿ ಹನುಮಂತನೂ ವಿಭೀಷಣನೂ ರಾಮನನ್ನು ಸೇರುವರು.

(೮) ಮಾತ್ರವಲ್ಲ, ಕೆಲವು ಹೆಸರುಗಳಲ್ಲೂ ವ್ಯತ್ಯಾಸವಿದೆ ; ರಾಮನ ತಾಯಿ ಕೌಸಲ್ಯೆಯಲ್ಲ, ಅಪರಾಜಿತೆ ; ಶತ್ರುಘ್ನನ ತಾಯಿ ಸುಪ್ರಭೆ.

ಮೂಲವನ್ನು ಸಂಕ್ಷೇಪಿಸಿ ಹೇಳಿದರೂ, ನಾಗಚಂದ್ರನು ಅಪೂರ್ವ ಕವಿತಾದೃಷ್ಟಿಯಿಂದ ವಿಸ್ತರಿಸಬೇಕಾದೆಡೆಗಳಲ್ಲಿ ಸಾಕಷ್ಟು ವಿಸ್ತರಿಸಿ ರಸಪಾಕ

ವನ್ನು ನೀಡಿದ್ದಾನೆ. ಮುಖ್ಯಪಾತ್ರಗಳಾದ ರಾಮ, ಸೀತೆ, ಲಕ್ಷ್ಮಣ, ರಾವಣ—ಇವರನ್ನು ಅದ್ವಿತೀಯವಾಗಿ ಚಿತ್ರಿಸಿದ್ದಾನೆ. ರಾಮನ ಸಚ್ಚರಿತೆ, ಸೀತೆಯ ಪತಿಭಕ್ತಿ, ಲಕ್ಷ್ಮಣನ ವೀರೋಚಿತಶೀಲ, ರಾವಣನ 'ಉದಾತ್ತತೆ' ಇವು ಪಂಪರಾಮಾಯಣದೊಳಗಣ ಮಾಸದ ಚಿತ್ರಗಳು. ರಾವಣನ ಪಾತ್ರ ವನ್ನು ವಿಮರ್ಶಿಸುತ್ತಾ ಶ್ರೀಯವರು "ವಿಧಿವಶನಾಗಿ, ಕರ್ಮವಶನಾಗಿ, ಕಾಲವಶನಾಗಿ, ಇಲ್ಲಿಗೆ ಉದಾತ್ತ ರಾವಣನು ಅಸ್ತಮಿತಪುಣ್ಯನಾದನು ; ಮೂರು ಕೂಡಿ ರಾಮಲಕ್ಷ್ಮಣರನ್ನೂ ರಾವಣನನ್ನೂ ಗಂಟುಹಾಕಿದುವು"[1] ಎಂಬುದಾಗಿ ಸೀತೆಯನ್ನು ಕಂಡೊಡನೆ ರಾವಣನಲ್ಲಾದ ಹೃದಯಪರಿ ವರ್ತನೆಯನ್ನು ವಿವರಿಸಿದ್ದಾರೆ. ಇಲ್ಲಿಂದ ರಾವಣನ ದುರಂತತೆಗೆ ಮೊದಲಾ ಗುತ್ತದೆ. ವಿಧಿವಿಲಾಸದಿಂದ ಸೀತೆಯನ್ನು ಮೋಹಿಸುತ್ತಾನೆ. ಅವಲೋಕಿನೀ ವಿದ್ಯೆಯ ಸಹಾಯವನ್ನು ತನ್ನ ವ್ಯಾಮೋಹವನ್ನು ತೀರಿಸಿಕೊಳ್ಳಲು ಕೋರು ತ್ತಾನೆ. ಆ ದೇವತೆ ಕಠೋರವಾದ ನೀತಿಯನ್ನು ಹೇಳಲು :

ಅನ್ನೆಯದಿಂ ನಡೆವವರಂ
ನೀನ್ ನಿಯಮಿಸುವಯ್ ದಶಾಸ್ಯ ಪೆಱನಾವನ್ ನಿ।
ನ್ನನ್ ನಿಯಮಿಸುವಂ ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ಪಣ್ಣೀರೊಳವೇ॥

ರಾವಣನು ತನ್ನ ಛಲವನ್ನು ಬಿಡನು. "ಪುರಾತನ ಕರ್ಮಾಯತ್ತ ಮಲ್ತೆ ದೇಹಿಗಳೆಸಕಂ" ಎಂಬಂತೆ ರಾವಣನು ಸೀತೆಯನ್ನು ಅಪಹರಿಸುವನು. ವಿಧಿಯು ತನ್ನ ಮಾಟವನ್ನು ಮಾಡಿಯೇ ಬಿಟ್ಟಿತು. ರಾವಣನ ಪರಾಂಗನಾ ವಿರತಿವ್ರತ ಸಮಾಪ್ತಿ ಅಲ್ಲಿಗಾಯಿತು. ಮಂಡೋದರಿಯೂ ಇಲ್ಲಿ ರಾವಣನ ಅಧೋಗತಿಯನ್ನು ಮುಂದುವರಿಸುವವಳು ; ಅವಳು ಸೀತೆಯ ಮನಸ್ಸನ್ನು "ಒಡಂಬಡಿಸಲು ಆನೆ ಸಾಲ್ವೆನು" ಎಂದು ಬರುವಳು. ಅವಳು ಸೀತೆಯಿಂದ ಸರಿಯಾದ ಮಂಗಳಾರತಿ ಮಾಡಿಸಿಕೊಳ್ಳುತ್ತಾಳೆ ; ಮತ್ತೆ ರಾವಣನು ಸ್ವತಃ ಬಂದು ತನ್ನ ವಿದ್ಯಾಧರಚಕ್ರಾಧಿಪತ್ಯ ಸರ್ವಸ್ವವನ್ನೂ ಸೀತೆಯ ಚರಣಗಳಿ ಗರ್ಪಿಸಿ ಬಿನ್ನವಿಸಿಕೊಳ್ಳುವನು. ಆದರೆ ಸೀತೆ ಧ್ರುವತಾರೆಯಂತೆ ನಿಶ್ಚಲ :

---

[1] ಕ. ಕೈ. ಸಂ. ೨, ಪು. ೬೩.

“ಗುಣಹೀನನ ಸಿರಿಯಿಂದಂ ಗುಣಿಗಳ ಬಡತನವೆನಾಡೆಯುಂ ಲೇಸಲ್ತೇ” ಎಂದು ರೋದಿಸುವಳು. ಯುದ್ಧಸನ್ನಾಹವಾಗಿದೆ. ವಿಭೀಷಣನೂ ಅಣ್ಣನನ್ನು ಬಿಟ್ಟು ಹೊರಟಿದ್ದಾನೆ. ರಾವಣನಿಗೆ ಜಯ ಪ್ರಾಪ್ತಿಯಾಗುವಂತಿಲ್ಲ; ಎಲ್ಲವೂ ಮಣ್ಣುಗೂಡುವುದು ; ಶತ್ರುಗಳ ಬಲಹೆಚ್ಚುವುದು. ಅನುಪಮ ಸಾಹಸದಿಂದ ಬಹುರೂಪಿಣೀ ವಿದ್ಯೆಯನ್ನು ಸಾಧಿಸಿಯೂ ಆಯಿತು. ಮತ್ತೆ ಸೀತೆಯೊಡನೆ ರಾಮನಾಸೆಯನ್ನು ಬಿಟ್ಟು ತನಗೊಡಂಬಡುವಂತೆ ಕೇಳಿಕೊಳ್ಳುತ್ತಾನೆ. ಆದರೆ ಸೀತೆ ಆಯುಃಪ್ರಾಣಗಳಿಗಾಗಿ ದಶಕಂಧರನನ್ನು ಪ್ರಾರ್ಥಿಸುತ್ತಾ ಮೂರ್ಛೆಗೆ ಸಲ್ಲುತ್ತಾಳೆ. ಈಗ ಉದಾತ್ತ ರಾವಣನ ಹೃದಯಪರಿವರ್ತನೆ ; ತನಗೆ ಸೀತೆಯಲ್ಲಿ ಹಠಾತ್ತಾಗಿ ಕರುಣೆ ಹುಟ್ಟಿ, ತನ್ನನ್ನು ತಾನೇ ಹಳಿದುಕೊಂಡು ಮತ್ತೆ ಸೀತೆಯಲ್ಲಿ ವೈರಾಗ್ಯ ತಾಳುತ್ತಾನೆ. ನಾಗಚಂದ್ರನ ಮಾತಿನಲ್ಲಿ ಈ ಸಂದರ್ಭವನ್ನು ತಿಳಿಯೋಣ :

ಕದಡಿದ ಸಲಿಲಂ ತಿಳಿವಂ
ದದೆ ತನ್ನಿಂ ತಾನೆ ತಿಳಿದ ದಶವದನಂಗಾ ।
ದುದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ ॥

ಹೀಗೆ ಪಶ್ಚಾತ್ತಾಪಕ್ಕೊಳಗಾದ ರಾವಣನು ಸೀತೆಯನ್ನು ರಾಮನಲ್ಲಿಗೆ ಕೊಂಡುಹೋಗಿ ಕೊಟ್ಟುಬಿಡೋಣವೇ ಎಂಬುದಾಗಿ ಚಿಂತಿಸುವಲ್ಲಿ, ಆತನ ಸ್ವಾಭಿಮಾನ ಅಡ್ಡಬರುತ್ತದೆ. ತನ್ನ ದೋರ್ಬಲವನ್ನು ಎರಡು ಕಡೆಯವರಿಗೂ ತೋರಿ ರಾಮಲಕ್ಷ್ಮಣರನ್ನು ವಿರಥರನ್ನಾಗಿ ಮಾಡಿ ಹಿಡಿದು ತಂದು ಸೀತೆಯನ್ನು ಕೊಡುವೆನೆಂದು ಆತ್ಮಗತವಾಗಿ ಹೇಳುವುದು ಎಷ್ಟು ಹೃದಯಂಗಮವಾಗಿದೆ.

ಇರದುಯ್ದೀಗಳೆ ಕೊಟ್ಟೊಡೆನ್ನ ಕಡುಪಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕು ಮೋಸರಿಸಿದಂತಾಗಿರ್ಕುಮಂತಾಗದಂ ।
ತಿರೆ ದೋರ್ಗರ್ವಮನಿರ್ವಲಂ ಪೊಗಟ್ಟಿನಂ ಸೌಮಿತ್ರಿಯಂ ರಾಮನಂ
ವಿರಥರ್ ಮಾಡಿ ರಣಾಗ್ರದೊಳ್ ಪಿಡಿದು ತಂದಾನ್ ಕೊಟ್ಟಪೆಂ ಸೀತೆಯಂ ॥

(XIV–೧೯)

ಈ ಮನೋವೃತ್ತಿಯಿಂದ ಕೊನೆಯತನಕವೂ ಅಭಿಮಾನಧನನಾಗಿ ಕಾದಿ ರಾವಣನು ಯುದ್ಧರಂಗದಲ್ಲಿ ಬೀಳುತ್ತಾನೆ. ವಿಮಲಸೂರಿಯ ಮೂಲದಲ್ಲಿ ಪ್ರತಿವಾಸುದೇವನಾದ ರಾವಣನು ದುರಂತನಾಯಕನೆಂಬ ಸೂಚನೆಯಿದ್ದರೂ, ನಾಗಚಂದ್ರನು ತನ್ನದೇ ಆದ ಮಹಾಕವಿಪ್ರತಿಭೆಯ ಮೂಲಕ ರಾವಣನ ಪಾತ್ರಕ್ಕೆ ಕಳೆಕಟ್ಟಿ, ಆತನ ದುಷ್ಕೃತ್ಯಗಳನ್ನು ಪಶ್ಚಾತ್ತಾಪದ ಅಗ್ನಿಯಲ್ಲಿ ಸುಟ್ಟುರುಹಿ ಆತನ ಆತ್ಮಕ್ಕೆ ಪಾವನತೆ ಬರುವುದನ್ನು ನಮಗೆ ಕಾಣಿಸುತ್ತಾನೆ.

ಇನ್ನು ಈ ಸುಂದರಕಾವ್ಯದಲ್ಲಿ ಬರುವ ಇತರ ಉತ್ತಮ ಗುಣಗಳನ್ನೆಲ್ಲ ಹೇಳತೀರದು.

## ನಾಗಚಂದ್ರನ ಶಾಂತಕ್ಕೆ ನೋಂತ ಜಿನಸ್ತುತಿಗಳು

ಇತ್ತಪೆ ನೀನೆ ದೇಹಿಗನುರೂಪಮೆನಲ್ ಸುಖಲೇಶಮಾದಿಯಾ
ಗತ್ತಲನಂತಸೌಖ್ಯಮವಸಾನಮೆನಲ್ ಪೆಱರಾರುಮಾವರಿ ।
ಲ್ಲಿತ್ತಪರನ್ಯರೆಂದು ಬಹಿರಂಗನಿಮಿತ್ತದಿನೆನ್ನಬರೆನ್ಗೆ ದೇ
ವೋತ್ತಮ ನೀನೆ ಚಾಗಿವೆಸರಂ ಪಡೆದಯ್ ಜಗದೊಳ್ ಜಿನೇಶ್ವರಾ॥ (V–೩)

ನನೆಗಣೆಯಿಂ ಜಗತ್ರಯಮನಂಡಲೆವಂಗಭವಂಗೆ ಭಂಗಮಂ
ಜನಿಯಿಸಿದೈ ಚರಾಚರರುಮಂ ತವೆ ನುಂಗಿದ ಕಾಲದಂಡಕೂ ।
ಕನೆ ರದಮಂ ಕಟಲ್ಚಿ ಕಳೆದಯ್ ಕಡು ಬಲ್ಲಿದನಪ್ಪ ಮೋಹಮ
ಲ್ಲನ ಬಲಗಯ್ಯನಯ್ಯ ಮುಱಿದಯ್ ಕಲಿ ನೀನೇ ವಲಂ ಜಿನೇಶ್ವರಾ ॥ (V–೫)

ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವಸೌಖ್ಯಮಂ
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳಭೇದಮಾದ ಕೊಂ ।
ಡಾಟದನಂತಸೌಖ್ಯಮನೆ ಮುಚ್ಚಿದ ಮುಚ್ಚುಗೆಯೊಳ್ ತೊಡರ್ಚುಮಾ
ಱಾಟದಿನೆನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ ॥ (V-೧೦)

ರಾವಣನು ಕದ್ದೊಯ್ಯುವಾಗ ಸೀತೆ ರೋದಿಸಿದುದು :

ಕ್ರೂರಾತ್ಮಂ ಮಚಕನವಿ
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ ।
ಹಾ ರಾಮಾ ಹಾ ರಾಮಾ
ಬಾರಿಪರಾರೆಂದು ಸೀತೆ ಶೋಕಂಗೆಯ್ದಳ್ ॥ (IX–೧೧೩)

ಸೀತೆಯನ್ನು ಕಾಣದೇ ರಾಮನು ದುಃಖಿಸಿದ ರೀತಿ :

ಹಾ ಹಾ ಜನಕಸುತೇ ವೈ
ದೇಹೀ ವೈದೇಹಿಯೆಂದು ಪುದಿದಿರೆ ಮನಮಂ ।
ಮೋಹತಮಂ ದೀಪಂ ವಾ
ತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ ॥ (IX–೧೧೬)

ಮೂರ್ಛೆ ತಿಳಿದೆದ್ದು ವೈದೇಹಿಯನ್ನು ವನಾಂತರದೊಳೆಲ್ಲಿಯೂ ಹುಡುಕಿ ಕಾಣದೆ ಮತ್ತೆ ಪ್ರಲಾಪಿಸುವನು :

ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ
ತಳಿರೇ ತಾವರೆಯೇ ಮದಾಳಿಕುಲಮೇ ಕರ್ಣಮ್ದಿಲೇ ಮತ್ತಕೋ ।
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ ॥
(IX–೧೧೮)

ಇವೆಲ್ಲ ಎಂತಹ ಕಲ್ಲೆದೆಯನ್ನಾದರೂ ಮೆಲ್ಲೆದೆಯಾಗಿಸಬಲ್ಲುವು.

ಇವಲ್ಲದೆ ನಾಗಚಂದ್ರನ ಹಿತವಾದ ನಾಣ್ಣುಡಿಗಳೂ, ನಾಣ್ಣುಡಿಗಳ ಮೂಲ್ಯವಿರುವ ಅಂದವಾದ ಉಪಮೆಗಳೂ, ಕೆಲವು ವೇಳೆ ಸ್ವಲ್ಪ ಹೆಚ್ಚಾಯಿತೋ ಎಂಬಂತಿರುವ ಆದರೂ ಸತ್ವಯುತವಾದ ಅರ್ಥಾಂತರನ್ಯಾಸಗಳೂ ಸರ್ವತ್ರ ಕಂಡುಬರುವ ಮಧುರ ನಾದಲೋಲತೆಯೂ ಆತನ ಕೃತಿಗಳಿಗೆ ನಿಜವಾಗಿಯೂ "ವಚಶ್ರೀನರ್ತಕೀವೇದಿಗಳು" ಎಂಬ ಪ್ರಶಸ್ತಿಗೆ ಅರ್ಹತೆಯನ್ನು ತಂದಿವೆ.

## ೭. ನಯಸೇನ (೧೧೧೨)

ಇವನೊಬ್ಬ ಕೆಚ್ಚೆದೆಯ ಕನ್ನಡಕವಿ. ಈತನ ಕೃತಿಯಾದ ಧರ್ಮಾಮೃತದಲ್ಲಿ ಬರುವ ಪದ್ಯಗಳಿಂದ ಈತನು ಮುಳುಗುಂದದವನೆಂತಲೂ ಶಕ ೧೦೩೪ (ಕ್ರಿ. ಶ. ೧೧೧೨) ರಲ್ಲಿ ಆ ಕೃತಿ ರಚನೆಯಾಯಿತೆಂದು ತಿಳಿದುಬರುತ್ತದೆ.

ಒಂದು ದೃಷ್ಟಿಯಿಂದ ಇವನೊಬ್ಬ ಕ್ರಾಂತಿಕಾರನೆನ್ನಬಹುದು. ಜನಸಾಮಾನ್ಯಕ್ಕೆ ಹಿಡಿಯದ ಕಬ್ಬಿಣದ ಕಡಲೆಗಳಂತಿರುವ ಸಂಸ್ಕೃತಭೂಯಿಷ್ಠ ಚಂಪೂಕಾವ್ಯಗಳನ್ನು ನೋಡಿ ಇವನು ತುಂಬಾ ನೊಂದಿರಬೇಕು. ಅನಾವಶ್ಯಕ

ವಾಗಿ ಕನ್ನಡ ಬರೆಹಗಳಲ್ಲಿ ಸಂಸ್ಕೃತವನ್ನು ತುಂಬಬೇಡಿ. ಸಂಸ್ಕೃತ ಬೇಕಾದವರು ಸಂಸ್ಕೃತದಲ್ಲಿ ಬರೆಯಿರಿ, ಶುದ್ಧಕನ್ನಡದಲ್ಲಿ ಸಕ್ಕದಂಗಳನ್ನು ತಂದೊಟ್ಟುವುದು ತಕ್ಕುದಲ್ಲ ಎನ್ನುತ್ತಾನೆ.

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ ।
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥

ಸಕ್ಕದಮಂ ಪೇೞ್ವೊಡೆ ನೆಱ
ಸಕ್ಕದಮಂ ಪೇೞ್ಗೆ ಶುದ್ಧ ಕನ್ನಡದೊಳ್ ತಂ ।
ದಿಕ್ಕುವುದೆ ಸಕ್ಕದಂಗಳ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥

ನಯಸೇನನು ತಾನು ನುಡಿದಂತೆಯೇ ನಡೆದನೆನ್ನಬಹುದು. ಕನ್ನಡದ ಚಂಪೂವನ್ನು ಪ್ರೌಢಿಮೆಯ ಅಟ್ಟದಿಂದ ಕೆಳಗೆ ಇಳಿಸಿ ಜನಸಾಮಾನ್ಯಕ್ಕೆ ಗ್ರಾಹ್ಯವಾಗುವಂತೆ ಮಾಡಿದನು. ದೇಸಿಯ ಶೋಭೆಯಿಂದ ತುಂಬಿದ ಹಳ್ಳಿಯ ಕಥೆಗಳನ್ನು ಜೈನಧರ್ಮಾಮೃತವನ್ನುಣಿಸಲು ಯಥೋಚಿತವಾಗಿ ತಿಳಿಯಾದ ಗದ್ಯದಲ್ಲಿ ಬಳಸಿಕೊಂಡನು. ಹಳ್ಳಿಯ ಕಥೆಗಳಲ್ಲದೆ ಪಂಚತಂತ್ರ ಕಥೆಗಳಿಂದಲೂ ಇತರ ಪ್ರಾಕೃತ ಸಂಸ್ಕೃತಿ ಕಥಾಕೋಶಗಳಿಂದಲೂ ಆಯ್ದುಕೊಂಡು ನಯಸೇನನು ತನ್ನ ರಸಪಾಕವನ್ನು ತಯಾರಿಸಿರಬಹುದು.

## ಧರ್ಮಾಮೃತ

ಧರ್ಮಾಮೃತದಲ್ಲಿ ಜೈನದರ್ಶನ, ಅದರ ಎಂಟು ಅಂಗಗಳಾದ ನಿಶ್ಯಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ ಮತ್ತು "ಕೊಲ್ಲದ, ಪುಸಿಯದ, ಕಳವಿನಿಸಿಲ್ಲದ, ಪರವನಿತೆಯರ್ಗೆ ಪದೆಪಿಂ ಚಿತ್ತಂ ಸಲ್ಲದ, ಪರಿಗ್ರಹಕ್ಕಳಿಪಿಲ್ಲದ"—ಎಂಬ ಪಂಚ ಅಣುವ್ರತಗಳು—ಹೀಗೆ ಹದಿನಾಲ್ಕು ಮಹಾರತ್ನಗಳನ್ನು ಮಹಾಪುರುಷರ ಕಥೆಗಳ ಬೆಳಕಿನಲ್ಲಿ ೧೪ ಆಶ್ವಾಸಗಳ ಮೂಲಕ ಚಂಪೂರೂಪವಾಗಿ ಹೇಳಿರುವನು.

ಕನ್ನಡದಲ್ಲಿ ಸುಲಭವಾಗಿಯೂ ಲಲಿತವಾಗಿಯೂ ಕಾವ್ಯರಚನೆ ಮಾಡಿದವರಲ್ಲಿ ನಯಸೇನನೇ ಮೊದಲಿಗನೆಂದರೆ ತಪ್ಪಾಗದು. ಕಾವ್ಯಕ್ಕೆ ಸಹಜತೆ ಮುಖ್ಯವೆಂಬುದನ್ನು ಒತ್ತಿ ಹೇಳಿರುವನು :

ಮಱಿಯಿಲ್ಲದೆ ಪೊಯ್ನೀರಿಂ
ಬೆಳಗುಮೆ ಧರೆ ಮಱುಗಿ ಕುದಿದು ಶಾಸ್ತ್ರದ ಬಲದಿಂ ।
ದಳಿಪಿಂ ಪೇೞ್ದೊಡಮದು ಕೋ
ಮಳಮಕ್ಕುಮೆ ಸಹಜವಿಲ್ಲದಾತನ ಕಬ್ಬಂ ॥

ಸಹಜತೆಯೂ ಶಾಸ್ತ್ರದ ಬಲವೂ ಎರಡೂ ನಯಸೇನನಲ್ಲಿ ಧಾರಾಳವಾಗಿದೆ ಎಂಬುದನ್ನು ಗ್ರಂಥದ ಉದ್ದಕ್ಕೂ ಕಾಣಬಹುದು. ಹೀಗಿದ್ದರೂ ಅವನು ವಿನಯಶಾಲಿ.

ಪಱಿಗೋಲೊಳ್ ವಾರ್ಧಿಯ ತಡಿ
ಗುಱಿದೆ ಭರಂಗೆಯ್ದು ಪೋಪೆನೆಂಬೆಗ್ಗನವೋಲ್ ।
ನೆಱೆ ಜಿನಕಾವ್ಯಾಂಬುಧಿಯುಮ
ನುಱಿದೀಸುವೆನೆಂಬ ದಿಟ್ಟರೆಮ್ಮಂ ಪೆಱರಾರ್ ॥

ಪ್ರತಿಯೊಂದು ಕಥೆಯನ್ನೂ ಸ್ವಾರಸ್ಯವಾಗಿ ಹೇಳುತ್ತಾನೆ. ಹೇಗಾದರೂ ಪದ್ಯಗಳನ್ನೇ ಬರೆಯಬೇಕೆಂಬ ಲವಲವಿಕೆ ಆತನಲ್ಲಿಲ್ಲ. ತಿಳಿಯಾದ ಕನ್ನಡ ಗದ್ಯವನ್ನೇ ಹೆಚ್ಚಾಗಿ ಬಳಸುವನು. ಅಲ್ಲಲ್ಲಿ ವಿಶಿಷ್ಟವಾದ ನೀತಿ ಉಪದೇಶಗಳನ್ನು ಹೇಳುವಲ್ಲಿ ಸದಾ ಸ್ಮರಣೆಯಲ್ಲಿಟ್ಟುಕೊಳ್ಳಲು ಅನುಕೂಲವಾಗಲಿ ಎಂಬುದಕ್ಕಾಗಿಯೋ ಅಥವಾ ವೈವಿಧ್ಯಕ್ಕಾಗಿಯೋ ಇರಬೇಕು, ನಯಸೇನನು ಪದ್ಯಗಳನ್ನು ರಚಿಸುವನು :

ಕಲ್ಲಂ ಕರ್ಱನಮಂ ನೋ
ಡೆಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನಂ ।
ಸಲ್ಲಲಿತಮಪ್ಪ ರತ್ನಮ
ನೆಲ್ಲಿಯುಮೋರಂತೆ ಪಡೆಯಲಕ್ಕುಮೆ ಧರೆಯೊಳ್ ॥

ತನ್ನವರೆನ್ನವರೆನ್ನದೆ
ಸನ್ನುತಮತಿಯಾಗಿ ಸಕಲ ಜೀವಂಗಳುಮಂ ।

ತನ್ನಂ ರಕ್ಷಿಸುವಂತಿರೆ
ಬನ್ನಣಮೇನಱಿದು ರಕ್ಷಿಪುದು ಸತ್ಪುರುಷಂ ॥

ಕಲಿತನದಿಂದಂ ಲೋಗರ್
ಪುಲಿಯುಂ ಪಿಡಿದೊಡಮದೇಂ ಬಿಡೆಂಬರ್ ತಾಮೊಂ ।
ದಿಲಿಯಂ ಪಿಡಿದೊಡಮದು ಪೆ
ರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ ॥

ಆರಯ್ದು ನೋಡೆ ತೊಱೆಗಳ
ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ।
ಸಾರಂಗೆಟ್ಟುಪ್ಪಪ್ಪವೊ
ಲಾರುಂ ದುರ್ಜನರ ಸಂಗದಿಂದಂ ಕಿಡುವರ್ ॥

ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ ಮಿಂಚಿನ
ಚ್ಚರಿಯಪ್ಪಂತುಱದೊಂದು ಮಾಡಿ ಪೆಣೆವರ್ ಕಲ್ಲಲ್ಲಿ ನಾರೆತ್ತುವರ್ ।
ತ್ವರಿತಂ ಬಿನ್ನಣದಿಂ ಬಿಸಿಲ್ಗ ದುರೆಯಂ ತಂದೇಱುವರ್ ಮೇರುವಂ
ಭರದಿಂದಂ ಪಿಡಿದೆತ್ತುವರ್ ಮಳಲೊಳಂ ನೀರ್ಮಾಡುವರ್ ಜೋಡೆಯರ್ ॥

ನಯಸೇನನ ಗದ್ಯಕ್ಕೆ ಒಂದು ನಿದರ್ಶನ :

"ಸುಬಂಧುಶ್ರೀ ತಂದೆಯ ಮಾತಿಂಗೆ ನಕ್ಕು ನಿಮ್ಮಂತಪ್ಪ ಮಹಾ ಪುರುಷರಿಂತಪ್ಪ ನಿರ್ಬುದ್ಧಿತನಮಂ ಮಾಡಲಾಗದು, ಈ ಶ್ರೀಗೆಱಗಿ ಧರ್ಮಮಂ ಬಿಡುವುದಾವ ಬುದ್ಧಿ, ಕಂಚಂ ಬಿಟ್ಟೋಡಂ ಪಿಡಿವ, ತಾಯಂ ಬಿಟ್ಟು ರಕ್ಕಸಿಯಂ ಪೊರ್ದುವ ಭೂಪರಂ ಬಿಟ್ಟು ಪೊಲೆಯರಂ ಕೆಳೆಗೊಳ್ವ, ಕುದುರೆಯನೊಲ್ಲದೆ ನಾಯನೇಱುವ, ಪಟದಾನೆಯಂ ಕೊಟ್ಟು ಕೋಡಗಮಂ ಕೊಳ್ವ, ನೆಲೆವಾಟಿಂ ಬಿಟ್ಟು ತಿರಿದುಂಬ ಮರುಳಂ ಪೋಲ್ತುಂ, ಬೆಕ್ಕು ಪಾಲಂ ಕಾಣ್ಬುದಲ್ಲದೆ ಮೇಗೆ ಬಂದಡಸುವ ಬಡಿಗೆಯಂ ಕಾಣದು...." (ಅಹಿಂಸಾ ವ್ರತದ ಕಥಾಭಾಗ).

ನಯಸೇನನು ಕೆಲವೆಡೆ ವೈದಿಕಮತವಿಡಂಬನೆ ಮಾಡಿದ್ದಾನೆ ; ಆದರೆ ಹಾಗೆ ಮಾಡುವಲ್ಲಿ ಎಲ್ಲೆ ಮೀರಲಿಲ್ಲ.

ನಯಸೇನನು ಅಂದವಾದ ನಾಣ್ಣುಡಿಗಳನ್ನು ಹೇಳುವುದರಲ್ಲಿ ಅತಿ ನಿಪುಣನು ; ಅವಲ್ಲಿ ಕೆಲವು :

ನಾಯ್ಗೆ ನವಿಲಾಟಮೆ ? (I–೪೭); ಕಬ್ಬಿನ ತೋಟಮಂ ನರಿ ಪೊಕ್ಕಂತೆ (II–೭೧) ; ಕೇರಿಲ್ಲದ ಒರವೆನೆಂಬ ಪಚ್ಚಪಸಿಯೆಗ್ಗನಂತೆ (I–೬೭) ; ಎಡೆಯನರ ಸಾದೊಡೆ ಕೊಡೆಯ ಕಾವು ಮೇಗಾದುದು (II–೧೨೪) ; ಸಾಕ್ಷಿಯಿಲ್ಲದೆ ಸಾಲಂಗೊಟ್ಟೋನಂತೆ (I–೧೪) ; ಕನಸಿನ ಭತ್ತಕ್ಕೆ ಗೋಣಿಯಾಂತಂತೆ (II–೧೨೩) ; ಕಳ್ಳಂಗ ಬೆಳ್ದಿಂಗಳು ಸೊಗಸದು (II–೧೨೪) ; ಸತ್ತುಕೊಳ್ವ ಸಗ್ಗದಿಂ ಬದುಕಿ ಕೊಳ್ವಂ ನರಕಂ ಲೇಸು (II–೧೩೩) ; ಮುನ್ನ ಬಂದ ಕಿವಿಯಿಂದ ಬಟಿಕ ಬಂದ ಕೋಡು ಕೂರಿತ್ತು (II–೧೦೮) ; ಪಚ್ಚೋತಿಯಂತೆ ಪಲವುಂ ಬಣ್ಣಂ (II–೧೧೫) ; ನಾಯ ಬಾಲ ಡೊಂಕು (II–೯೨) ; ಮರುಳ ಪಯಣಕ್ಕೆ ತಟಗೆಲೆಯ ಸಂಪಿಡಿಗನೆಂಬಂತೆ ; ಸೆಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಟಿಱಿದು, ಕೂಟಿಲ್ಲದೆ ಮದ್ದಳೆಯುಂ ಬಡಿವಂತೆ, ಇತ್ಯಾದಿ.

ಪ್ರೊ|| ಕೃಷ್ಣಶಾಸ್ತ್ರಿಗಳು ಹೇಳುವಂತೆ "ಧರ್ಮಾಮೃತದಲ್ಲಿ ಎಲ್ಲೆಲ್ಲಿ ನೋಡಿದರೂ ಉಪಮೆ ; ಸರಪಣಿಯಂತೆ ಸಾಲುಹಿಡಿದು ಬರುವ ಉಪಮೆ....ಎಲ್ಲರ ಬಾಯಲ್ಲಿಯೂ ಇದ್ದಿರಬಹುದಾದ ಗಾದೆಗಳು....ಜನಸಾಮಾನ್ಯರಿಗೆ ಇವು ಹಿಡಿಯುವಷ್ಟು ಕಾವ್ಯದ ಚಮತ್ಕಾರವಿಶೇಷಗಳೂ ಅಲಂಕಾರ ವೈಚಿತ್ರ್ಯಗಳೂ ಹಿಡಿಯುವುದಿಲ್ಲ. ಆದ್ದರಿಂದಲೇ ಈ ಗ್ರಂಥವು ಕುಮಾರವ್ಯಾಸಭಾರತ, ತೊರವೆ ರಾಮಾಯಣ ಮುಂತಾದ ಗ್ರಂಥಗಳಂತೇ ಜನಸಾಮಾನ್ಯರಂಜಕವಾಗಿದ್ದಂತೆ ತೋರುತ್ತದೆ."

## ೮. ಬ್ರಹ್ಮಶಿವ (೧೧೨೫)

ಇವನ ಕಾಲ ಸು. ೧೧೨೫ ಇರಬೇಕೆಂಬುದಾಗಿ ರಾ. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ. ಇವನು ಗ್ರಂಥಾರಂಭದಲ್ಲಿ ಚಾಲುಕ್ಯತ್ರೈಲೋಕ್ಯಮಲ್ಲನ ಮಗನಾದ ಕೀರ್ತಿವರ್ಮನನ್ನು (೧೧೨೫) ಸ್ತುತಿಸಿರುವುದರಿಂದ ಆತನ ಸಮಕಾಲೀನನಾಗಿರಬೇಕು. ಇವನು ಸಮಯಪರೀಕ್ಷೆ ಎಂಬ ಜೈನ ಮತ ಪ್ರಚಾರ ಗ್ರಂಥವನ್ನು ಮತ್ತು ತ್ರೈಲೋಕ್ಯಚೂಡಾಮಣಿ ಎಂಬ ಸ್ತೋತ್ರವನ್ನು ರಚಿಸಿರುವನು. ಮೊದಲು ಶೈವಮತದವನಾಗಿದ್ದು ಅದು ಅಸಾರವೆಂದು ಭಾವಿಸಿಕೊಂಡು ಜೈನನಾದಂತೆ ತಿಳಿದುಬರುತ್ತದೆ. ಹಿಂದೆ ಶೈವನಾಗಿದ್ದುದರಿಂದ ಆ ಸಂಬಂಧವಾದ ಎಲ್ಲ ಮತಗಳನ್ನು ಅವುಗಳ ಅಸಾರತೆಯನ್ನು ತಾನು ಬಲ್ಲೆನೆನ್ನುತ್ತಾನೆ. ತನ್ನ ಸ್ಥಳ ಪೊಟ್ಟಳಗೆರೆಯೆಂಬುದಾಗಿ ಹೇಳಿಕೊಂಡಿದ್ದಾನೆ.

ಪಿರಿದರ್ಥಿ ಮುನ್ನಮಾಹೇ । ಶ್ವರದೊಳ್ಪನಗದಳಿಕೊಳೊಳ್ಪುಗಾಣದೆ ನೆಗೞ್ದೀ
ಪರಮಜಿನಧರ್ಮದೊಳಪೊ । ಕ್ಕು ರಾಗಿಪಂ ಸುಕವಿಪಂಪರಾಜನವೊಮ್ಮಂ ॥
(I–೫೯)

ಸೌರಂ ಕೌಳೋತ್ತರಮೆಂ
ಬಾರಾಧನೆಗಳೊಳವಃಖಿಳವೇದಸ್ಮೃತಿ ತ ।
ತ್ಪೌರಾಣವೆನಿಪ್ಪವಱೊಳ
ಸಾರಮನಿಂಬಾಗೆ ಬ್ರಹ್ಮಶಿವಕವಿಬಲ್ಲಂ ॥ (I–೫೮)

## ಸಮಯಪರೀಕ್ಷೆ

ಇದು ಗದ್ಯವಿಲ್ಲದೆ ಕಂದವೃತ್ತಗಳಲ್ಲಿ ರಚಿತವಾಗಿದೆ. ಅಲ್ಲಲ್ಲಿ ಒಂದೊಂದು ವರ್ಣವೃತ್ತ ಬಂದುದುಂಟು. ೧೫ ಅಧಿಕಾರಗಳಿವೆ. "ಆಪ್ತಾಗಮಧರ್ಮಂ ಅನಾಪ್ತಾಗಮಧರ್ಮಂ" ಎಂಬುದಾಗಿ ಜೈನಮತ ಸರ್ವೋತ್ತಮತ್ವವನ್ನೂ ಜೈನೇತರ (ಮುಖ್ಯವಾಗಿ ಬ್ರಾಹ್ಮಣ) ಮತಗಳ ಅಸಾರತೆಯನ್ನೂ ವಿವರಿಸಿರುವನು. ಇದರಿಂದ ಅಂದಿನ ಕಾಲದ ಸಮಾಜ ಪರಿಸ್ಥಿತಿಯನ್ನು ಸ್ವಲ್ಪವಾದರೂ ತಿಳಿಯುವುದಕ್ಕೆ ಸಾಧ್ಯವಾಗುತ್ತದೆ. ರಾಷ್ಟ್ರಕೂಟ ಗಂಗರ ಕಾಲದಲ್ಲಿ ಜೈನಮತಕ್ಕೆ ಇದ್ದ ಆದರ ಪ್ರೋತ್ಸಾಹಗಳು ಕಡಮೆಯಾಗುತ್ತಾ ಬಂದಿರಬೇಕು. ಇತರ ಮತಾನುಯಾಯಿಗಳಿಗೂ ಜೈನರಿಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಘರ್ಷಣೆ ಆಗುತ್ತಿದ್ದಿರಬಹುದು. ಕವಿಯ ಮಾತುಗಳು ಪರಮತ ವಿಡಂಬನದ ವಿಚಾರವಾಗಿ ಸ್ವಲ್ಪ ಕಟುವಾಗಿ ಕಂಡುಬಂದರೂ ಅಂದಿನ ಕಾಲದ ಜನದಲ್ಲಿದ್ದ ಆಚಾರಕ್ರಮಗಳೂ ಕೆಲವು ವೇಳೆ ಮೂಢನಂಬಿಕೆಗಳೂ ಯಾವ ಪ್ರಕಾರ ಇದ್ದುವೆಂಬುದು ತಿಳಿದುಬರುತ್ತದೆ. ಒಂದು ಕುಟುಂಬದಲ್ಲಿ ಹೆಂಡತಿ ಗಂಡ ಮಕ್ಕಳು ಬೇರೆ ಬೇರೆ ಧರ್ಮಗಳನ್ನು ಅವಲಂಬಿಸುತ್ತಿದ್ದರೆಂಬುದಾಗಿ ಊಹಿಸಲು ಅವಕಾಶವುಂಟು :

ಪೆಂಡತಿ ಮಾಹೇಶ್ವರಿ ಗಡ
ಗಂಡಂ ಜೈನಂ ಗಡವನ ಮಕ್ಕಳ್ಗಡ ಮಾ । ರ್ತಂಡಂಗೆ ಭಕ್ತರೆನಿಪಾ ॥
(IV–೧೨೫)

ಇದೊಂದು ಸ್ವತಂತ್ರಕೃತಿ ; ಯಾವುದರ ಮೂಲವನ್ನನುಸರಿಸಿ ಬರೆದುದಲ್ಲ

ಎಂಬುದು ಇದರ ಇನ್ನೊಂದು ವೈಶಿಷ್ಟ್ಯ. ಭಾಷಾದೃಷ್ಟಿಯಿಂದ ಹೇಳುವುದಾದರೆ, ಇದೊಂದು ಸಂಸ್ಕೃತ ಭೂಯಿಷ್ಠವಲ್ಲದ ಸುಲಭವೂ ಸರಳವೂ ಆದ ಕನ್ನಡದಲ್ಲಿ, ಲಲಿತಶೈಲಿಯಿಂದ ರಚಿತವಾದ ಕಾವ್ಯವೆನ್ನಬಹುದು. ವರ್ಣನೆ ಪಾತ್ರರಚನೆ ರಸಪುಷ್ಟಿ ಇತ್ಯಾದಿಗೆ ಇದರಲ್ಲಿ ಅವಕಾಶವಿರುವುದಿಲ್ಲ. ಸಮಯ ಪರೀಕ್ಷೆಯಿಂದ ಕೆಲವು ಉದಾಹರಣೆಗಳು :

### ಜೈನರ ಜೀವದಯೆ

ನೀರಂ ತೋಱದೆ ಪಸಿದುದ
ನಾರಯ್ಯದೆ ಸೇದೆಯುೞಿದು ನಿಲಿಸದೆ ಪಿರಿದುಂ ।
ಭಾರಮನೆ ಪೇಱಿ ಪಸುವಂ
ದೂರಂತರಮುಯ್ಯಲಾಗದೆಂಬರ್ ಜೈನರ್ (V–೧೨)

### ನೀತಿ

ಪಾಲೆಂದಡೆ ಗಿಡುಮರಗಳ
ಪಾಲುಂ ಸೀವ್ಯಂಗಲಲ್ಲವೆನಿಸಿದ ಪಾಲುಂ ।
ಪಾಲಕ್ಕುಮೆ ಜಿನಮತದಿಂ
ಮೇಲಕ್ಕುಮೆ ಸಿತಗಮಾಱ್ಪಿಸಿತಮತ ಕಥೆಗಳ್ ॥ (III-೯೩)

ಮಾಡಿದೆನೆಂಬಭಿಮಾನಂ
ಬೇಡೇಕೆನೆ ತಾಂ ನಿಮಿತ್ತಮಾತ್ರಮದೆಂತುಂ ।
ಮಾಡುವೆನೆಂಬಡೆ ಮೆಚ್ಚಿತು
ಮಾಡಲ್ಕೆ ಸಮರ್ಥನಪ್ಪಡಪ್ಪುದು ಗರ್ವಂ ॥ (IV–೧೧೫)

ತುಪ್ಪದೊಳಗೆಣ್ಣೆಯಂ ಲೇ
ಸಪ್ಪಾ ಹೊನ್ನೊಳಗೆ ಬೆಳ್ಳಿಯಂ ಧನದಳುಪಿಂ ।
ದುಪ್ಪಿನೊಳು ಮಣ್ಣನೆಂತುಂ
ತಪ್ಪಿಲ್ಲದೆ ನಡೆವನೆಂಬನಾಗಲ್ ಬೆರಸಲ್ (V–೮೫)

### ಇತರ ಮತವಿಡಂಬನ

ಜಗಮಂ ಮಾೞ್ಪಂ ಗಡ ಪ
ದ್ಮಗರ್ಭನಂತನಿತು ಶಕ್ತಿಯುಳ್ಳಂ ತಾನೇ ।

ಕೈಗಡಂ ನಿಜಶಿರಮಂ ಕಿ
ತ್ತೈಗೆಯೆತ್ತಿದ ಮೃಡನನಿನಿಸುಮಾಣಿಸಲಾಱಿಂ (IV-೧೩೩)

ಓರ್ವ ಜಗಮಂ ಮಾಡುವ
ನೋರ್ವಂ ಮತ್ತದನೆ ಕಾವನಲ್ಲದನೇಂ ಮ ।
ತ್ತೋರ್ವಂ ಕಿಡಿಸುವನನಿಬರು
ಮೋರ್ವನೆ ಗಡ ಕಡೆಯೊಳಿನ್ನುಮಘಟಿತಮೊಳವೇ ॥ (X-೬೧)

ತ್ರೈಲೋಕ್ಯಚೂಡಾಮಣಿ ಸ್ತೋತ್ರದಲ್ಲಿ ೩೬ ವೃತ್ತಗಳಿವೆ. ಪರಮತವಿಡಂಬನೆಯ ಮೂಲಕ ಜಿನಸ್ತುತಿಯನ್ನು ಮಾಡುತ್ತಾನೆ. ಒಂದು ಉದಾಹರಣೆ :

ಕಱಿಯಂ ಸಂಜೆಯನಿಂದ್ರನಂ ಗಣಪನಂ ಗೌರೀಶನಂ ಭಾನುವಂ
ಪೆಱಿಯಂ ಗೋಕುಳಮಂ ಗಿರಿಪ್ರಕರಮಂ ಬಾದುಂಬೆಯಂ ಕಾಂತಿಯಂ ।
ತೊಱಿಯಂ ವಾರ್ಧಿಯನಯ್ದು ಪಾಲು ಮರನಂ ದೈವಂಗಳಂದಿಂತು ಕೂ
ರ್ತೞಿಗುತ್ತಿರ್ಪವರೆಂತು ಮುಕ್ತಿವಡೆವರ್ ತ್ರೈಲೋಕ್ಯಚೂಡಾಮಣೀ ॥

## ೯. ಕರ್ಣಪಾರ್ಯ (೧೧೪೦)

ಈತನು ರಚಿಸಿದ ನೇಮಿನಾಥಪುರಾಣದಲ್ಲಿನ ಈ ಪದ್ಯದಿಂದ ಈತನು ಲಕ್ಷ್ಮೀಧರನೆಂಬ ರಾಜನ ಆಶ್ರಯದಲ್ಲಿದ್ದಂತೆ ತಿಳಿದುಬರುತ್ತದೆ :

ಶರದುದ್ಯಚ್ಚಂದ್ರ ಚಂದ್ರಾಭರಣ ಸುರಸರಿತ್ತಾರ ತಾರಾಚಳಪ್ರ
ಸ್ಫುರಕೀರ್ತಿಶ್ರೀವಿಳಾಸಂ ಸಕಲಗುಣಗಣಾವಾಸನಾಗಿರ್ದ ಲಕ್ಷ್ಮೀ ।
ಧರನಿಂ ಸಂಸಿದ್ಧಮಾದೀಕೃತಿ ವಿಬುಧಜನಾಹ್ಲಾದ ಸಂಪಾದಿವಿಶ್ವಂ
ಭರೆಯೊಳ್ ನಿಲ್ಕೆಯ್ದೆ ನಿಲ್ವಿನ್ನೆಗಮವನಿಕುಲಾದ್ರೀಂದ್ರಚಂದ್ರಾರ್ಕತಾರಂ ॥
(XIV-೧೪೯)

ಈ ಲಕ್ಷ್ಮೀಧರನು ಶಿಲಹಾರ ಜಯಾದಿತ್ಯನ (೧೧೪೩–೬೪) ಮಂತ್ರಿಯಾಗಿದ್ದಂತೆ ತಿಳಿದುಬರುತ್ತದೆ.[1] ಆದುದರಿಂದ ಕರ್ಣಪಾರ್ಯನ ಕಾಲವನ್ನು

---

[1] ನೇಮಿನಾಥಪುರಾಣ, ಮದ್ರಾಸು ವಿಶ್ವವಿದ್ಯಾನಿಲಯ, ಪು. xxxi

ಸು. ೧೧೪೦ ಎಂಬುದಾಗಿ ಇಟ್ಟುಕೊಂಡರೆ ಅಸಮಂಜಸವಾಗದು.

ಈತನಿಗೆ 'ಭವ್ಯಜನವನಮಾರ್ತಾಂಡ', 'ಪರಮಜಿನಕ್ಷೀರವಾರಾಶಿ ಚಂದ್ರ' 'ಸಮ್ಯಕ್ತ್ವರತ್ನಾಕರಂ' ಇತ್ಯಾದಿ ಬಿರುದುಗಳಿದ್ದುವು. ಈತನು ಕೊಲ್ಲಾಪುರ ಪ್ರಾಂತದವನಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[1]

ಇದರಲ್ಲಿ ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತವೂ ಒಂಬತ್ತನೆಯ ಬಲದೇವ ವಾಸುದೇವರಾದ ಕೃಷ್ಣಬಲರಾಮರ ಹರಿವಂಶ ಚರಿತವೂ ೧೪ ಆಶ್ವಾಸಗಳಾಗಿ ವರ್ಣಿಸಲ್ಪಟ್ಟಿವೆ. ಇದು ಜೈನರಲ್ಲಿ ಬಹಳ ಪ್ರಸಿದ್ಧವಾದ ಪುರಾಣ ; ಜೈನಪುರಾಣಲಕ್ಷಣಕ್ಕೆ ಆವಶ್ಯಕಗಳಾದ ಲೋಕಾಕಾರಕಥನ ಇತ್ಯಾದಿಯೂ ಮಹಾಕಾವ್ಯದ ಸಾಂಪ್ರದಾಯಿಕ ಲಕ್ಷಣಕ್ಕೆ ಆವಶ್ಯಕಗಳಾದ ಹದಿನೆಂಟು ವರ್ಣನೆಗಳೂ ಬಹಳ ಮಿತವಾಗಿ ಬಂದಿರುವುವು. ವಿಸ್ತಾರವಾದ ಕಥಾವಸ್ತುವಿನಲ್ಲಿ ಯಾವ ವಿವರಗಳೂ ಬಿಟ್ಟುಹೋಗಬಾರದೆಂಬ ಧ್ಯೇಯವು ಕವಿಗಿದ್ದಂತೆ ತೋರುತ್ತದೆ. ಇದರಿಂದಾಗಿ ಕವಿಯು ಹೆಚ್ಚಿನ ಸ್ವಾತಂತ್ರ್ಯವಹಿಸಿ ಕಾವ್ಯದೃಷ್ಟಿಯಿಂದ ನೀರಸವಾದ ಭಾಗಗಳನ್ನು ಕುಗ್ಗಿಸುವುದಕ್ಕಾಗಲಿ ಸ್ವಾರಸ್ಯವಾದ ಭಾಗಗಳನ್ನು ಹಿಗ್ಗಿಸುವುದಕ್ಕಾಗಲಿ ಯತ್ನಿಸಿದಂತಿಲ್ಲ. ಆದುದರಿಂದ ಈ ಕೃತಿಯಲ್ಲಿ ಕಾವ್ಯಧರ್ಮನಿರೂಪಣೆಗೆ ಅಷ್ಟು ಒದಗಲಿಲ್ಲವೆನ್ನಬಹುದು. ಇದರಲ್ಲಿ ಸ್ವಾಭಾವಿಕವಾಗಿ ಶಾಂತರಸವೇ ಪ್ರಧಾನ ರಸ. ಶೃಂಗಾರ ವೀರಾದಿ ರಸಚಿತ್ರಣಗಳು ಅಲ್ಲಲ್ಲಿ ಸಂದರ್ಭೋಚಿತವಾಗಿ ಬಂದಿರುತ್ತವೆ. ಪಾತ್ರರಚನೆಯಲ್ಲಿಯೂ ನಾವು ಹೆಚ್ಚಿನ ಕೌಶಲವನ್ನು ಕಾಣುವುದಿಲ್ಲ.

ಕರ್ಣಪಾರ್ಯನಿಗೆ ವೃತ್ತ್ಯನುಪ್ರಾಸವೆಂಬ ಶಬ್ದಾಲಂಕಾರದ ಮೇಲೆ ತುಂಬ ಪ್ರೀತಿಯಿದ್ದಂತೆ ತೋರುತ್ತದೆ. ಹೆಚ್ಚಿನ ಪದ್ಯಗಳಲ್ಲಿ ಇದು ಬಹಳ ಸಹಜವಾಗಿ ಬಂದುಬಿಟ್ಟಿದೆ.

ಪಾಱುವ ತಲೆಗಳ ನೆತ್ತರ
ತೂಱುವ ಸುಟ್ಟುಱಿಗಳಾಡುವಟ್ಟೆಗಳೆ ಪೆಣಂ।

---

[1] ನೇಮಿನಾಥಪುರಾಣ, ಮದ್ರಾಸು ವಿಶ್ವವಿದ್ಯಾನಿಲಯ.

ಬೇಱಿದ ರುಧಿರದ ತೊಱೆಗಳೆ
ಮಾಱಾಂಪವರಾರ್ ಜವಂಗಮಾ ರಾಮಂಗಂ ॥ (XII-೧೧೪)

ಇತರ ಅಲಂಕಾರಗಳೂ ಒಂದು ಹದದಲ್ಲಿ ಬಂದಿರುತ್ತವೆ. ನಾಣ್ನುಡಿಗಳನ್ನು ಔಚಿತ್ಯವರಿತು ಪ್ರಯೋಗಿಸಿರುವನು :

ಪಾವಡರ್ದ ಪಂದೆಯಂದದಿಂ (XII-೧೬೦), ನೆಲಂ ಬೆಸಲೆಯಾದಂತೆ (X-೧೪೦), ಕಡಬಿಱಿಗುಮೆ ಗಂಜಿಯಿಱಿಂಯದೆನಲ್ (XI-೯೪), ತಿಪ್ಪೆಯೊಳೇಂ ತಾವರೆ ಪುಟ್ಟುಗುಮೆ (III-೪೩) ಇತ್ಯಾದಿ.

ವೈದಿಕಮತೋಕ್ತವಾದ ಹರಿವಂಶ ಕಥೆಗೂ ಇಲ್ಲಿನ ಕಥೆಗೂ ಅನೇಕ ವ್ಯತ್ಯಾಸಗಳುಂಟು : (೧) ದೇವಕಿಯ ವಿವಾಹದ ಪೂರ್ವದಲ್ಲಿ ವಸುದೇವನ ವಿಷಯವಾಗಿ ಇಲ್ಲಿ ಹೆಚ್ಚಿನ ವಿವರಗಳುಂಟು; ಅವನು ಸಮುದ್ರವಿಜಯನ ಕಿರಿಯ ತಮ್ಮನು ; ಅವನ ಪೂರ್ವಭವದ ಕಥೆ ಬಂದಿದೆ ; ವಸುದೇವನು ಅನೇಕ ಸುಂದರಿಯರನ್ನು ಸ್ವಯಂವರಗಳಲ್ಲಿ ಮದುವೆಯಾಗುವನು. (೨) ಉಗ್ರಸೇನ ಪದ್ಮಾವತಿಯರ ಮಗನಾದ ಕಂಸನು ತಾಯ ಗರ್ಭದಲ್ಲಿದ್ದಾಗಲೇ ತಂದೆಯ ಮಾಂಸವನ್ನು ತಿನ್ನಬೇಕೆಂಬ ಬಯಕೆಯನ್ನು ತಾಯಿಗೆ ಉಂಟುಮಾಡಿದುದರಿಂದ, ಆ ಮಗುವನ್ನು ಹುಟ್ಟಿದೊಡನೆಯೇ ಒಂದು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ತೇಲಿಬಿಡುವರು. ಮದ್ಯ ಮಾರುವ ಹೆಂಗಸೊಬ್ಬಳಿಗೆ ಆ ಪೆಟ್ಟಿಗೆ ದೊರೆತು, ಅವಳು ಆ ಮಗುವನ್ನು ಕಂಸನೆಂಬ ಹೆಸರನ್ನಿಟ್ಟು ಸಾಕುವಳು. (೩) ಕಂಸನು ದೊಡ್ಡವನಾಗಿ ಚಕ್ರಿಯ (ಜರಾಸಂಧನ) ಮಗಳಾದ ಜೀವಂಜಸೆಯನ್ನು ಮದುವೆಯಾಗಿ ಅವನ ಸಹಾಯದಿಂದ ತಂದೆಯಾದ ಉಗ್ರಸೇನನನ್ನು ಬಂಧನದಲ್ಲಿಟ್ಟು ರಾಜ್ಯವಾಳುವನು. ಚಿಕ್ಕಪ್ಪನ ಮಗಳು ತಂಗಿಯಾದ ದೇವಕಿಯನ್ನು ವಸುದೇವನಿಗೆ ಮದುವೆಮಾಡಿಸುವನು. (೪) ಆಕೆಯ ಗರ್ಭದಲ್ಲಿ ಹುಟ್ಟುವವನಿಂದ ತನಗೆ ಮರಣವೆಂಬುದನ್ನು ತಿಳಿದು ಅವಳ ಆರು ಮಕ್ಕಳನ್ನು ಕಂಸನು ಕೊಲ್ಲಿಸುವನು. ವಸುದೇವನು ಏಳನೆಯ ಮಗುವಾದ ಶ್ರೀಕೃಷ್ಣನನ್ನು ನಂದಗೋಕುಲಕ್ಕೆ ಕೊಂಡೊಯ್ದು ಬದುಕಿಸಿಕೊಳ್ಳುವನು. (೫) ಪೂರ್ವಜನ್ಮದಲ್ಲಿ ಸಿದ್ಧವಾಗಿದ್ದ ವಿದ್ಯೆಗಳ ಬಲದಿಂದ ನಂದನ ಮನೆಯಲ್ಲಿ ಬೆಳೆಯುತ್ತಿದ್ದ ಶ್ರೀಕೃಷ್ಣನನ್ನು ಕಂಸನು ಕೊಲ್ಲಲು ಯತ್ನಿಸಿ ಸಫಲನಾಗದೆ, ಕೊನೆಗೆ ಮಲ್ಲ

ಯುದ್ಧವನ್ನೇರ್ಪಡಿಸಿ ಅದರಲ್ಲಿ ತಾನೇ ಶ್ರೀಕೃಷ್ಣನಿಂದ ಕೊಲ್ಲಲ್ಪಡುವನು. (೬) ಜರಾಸಂಧನ ಉಪದ್ರವವನ್ನು ತಾಳಲಾರದೆ ಶ್ರೀಕೃಷ್ಣನು ಮಧುರೆಯನ್ನು ಬಿಟ್ಟು ಸಮುದ್ರದ ನಡುವೆ ದ್ವಾರವತಿಯಲ್ಲಿ ನೇಮಿನಾಥನೊಡನೆ ಸುಖದಿಂದಿರುವನು. (೭) ವರ್ತಕನ ಮುಖಾಂತರ ಕೃಷ್ಣನ ವಸತಿ ಚಕ್ರಿಗೆ ತಿಳಿಯುವುದು. (೮) ಕುರುಕ್ಷೇತ್ರದಲ್ಲಿ ಜರಾಸಂಧ ಕೃಷ್ಣರೊಳಗೆ ಯುದ್ಧ : ಮೊದಲೇ ಪರಸ್ಪರ ವೈರಿಗಳಾಗಿದ್ದ ಕೌರವ ಪಾಂಡವರು ರಂಗಪ್ರವೇಶಮಾಡುವರು ; ಕೌರವರು ಜರಾಸಂಧನ ಪಕ್ಷವನ್ನೂ ಪಾಂಡವರು ಕೃಷ್ಣನ ಪಕ್ಷವನ್ನೂ ಸೇರುವರು. ಯುದ್ಧದಲ್ಲಿ ಕೌರವಜರಾಸಂಧಾದಿಗಳು ಮಡಿಯುವರು. ಶ್ರೀಕೃಷ್ಣಪಾಂಡವರು ವಿಜಯಿಗಳಾಗಿ ಅವರವರ ರಾಜ್ಯಗಳನ್ನು ಆಳುವರು. ಶ್ರೀಕೃಷ್ಣನು ದುರ್ಮರಣದಿಂದ ಸತ್ತು ನರಕದಲ್ಲಿ ಬೀಳುವನು. ಬಲದೇವಪಾಂಡವರು ಜಿನದೀಕ್ಷೆಯನ್ನು ಪಡೆದು ಸ್ವರ್ಗವನ್ನು ಸೇರುವರು.[1]

ನೇಮಿನಾಥನ ಚರಿತೆಯು ಎಲ್ಲ ಜೈನತೀರ್ಥಂಕರ ಪುರಾಣಗಳಂತೆ ಗರ್ಭಾವತರಣ, ಜಿನಶಿಶುವಿನ ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲ ಜ್ಞಾನೋತ್ಪತ್ತಿ, ಸಮವಸರಣ ಮತ್ತು ನಿರ್ವಾಣಕಲ್ಯಾಣ ಎಂಬ ಕ್ರಮದಲ್ಲಿ ಭಕ್ತಿಪೂರ್ವಕವಾಗಿ ವರ್ಣಿತವಾಗಿದೆ.

ಕರ್ಣಪಾರ್ಯನ ಲಲಿತ ರಚನೆಗೆ ಉದಾಹರಣೆಗಳು :

ಜರಾಸಂಧನ ಮಹಾಸೇನೆ ಕುರುಜಾಂಗಳ ವಿಷಯಕ್ಕೆ ಬಂದುದು, ಅದನ್ನು ಚರರ ಮೂಲಕ ತಿಳಿದುಕೊಂಡು ಕೌರವನೃಪನು 'ಒಸೆದು' ತನ್ನ ಬೇಳೆಯನ್ನು ಬೇಯಿಸಿಕೊಳ್ಳುವುದಕ್ಕಾಗಿ ಮಾಡಿದ ಹಂಚಿಕೆ.

ವ|| ಅಂತೆನಿಸೆ ನಾಡುಂ, ಕಾಡುಂ, ನೆಲನುಂ, ಪೊಲನುಂ, ಕಿಡೆನಡೆದು—

ಬರೆ ಕುರುಜಾಂಗಳ ವಿಷಯಮ
ನರವಿಂದಪರಾಗಪುಂಜರಂಜಿತಶರವಿ ।

---

[1] ನೇಮಿನಾಥಪುರಾಣ. ಮದರಾಸು ವಿಶ್ವವಿದ್ಯಾನಿಲಯ ಪು. li-lxii.

ಸ್ತುರ ಭರಿತ ಸರೋವರ ಪು
ಷ್ಕರಣೀಹ್ರದನದ ತಟಾಕ ನಿಕರವಮಾಗಳ್ ॥

ಕಂಡು ಪಡೆ ನಲಿದು ಬಿಡೆ ಭೂ
ಮಂಡಳಪತಿಯೆಂದು ಒಂದ ಬರವಂ ಚರರಿಂ ।
ಚಂಡಭುಜನಱಿದು ಕೌರವ
ಮಂಡನನಾ ಮಂಡಳಾಧಿಪತಿ ಕರವೊಸೆದಂ ॥

ಪಗೆವರ್ ಪಾಂಡುನೃಪಾಳಪುತ್ರರೆನಗಂ ದಾಯಾದ್ಯರುಂ ಕೂಡಿದರ್
ನೆಗಟ್ದಾ ಯಾದವರೊಳ್ ಸಮಾದರದೊಳಿಂತೀ ಚಕ್ರಿಯುಂ ಕೇಶವಾ ।
ದಿಗಳೊಳ್ ನೆಟ್ಟನೆ ಕೋಪದಿಂ ತಳರ್ದಪಂ ಸಯ್ಪಾದುದೀ ಕಾರ್ಯಮೇಂ
ಬಗೆಯಲ್ "ಬೇಡಿದ ಕಾಡೊಳಾಯ್ತು ಮಱಿ"ಯೆಂಬಾ ಕೌರವಾಧೀಶ್ವರು॥

ನೆಱೆದಕ್ಷೌಹಿಣಿ ಪನ್ನೊಂ
ದೞಿಕೆಯು ತುಕ್ಕತಿರಥರ್ ಮಹಾರಥರೆಲ್ಲಂ ।
ತಱಿಸಂದೊಡವರೆ ಕೌರವ
ನಿಱಿವೆಸನುಱುವಗೆಯೆನಿತ್ತು ಮಿರದೆಟ್ಟಿಂದಂ ॥

ಅಂತು ಬಂದು ಜರಾಸಂಧನಂ ಕಂಡು ಪರಿವೃಢನಿಂತೆಂದಂ

ದೇವರ್ ಬಿಜಯಂಗೆಯ್ಪಂ
ತೇವಿರಿಯಂ ಹರಿ ಭರಂಗೆಯಲ್ಕಕ್ಕುಮೆ ಪೇೞ್ ।
ಭೂವಲ್ಲಭ ಬೆಸಸಿನ್ನಮ
ದೇವಸನಾಂ ಸಾಲ್ವೆನವರ್ಗೆ ನಿಲ್ಲವನಿಪತೀ ॥ (XI—೭೧—೭೪)

## ೧೦. ಹರಿಹರ (೧೧೬೫)

ಬಸವೇಶ್ವರನು ನವಚೈತನ್ಯವನ್ನು ಕನ್ನಡ ಜನತೆಯಲ್ಲಿ ತುಂಬಿದ ಯುಗ ವದು. ಕನ್ನಡ ಸಾಹಿತ್ಯವಾಹಿನಿಯು ಪೌಢಿಮೆಯ ಬೆಟ್ಟಗಳ ಝರಿಯಿಂದ ಭೋರ್ಗರೆಯುವುದನ್ನುಳಿದು ಸುಂದರದೇಸಿಯ ಬಯಲು ಪ್ರದೇಶದಲ್ಲಿ ಪ್ರಶಾಂತ ವಾಗಿ ಪ್ರವಹಿಸುವುದಕ್ಕೆ ಮೊದಲು ಮಾಡಿತು. ಪಂಡಿತರಿಗೆ ಮಾತ್ರ ಲಭಿಸುತ್ತಿದ್ದ ಸಾಹಿತ್ಯಗಂಗಾಪಾನ ಜನಸಾಮಾನ್ಯರಿಗೂ ಒದಗುವುದು ಸಾಧ್ಯ ವಾಯಿತು. ಈ ಪರಿಸ್ಥಿತಿಯಲ್ಲಿ ಹರಿಹರನು ರಂಗಪ್ರವೇಶ ಮಾಡುತ್ತಾನೆ.

ಹಾಡುಗಬ್ಬಗಳಿಗೆ ಒಪ್ಪುವ ಜನಪ್ರಿಯವಾದ ರಗಳೆಗಳನ್ನು ಬಳಸಿಕೊಂಡು ಅನೇಕ ಮಹತ್ವದ ರಸಘಟ್ಟಿಗಳನ್ನು ರಚಿಸಿ, 'ರಗಳೆಯ' ಕವಿ ಎಂಬುದಾಗಿ ಇವನು ಹೊಗಳಿಸಿಕೊಂಡನು. ಆದರೂ ಹರಿಹರನು ಪಾಂಡಿತ್ಯ ಪ್ರತಿಭೆಗಳಲ್ಲಿ ಇತರ ಪ್ರಸಿದ್ಧ ಚಂಪೂಕವಿಗಳಿಗೆ ಸರಿಮಿಗಿಲೆನಿಸುವನೆಂಬುದು ಆತನ ಚಂಪೂ ರೂಪದಲ್ಲಿ ರಚಿತವಾದ ಗಿರಿಜಾಕಲ್ಯಾಣದಿಂದ ತಿಳಿದುಬರುತ್ತದೆ.

ಹರಿಹರನ ಕವಿತಾಶಕ್ತಿ, ಘನತೆ, ದೈವಭಕ್ತಿ, ಶೀಲ, ಇತ್ಯಾದಿ ವ್ಯಕ್ತಿತ್ವವನ್ನು ಕುರಿತು ಆಗಲೇ ವಿಮರ್ಶಕರು ವಿಧವಿಧವಾಗಿ ಕೊಂಡು ಕೊನಾಡಿದ್ದಾರೆ. ಆದರೆ ಆತನು ಸ್ವಾತಂತ್ರ್ಯಮಾರ್ಗವನ್ನು ಹಿಡಿದ ಕ್ರಾಂತಿಕಾರನೂ ಆಗಿದ್ದನೆಂಬುದನ್ನು ಇಲ್ಲಿ ಸೂಚಿಸಿದರೆ ತಪ್ಪಾಗದು. ವ್ಯಾಕರಣಕ್ಕಾಗಿ ಭಾಷೆಯಲ್ಲ, ಭಾಷೆಗಾಗಿ ವ್ಯಾಕರಣ ಎಂಬುದು ಅವನ ಮತವಿದ್ದಂತೆ ತೋರುವುದು. ಭಾಷೆ ಜನತೆಯ ಕೈಯಲ್ಲಿ ಬೆಳೆಯುತ್ತಾ ಹೋಗುವಾಗ ವ್ಯಾಕರಣದ ಕಟ್ಟನ್ನು ಬಿಗಿದು ಅದರ ಸ್ವಾತಂತ್ರ್ಯ ಬೆಳವಣಿಗೆಗಳಿಗೆ ತಡೆ ಕಟ್ಟುವುದು ಆತನಿಗೆ ಹಿಡಿಸಲಿಲ್ಲವೆಂದು ತೋರುತ್ತದೆ. ಆದುದರಿಂದಲೇ ಅವನು ಪ್ರಾಸ ವಿಷಯದಲ್ಲಿ ಱಟಿಕುಳಕ್ಷಳಗಳ ವಿಚಾರವಾಗಿ ತಲೆ ಬಿಸಿಮಾಡಿಕೊಳ್ಳಬೇಡಿ, ಜನರ ಮಾತಿನಲ್ಲಿ ಆ ವ್ಯತ್ಯಾಸ ಮಾಯೆಯಾಗಿದೆ, ಇನ್ನು ಆ ಮೃತದೇಹವನ್ನು ತರಬೇಡಿ ಎಂದಂತಿದೆ :

ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗಿದು ಮೊಱಱು ತೆಱನಂ ।
ಕೂಡೆ ಕವಿತತಿ ವಿಚಾರಸ
ಬೇಡದಱಿಂ ಱಟಿಕುಳಕ್ಷಳಂಗಳನಿದಱಿಕೊಳ್ ॥ (I–೩೨)

ಹರಿಹರನು ಹೇಳಿದುದು ಅಂದಿಗೆ ಸೊಗಸಾಗಿತ್ತು ; ಏಕೆಂದರೆ ಜನ ಹಾಗೆ ಆಡುತ್ತಿದ್ದರು ; ಹಾಗೆಂದು ಅಂದಿಗೆ ಸೊಗಸಾಗಿದ್ದ ಪ್ರಚಲಿತವಾಗಿದ್ದ 'ಱ'ದ ವಿಷಯವಾಗಿ ಏನನ್ನೂ ಹೇಳಲಿಲ್ಲ ; ಅದನ್ನು ಬಳಸಿಕೊಂಡನು ಕೇಶಿರಾಜನು (೧೨೬೦) ಈ ಕುರಿತು ಬೊಬ್ಬಿಟ್ಟರೂ ಮುಂದೆ ಱಟಿಕುಳಕ್ಷಳಗಳು ಮಾತ್ರ ಏಕ ರೂಪತೆಯನ್ನು ಹೊಂದಿದುದಲ್ಲದೆ ರ–ಱಗಳೂ ಏಕರೂಪತೆಯನ್ನು ಹೊಂದಿರು ತ್ತವೆ. ಕಾಲಾಯ ತಸ್ಮೈ ನಮಃ.

ಹರಿಹರನು ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಶಿವಗಣ ರಗಳೆಗಳು ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಇವನ ಹೆಸರಿನಲ್ಲಿ ಹರಿದೇವ, ಹರೀಶ್ವರ, ಹರಿಹರ, ಹರಿಗ ಎಂಬ ಒಂದೇ ಹೆಸರಿನ ಬೇರೆ ಬೇರೆ ರೂಪಗಳನ್ನು ಕಾಣಬಹುದು. ಈತನು ವೀರಶೈವ ಕವಿ. ಹಂಪೆಯ ವಿರೂಪಾಕ್ಷನ ಪರಮಭಕ್ತ. ಹರಿಹರನಿಂದ ಮತ್ತೆ ಬಂದ ವೀರಶೈವ ಕವಿಗಳು ಪ್ರಾಯಿಕವಾಗಿ ಹರಿಹರನನ್ನು ಸ್ತುತಿಸದಿಲ್ಲ. ಷಟ್ಪದಿಕಾವ್ಯವಿಧಾತ ರಾಘವಾಂಕನ (೧೨೫) ಸೋದರಮಾವನಿವನು.

ಹರಿಹರನ ಇತರ ಕೃತಿಗಳ ಪರಿಚಯುವನ್ನು ಬೇರೆ ಕಡೆ ಮಾಡಬೇಕಾಗಿರುವುದರಿಂದ, ಇಲ್ಲಿ ಚಂಪೂರೂಪದಲ್ಲಿರುವ ಗಿರಿಜಾಕಲ್ಯಾಣವನ್ನು ಮಾತ್ರ ಒಂದಿಷ್ಟು ಪರಿಶೀಲಿಸೋಣ.

## ಗಿರಿಜಾಕಲ್ಯಾಣ

ಇದರಲ್ಲಿ ಗಿರಿಜೆಯು ಜನನದಿಂದ ಆಕೆಯ ಕಲ್ಯಾಣದವರೆಗಿನ ಕಥೆ ಸುಂದರವಾಗಿ ನಿರೂಪಣವಾಗಿದೆ. ಇದನ್ನು ರಚಿಸುವಲ್ಲಿ ಕವಿಯು ಕಾಲಿದಾಸ ಕುಮಾರ ಸಂಭವದ ಪ್ರಭಾವಕ್ಕೊಳಗಾಗಿರುವನೆಂಬವರುಂಟು. ಯಾವ ಪ್ರಭಾವವೇ ಇರಲಿ, ಕವಿಯು, ತನ್ನದೇ ಆದ ಪ್ರತಿಭೆ ಪಾಂಡಿತ್ಯ ಕವಿತಾ ಶಕ್ತಿಗಳ ವಿಭವದಿಂದ 'ಕಾವ್ಯಂ ತಾನಿದು ನವರಸ ಸೇವ್ಯಂ' ಎಂಬಂತೆ ಉತ್ತಮವಾದ ಕೃತಿ ರತ್ನವನ್ನು ಸೃಜಿಸಿದ್ದಾನೆ. ಯಾವ ಮೂಲದಲ್ಲಿಯೂ ಅನುವಾದದಲ್ಲಿಯೂ ಹರಿಹರನು ನಿರ್ಮಾಣಮಾಡಿದ ಪಾರ್ವತಿಯ ಪಾತ್ರವನ್ನು—ನಿರ್ಮಲಭಕ್ತಿಶೀಲಗಳ ಪವಿತ್ರ ಪ್ರತೀಕವನ್ನು ಕಾಣುವುದು ದುಸ್ಸಾಧ್ಯವೆಂದರೆ ತಪ್ಪಾಗಲಾರದು. ಇತರ ಪಾತ್ರರಚನೆಗಳಲ್ಲಿಯೂ ಉತ್ತಮ ಕವಿ ಕೌಶಲ್ಯವನ್ನು ಕಾಣಬಹುದು. ಇನ್ನು ವರ್ಣನಾಸೌಂದರ್ಯವೂ ಹಿತಮಿತವಾಗಿ ರಸಪುಷ್ಟಿಕೊಡುವುದು. ಹರಿಹರನಿಗೆ ಶಬ್ದಗಳು ತಾವಾಗಿಯೇ ಬಂದು ಮಣಿಯುತ್ತವೆ ಎಂಬುದನ್ನು ಆತನ ಕಥನ ಧಾಟಿಯಿಂದ ತಿಳಿದುಕೊಳ್ಳಬಹುದು ; ಎಂತಹ ಓಟ ! (ರಗಳೆಗಳಲ್ಲಿ ಈ ಗುಣ ಅಲ್ಲಲ್ಲಿ ಎದ್ದುಕಾಣುವುದು.) ಇವೆಲ್ಲವೂ ಹರಿಹರನ ಶೈಲಿಗೆ ಸಹಜತೆ

ಯನ್ನೂ ಲಾಲಿತ್ಯವನ್ನೂ ಮಾಧುರ್ಯಸಹಿತವಾದ ಗಾಂಭೀರ್ಯವನ್ನೂ ತಂದಿವೆ :

ತನ್ನ ಕೃತಿ ಏಕೆ ಅಖಿಳಸೇವ್ಯವೆನ್ನುವನು—

ಸುರತರುವಿನಂತೆ ಸುಜನರ
ಸಿರಿಯಂತೆ ಸರೋಜಜದಂತೆ ಸುಧೆಯಂತೆ ಸುಧಾ ।
ಕರಕಿರಣದಂತೆ ಹಂಪೆಯ
ಹರಿಹರ ದೇವನ ಕಾವ್ಯಮಖಿಳಸೇವ್ಯಂ ನವ್ಯಂ ॥ (I-೧೬)

ಸತ್ಕೃತಿಯ ಲಕ್ಷಣವನ್ನು ಎಷ್ಟು ರಸಮಯವಾಗಿ ನಿರ್ವಹಿಸಿದ್ದಾನೆ—

ಕೇಳಲೊಡಂ ಕಿವಿಸವಿಯೊಳ
ಗಾಳದೊಡಂ ತನ್ಮನಂ ಮುಳುಂಗದೊಡಂ ಸೌ ।
ಖ್ಯಾವಲಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹಮಿರದೊಡದು ಸತ್ಕೃತಿಯೇ ॥ (I-೨೦)

ಮಹಾಕಾವ್ಯದ ೧೮ ವರ್ಣನೆಗಳನ್ನು ಯಥೋಚಿತವಾಗಿ ಮಾಡಿದ್ದಾನೆ. ೪ನೆಯ ಆಶ್ವಾಸದಲ್ಲಿ ಪಾರ್ವತೀಯೌವನ ವರ್ಣನದ ಅನಂತರದಲ್ಲಿ ಬಂದಿರುವ ರಾತ್ರಿ ವಿಹಾರ ವರ್ಣನವನ್ನು ಮಾತ್ರ ಲಕ್ಷಣಪೂರ್ತಿಗಾಗಿ ತಂದಂತೆ ತೋರುತ್ತದೆ. ಆದರೂ ಅವು ದೀರ್ಘವಾಗಿ ಹಳಸಿಲ್ಲ; ರಸಪುಷ್ಟಿ ಕೊಡುವಂಥವು. ಕಾವ್ಯದಲ್ಲಿ ಹೈಮಾಚಲವರ್ಣನ, ಗಿರಿರಾಜದೇಶಪುರಸ್ಥಾನ ವರ್ಣನ, ಹೈಮವತೀಶೈಶವವರ್ಣನ, ಪಾರ್ವತೀಯೌವನ, ವಿರೂಪಾಕ್ಷ ದರ್ಶನ, ಪುಷ್ಪಾಪಚಯ, ಪೂಜಾವರ್ಣನ, ತಾರಕಾಸುರಯುದ್ಧವರ್ಣನ, ವಸಂತೋದಯ, ಮದನ ಪ್ರಯಾಣಪ್ರಾರಂಭವರ್ಣನ, ಕಾಮದಹನ ವರ್ಣನ, ಪಾರ್ವತೀ ತಪೋವರ್ಣನ, ವಿರೂಪಾಕ್ಷ ಪ್ರತ್ಯಕ್ಷಕರವರ್ಣನ, ಪಾರ್ವತೀ ಪರಮೇಶ್ವರ ವಿವಾಹವರ್ಣನ ಎಂಬ ಹತ್ತು ಆಶ್ವಾಸಗಳಿವೆ. ಗ್ರಂಥದೊಳಗಣ ಕೆಲವು ಉತ್ತಮ ಸನ್ನಿವೇಶಗಳು :

“ಬಾಲಲೀಲೆ ಶಿವಲೀಲೆಯಾಗಿ ಕೆಲನಱಿಯದೆ ಬಲನಱಿಯದೆ, ಪಸಿವಱಿಯದೆ ತೃಷೆಯಱಿಯದೆ, ದೆಸೆಯಱಿಯದೆ, ಇರುಳ್ಪಗಲಱಿಯದೆ

ಪರಿಜನಮಂ ಪರೀಕ್ಷಿಸದೆ ಶಿವನಂ ಮರುಳ್ಗೊಂಡು ಭವಾನಿ" ಇದ್ದ ಇರವು ಸಹಚರಿಯರನ್ನು ಕೌತುಕಗೊಳಿಸಿತು. (III–೯೮ರ ಮೇಲಿನ ಗದ್ಯ)

ವಿರೂಪಾಕ್ಷನನ್ನು ನೋಡುವಾಗ ಪಾರ್ವತಿಯ ದೃಷ್ಟಿಗಳು—

ಪೊಸಜಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ ಕಪೋಲಭಾಗದೊಳ್
ಪಸರಿಸಿ ಲೋಚನಂಗಳೊಳಮರ್ಚಿ ತದಾಸ್ಯದೊಳೊಂದಿ ಕಂಠದೊಳ್ ।
ಮಿಸುಗಿ ಭುಜಾಗ್ರದೊಳ್ ತೊಳಗಿ ವಕ್ಷದೊಳಾಳ್ದು ಕರುಗಳೊಳ್ ವಿರಾ
ಜಿಸಿ ಪದದಲ್ಲಿ ಬೀಳ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ ॥ (V–೮೨)

"ವಿರೂಪಾಕ್ಷಾಕ್ಷಿ' ಕಂದರ್ಪನನ್ನು ತಿಂದು ತೇಗಿದ ಪ್ರಕಾರ :

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದುದು ನಾಲ್ದೆಸೆದೋಱುದತ್ತು ಬಾ
ನ್ಗೊಗೆದುದು ನಿಂದು ಪೊಂಬೆಳಗುಮಂ ಪರಪುತ್ತದು ಧಂ ಧಗಿಲ್‌ಧಗಿ ।
ಲ್ಧಗಿಲೆನುತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ
ತ್ತಗಿಯದೆ ನಿಂದ ಪೂಗಣೆಯನುಂ ಪಣೆಗಣ್ಣುರಿ ಹಂಪೆಯಾಳ್ದನಾ ॥ (VIII–೫೬)

ರತಿದೇವಿಯು ದುಃಖಿಸಿದುದನ್ನು ಹರೀಶ್ವರನು ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ.

ಎತ್ತಣ ಹರನೆತ್ತಣ ತಪ
ಮೆತ್ತಣ ತಾರಕನ ಬಾಧೆಯೆತ್ತಣ ಬಿಸುಗ ।
ಣ್ಣೆತ್ತಣುರಿಯೆತ್ತಣಿರ
ವೆತ್ತಣ ಕೋಟಲೆಯನೆನಗೆ ಮಾಡಿದೆ ಮದನಾ ॥ (VI–೫೬)

x x x

ಬೆಳಗಾಯ್ತುಪ್ಪವಡಿಸು
ತೊಳತೊಳಗುವ ಮಣಿಮುಕುರಮಂ ನಿರೀಕ್ಷಿಸು ಹಂಸಾ ।
ವಳಿಯುಂ ನಡೆಪಾಡಿಸು ಕೋ
ಕಿಳನಾದಮನಾಲಿಸುಸಿರದಿರ್ಪರೆ ಮದನಾ ॥ (VIII-೭೦)

ಪಾರ್ವತೀತಪೋವರ್ಣನವು ಈ ಕೃತಿ ಸೌಧದ ಧ್ವಜಪತಾಕೆಯಂತಿದೆ. ನಿರ್ಮಲಭಕ್ತಿಯ ಬೀಡದು. ಹರಿಹರನ ಹೃದಯವನ್ನು ಇಲ್ಲಿ ಸಂಪೂರ್ಣವಾಗಿ

ತಿಳಿಯಬಹುದು. ವಟುವೇಷದಲ್ಲಿ ಶಿವನು ಬಂದು ಗಿರಿಜೆಯ ಮುಂದೆ ಶಿವನಿಂದೆ ಮಾಡುವುದು, ಗಿರಿಜೆ ಮುನಿದು ಕನಲ್ದು, ಆ ವಿಪ್ರನನ್ನು ಭಸಿತದಿಂದೆ ಇಡುವುದು ಬಹಳ ಹೃದಯಂಗಮವಾಗಿದೆ. "ಶಿವನಾದೊಡದೇಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್" ಎಂಬ ನಿತ್ಯಸತ್ಯವನ್ನು, ಅನುಭವದ ಸಾರವನ್ನು ಹರಿಹರ ಹೇಳಿದ್ದಾನೆ.

ಕಪಟವಟು ಮಾಡುವ ಶಿವನಿಂದೆ :

ನೀನಿನಿಯಳ್ ವಿಷಮಾತಂ
ನೀನತಿಮೃದು ಕಠಿನಗುಣಗಣಾಶ್ರಯನಾತಂ ।
ನೀನಬಲೆಯುಗ್ರನಾತಂ
ನೀನುರುತರ ಭೀರು ಸರ್ಪಭೂಷಣನಾತಂ ॥

ಪುಲಿದೊವಲುಡುಗೆಯ ಹಾವಿನ
ನೆಲೆದೊಡಿಗೆಯ ನೊಸಲ ಕಣ್ಣಖಟ್ವಾಂಗದ ಪಂ ।
ದಲೆಗಳ ಮಾಲೆಯ ಶೂಲದ
ಕಲಿಗಂಜದೆ ಮನವನೆಂತು ಮಾಡಿದೆ ಮುಗುದೇ ॥

(IX–೧೧೩–೧೧೪)

ಆಗ ಭವಾನಿ ಮುನಿದು, ಕನಲ್ದು—

ಘೋರ ತಪದಲ್ಲಿ ಕೋಪಿಸ
ಬಾರದು ತಾಂ ತಪದ ಕೇಡು ಪತಿನಿಂದೆಯುಮಂ ।
ಸೈರಿಸಲೆ ಬಾರದೆನುತೆ ವಿ
ಚಾರಮನುಳಿದಗಜೆ ಮನದ ಮುಳಿಸಿಂದಾಗಳ್ ॥

ಆದ ನಿರೋಧದ ನಿಂದೆಯ
ನಾದರಿಸದೆ ಭಸಿತದಿಂದೆ ವಿಪ್ರನನಿಡೆ ತಾಂ ।
ಪೋದುದು ವಟುವೇಷಂ ಶಿವ
ನಾದೊಡದೇಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್ ॥

(X–೧೧೭–೧೧೮)

ಕೊನೆಯದಾಗಿ ಪ್ರತಿ ಆಶ್ವಾಸಾಂತ್ಯದಲ್ಲಿ ಹರಿಹರ ಪ್ರಾರ್ಥನೆಯಲ್ಲಿ ಹರಿಯುವ ಭಕ್ತಿಸ್ರೋತವನ್ನು ತಿಳಿಯಬಹುದು—

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲ ಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥

## ೧೧. ನೇಮಿಚಂದ್ರ (೧೧೭೦)

ಹಿರಿಯ ಚಂಪೂಮಹಾಕವಿಗಳ ಸಾಲಿಗೆ ಸೇರತಕ್ಕ ಕವಿ ಇವನು. ಹಿಂದೆ ಕರ್ಣಪಾರ್ಯನಿಗೆ ಆಶ್ರಯವನ್ನಿತ್ತ ಸಾಮಂತ ರಟ್ಟರಾಜನಾದ ಲಕ್ಷ್ಮಣದೇವನೇ ನೇಮಿಚಂದ್ರನಿಗೂ ಆಶ್ರಯದಾತನಾಗಿದ್ದನೆಂದು ತಿಳಿದುಬರುತ್ತದೆ. ವೀರ ಬಲ್ಲಾಳನ (೧೧೭೩–೧೨೨೦) ಪ್ರಧಾನನಾದ ಸೆಜ್ಜೆವಳ್ಳ ಪದ್ಮನಾಭನು ಈತನ ನೇಮಿನಾಥಪುರಾಣವನ್ನು ಬರೆಸಿದನೆಂದು ಹೇಳಿಕೊಂಡಿದ್ದಾನೆ. ಆದುದರಿಂದ ಕವಿಯ ಕಾಲ ಸು. ೧೧೭೦ ಇರಬಹುದು. ನೇಮಿಚಂದ್ರನು ಜೈನ ಕವಿ. ಈತನು ಲೀಲಾವತಿಪ್ರಬಂಧ ಮತ್ತು ನೇಮಿನಾಥ ಪುರಾಣವೆಂಬ ಎರಡು ಉತ್ತಮ ಚಂಪೂಕಾವ್ಯಗಳನ್ನು ರಚಿಸಿದ್ದಾನೆ. ಇವನಿಗೆ 'ಕವಿರಾಜ ಕುಂಜರ' 'ಸಾಹಿತ್ಯವಿದ್ಯಾಧರ', 'ಸುಕವಿಕಂಠಾಭರಣ', 'ಭಾರತೀಚಿತ್ತ ಚೋರ', 'ಚತುರ್ಭಾಷಾಕವಿಚಕ್ರವರ್ತಿ', 'ವಾಗ್ವಲ್ಲಕೀವೈಣಿಕ' ಮೊದಲಾದ ಸಾರ್ಥಕ್ಯವುಳ್ಳ ಬಿರುದುಗಳಿರುತ್ತವೆ. ಪೂರ್ವಕವಿಸ್ತವನಾವಸರದಲ್ಲಿ ಈತನು ಯಾವ ಕನ್ನಡ ಕವಿಯ ಹೆಸರನ್ನೂ ಹೇಳದಿರುವುದು ಸೋಜಿಗವಾಗಿದೆ. ಈತನನ್ನಾದರೊ ಜನ್ನ, ಪಾರ್ಶ್ವ, ಮಧುರ, ಮಂಗರಸ ಮೊದಲಾದ ಕನ್ನಡ ಕವಿಗಳು ಕೊಂಡಾಡಿದ್ದಾರೆ. ಮಧುರನು ನೇಮಿಚಂದ್ರಜನ್ನರನ್ನು 'ಕರ್ಣಾಟಕೃತಿಗೆ ಸೀಮಾಪುರುಷರ್' ಎಂಬುದಾಗಿ ಘೋಷಿಸಿದ್ದಾನೆ.

ಸರ್ವರ ಸಮ್ಮತಮೆನಗಿದು
ಗರ್ವದ ಮಾತಲ್ಲ ಶಾಸ್ತ್ರಲೌಕಿಕಲೆಯೊಳ್ ।
ಬೇರ್ವರಿದ ನೇಮಿಜನ್ನಮ
ರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್ ॥

ಇದರಿಂದ ಮೇಲಿನ ಹೊಗಳಿಕೆ ಬೇರುಂಟೆ ?

ಶೃಂಗಾರರಸದೋಕುಳಿಯಾಡುವಲ್ಲಿ ವಾಗ್ವಲ್ಲಕೀವೈಣಿಕ ನೇಮಿಚಂದ್ರನದು ಸಿದ್ಧಹಸ್ತ. ಕವಿತಾಸಾಮರ್ಥ್ಯದಲ್ಲಿ ಸುಂದರ ಸಹಜತೆಯುಂಟು. ಅಸಾಧಾರಣ ವಾದ ಶಬ್ದ ಸಂಪತ್ತಿಯಿಂದ ಮತ್ತು ನಿರರ್ಗಳವೂ ಗಂಭೀರವೂ ಆದ ಶೈಲಿಯಿಂದ ಅವನ ರಚನೆಗಳು ಹೃದಯಂಗಮವಾಗಿವೆ.

## ಲೀಲಾವತಿ

ಈ ಗ್ರಂಥವನ್ನು ಸುಬಂಧುವಿನ ಸಂಸ್ಕೃತ ಗದ್ಯಕಾವ್ಯವಾದ 'ವಾಸವದತ್ತೆ' ಯನ್ನು ಅನುಸರಿಸಿ ಬರೆದಂತೆ ತೋರುತ್ತದೆ. ಕದಂಬರಾಜಧಾನಿಯಾದ ಜಯಂತೀಪುರದ ರಾಜಕುಮಾರ ಕಂದರ್ಪದೇವನು ಕುಸುಮಪುರದ ರಾಜ ಕುಮಾರಿ ಲೀಲಾವತಿಯನ್ನು ಕನಸಿನಲ್ಲಿ ಕಂಡುದು, ಹಾಗೆಯೇ ಅವಳು ಇವನನ್ನು ಕನಸಿನಲ್ಲಿ ಕಂಡುದು, ಅವರೀರ್ವರ ಪರಸ್ಪರ ಅನ್ವೇಷಣೆಗಳು, ವಿವಾಹ—ಈ ಪ್ರಣಯಕತೆಯ ಸುಖಪರಿಸಮಾಪ್ತಿ. ಧಾರ್ಮಿಕ ವಸ್ತುವನ್ನು ತೆಗೆದುಕೊಳ್ಳದೆ ಕಾಲ್ಪನಿಕ ವಸ್ತುವಿನಿಂದ ನಾಗವರ್ಮನು 'ಕಾದಂಬರಿಯು' ಕಾಣಿಕೆಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಂತೆ ನೇಮಿಚಂದ್ರನು ಅಂಥದೇ ಒಂದು ಕಾಣಿಕೆಯಾಗಿ 'ಲೀಲಾವತಿ'ಯನ್ನರ್ಪಿಸಿದ್ದಾನೆ. ಲೀಲಾವತಿಯಲ್ಲಿ ಕಥೆ ಕಿರಿದು. ಕೃತಿಯ ಪ್ರಧಾನರಸವಾದ ಶೃಂಗಾರದ ಉದ್ದೀಪನಕ್ಕಾಗಿ ಮನೋಹರವಾದ ವರ್ಣನೆಗಳು ಗ್ರಂಥದ ಉದ್ದಕ್ಕೂ ಬಂದಿರುತ್ತವೆ. ಕೆಲವು ವೇಳೆ ಇವು ಸ್ವಲ್ಪ ಹೆಚ್ಚಾಯಿತೋ ವಿಸಂಗತವೊ ಎಂಬಂತಿವೆ. 'ಕಥೆಯ ತೆಳು ಹಂದರವನ್ನು ಬಾಗಿಸುವಷ್ಟು ಜೋಲುಬಿದ್ದ ವರ್ಣನೆಗಳೇ ಮುಖ್ಯ ವಸ್ತು ವಾಗಿವೆ' ಎನ್ನುವರುಂಟು.[1] ಔತಣದಡಿಗೆಯಲ್ಲಿ ಅಷ್ಟು ಬೇಕಾಗಿರಲಿಲ್ಲ, ಇಷ್ಟೇ ಸಾಕಾಗಿತ್ತೆಂಬುದಾಗಿ ಭೋಕ್ತೃಗಳು ಹೇಳುವಂತೆ; ಆದರೆ ರಸದೂಟ ಕೊಡು ವವನಿಗೆ ಹಾಗೆ ಕಾಣದಿರಬಹುದು. ಕಂದರ್ಪದೇವ ಲೀಲಾವತಿಯರ ಪಾತ್ರ ಚಿತ್ರಣಗಳು ಸುಂದರವಾಗಿವೆ.

### ಲೀಲಾವತಿಯಿಂದ ಕೆಲವು ಉತ್ತಮ ಸಾಲುಗಳು

ಎಂತಹ ಮುದ್ದಾದ ಹುಲ್ಲೆಯ ಚಿತ್ರ :

---

[1] ಕ. ಸಾ. ಚ. ಪು. ೧೮೯.

ನಿಮಿರ್ದ ಕೊರಲ್ ಮರಲ್ದು ಮಡಿದೂಱಿದ ಮುಂದಣ ಕಾಲ್ಗಳಿಟ್ಟ ಪ
ಶ್ಚಿಮತನುಣೋಲ್ದುದರಂ ಪೆಱಗನಪ್ಪಿದ ಕೊಂಬುಗಳಾಲಿಸುತ್ತೆ ವಿ ।
ಶ್ರಮಿಸುವ ಕರ್ಣಮುಂ ಮುಗಳ್ವ ಕಣ್ಮಿಡುಕೋಡುವ ಕಂಠನಾಳಮಂ
ದಮರ್ದಿರೆ ನೀರನುರಲೆಯಂ ಬರಲೊಲ್ಲದೆ ನೋಡಿದಂ ನೃಪಂ ॥

ಕಾಡಿನೊಳಗಣ ಕತ್ತಲೆ : ಸೂರ್ಯಚಂದ್ರರನ್ನೂ ಸೋಲಿಸುವುದು—

ಅಲ್ಲಿ ಮರವಾಯ್ದು ಕೊರ್ವಿದ
ಪುಲ್ಲಿಂ ಪೆರ್ಮರದನನಡರ್ದು ಪರ್ಬಿದ ನಾನಾ ।
ಬಳ್ಳಿಗಳಿಂ ಕಟ್ಟಲೆ ತನ
ಗಲ್ಲದೆ ಮಾರ್ಮಲೆವುದಿಂದುಗಂ ದಿನಪಂಗಂ । (VI–೨೫)

ಗೊಲ್ಲತಿಯರು "ಕರುಬಿಡು, ತೊಳೆ, ಕಂದಲನೊರಸು...." ಇತ್ಯಾದಿಯಾಗಿ ಹೇಳುವ ಮಾತು ಎಷ್ಟು ಸಹಜ.

ಕಱುವಂ ಬಿಡು ಬಿಡು ತೊಳೆ ನೀ
ರೆಱೆ ಕಂದಲನೊರಸಿ ತೊಳೆ ತಗುಳ್ದೊದೆವಾವಂ ।
ತುಱಿಸು ತಟಿಯಿಕ್ಕು ತಡೆಯದೆ
ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ ॥
(V–೧೨೧)

ನಾಟ್ಯಭಂಗಿಯ ಒಂದು ಚಿತ್ರ ಕಣ್ಣಿಗೆ ಕಟ್ಟಿದಂತಿದೆ—

ಚರಣಾಗ್ರಂ ಜಾನುವಂ ಜಕ್ಕುಲಿಸಡರೆ ನಿತಂಬಕ್ಕೆ ಪಕ್ಕಾಗಿ ಮಧ್ಯಂ
ಮುರಿವನ್ನಂ ದಕ್ಷಿಣಕ್ಕವ್ವಳಿಸಿದ ಕುಚದೊಳ್ ಕೈದಳಿರ್ಕೂಡೆ ವಾಮಂ ।
ಕರಕಂಜಂ ಕಾಂತಿಯಂ ತತ್ತಳರ್ದು ಮಿಳಿರೆ ವಕ್ತ್ರಾಂಬುಜಂ ಕೊಂಕಿ ಚೆಲ್ವಾ
ಗಿರೆ ಕಾಮೋತ್ಪತ್ತಿಯಂ ಕಾಮಿಸಿ ತರುಣಿ ತಪಂಗೆಯ್ವವೋಲ್ ಕಣ್ಗೆವಂದಳ್ ॥
(IV–೧೪೫)

ರಾತ್ರಿಯನ್ನು ಎಷ್ಟು ಸುಂದರವಾಗಿ ರೂಪಿಸಿರುವನು—

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಱದೆ ರಾತ್ರಿನರ್ತಕಿ ಪುಗುತಂ ।

ಸೂಸಿದ ಪುಷ್ಪಾಂಜಲಿಯೆನೆ
ಭಾಸಿಸಿದುವು ಗಗನರಂಗದೊಳ್ ತಾರಕಿಗಳ್ ॥ (X–೨೪)

## ಕುಕವಿಗಳನ್ನು ನಿಂದಿಸುವ ರೀತಿ

ಆನುಂ ಬುಧರೊಡನೆ ನೃಪಾ
ಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ ।
ಬಾನುದ್ದಮಪ್ಪುದೇಕು
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ ॥ (I–೨೬)

ತಲೆಯಂ ತೂಗುವನೊರ್ವನುರ್ಬಿ ಕೆಲದೊಳ್ ಕಾಲ್ಕಬ್ಬಮಂ ಕಟ್ಟಿ ಕೋ
ಟಲೆಗೊಂಡೂಟ್ಟಿವನೊರ್ವನೊಲ್ದವರ ಚಾತುರ್ಯಕ್ಕೆ ಕೈವಾರಮಂ ।
ಪೊಲೆಗಟ್ಟೀವವನೊರ್ವನಿಂತಕಟ ಯಕ್ಷೋ ಯಾದೃಶಸ್ತಾದೃಶೋ
ಬಲಿಯೆಂಬುಕ್ತಿಗೆ ದುರ್ವಿದಗ್ಧರೆ ವಲಂ ನೋಂತರ್ ಪೆಱರ್ ನೋಂತರೇ ॥
(I–೪೦)

## ಸುಕವೀಂದ್ರರ ಬಲ್ಮೆಯನ್ನು ವರ್ಣಿಸಿದುದು ಹೃದಯಂಗಮವಾಗಿದೆ

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನು ಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನಿಕ್ಕಿ ಗಂಟಲಂ ।
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳವೋ ಕವೀಂದ್ರರಾ ॥ (I–೧೧)

ಕಿವಿಯಿಂದೀಂಟಿಸುವರ್ ಸಮಸ್ತರಸಮಂ ತೋರ್ಪರ್ ಸರೋಜಾತಮಂ
ಯುವತೀಪ್ರೌಢ ಲತಾಗ್ರದೊಳ್ ಕುಮುದಮೊಂದೊಂದಲ್ಲಿಯಾ ಬಾಲಪ ।
ಲ್ಲವಮಂ ಪುಟ್ಟಿಪರಾರ್ಯಮೋಹನಮುಮಂ ಮಾಳ್ಪೀ ಚಮತ್ಕಾರಮಂ
ಕವಿಗಳ್ ಬಲ್ಲವೊಲನ್ಯರೆತ್ತಱಿವರೆಂತಾ ಬ್ರಹ್ಮನುಂ ಬಲ್ಲನೇ ॥ (I ೧೨)

## ನೇಮಿನಾಥಪುರಾಣ

ಇದು ನೇಮಿಚಂದ್ರನ ಎರಡನೆಯ ಮತ್ತು ಹೆಚ್ಚು ಪಕ್ವತೆ ಪಡೆದ ಚಂಪೂ ಕಾವ್ಯ. ಇದರಲ್ಲಿ ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತವು

ವರ್ಣಿತವಾಗಿದೆ. ಇದೇ ಪುರಾಣವಸ್ತುವನ್ನು ಚಂಪೂರೂಪವಾಗಿ ಕರ್ಣ ಪಾರ್ಯನೂ ಅವನಿಗಿಂತ ಮೊದಲು ಗದ್ಯರೂಪದಲ್ಲಿ ಚಾವುಂಡರಾಯನೂ ಬರೆದಿರುವರು. ಇವುಗಳನ್ನೂ ಸಂಸ್ಕೃತ ಉತ್ತರಪುರಾಣವನ್ನೂ ನೇಮಿನಾಥನು ಅನುಸರಿಸಿದ್ದಾನೆ. ಆ ಕೃತಿಗಳಿಗಿಂತ ಇವನ ಕೃತಿ ಕಾವ್ಯದೃಷ್ಟಿಯಿಂದ ಮೇಲುಮಟ್ಟದ್ದು. ಆದರೆ ದುರ್ದೈವವಶಾತ್ ಈ ಕೃತಿ ಅಸಮಗ್ರವಾಗಿ ಉಳಿದಿದೆ; ಎಂಟನೆಯ ಆಶ್ವಾಸದಲ್ಲಿ ಕಂಸವಧೆಯನ್ನು ಅಭಿವರ್ಣಿಸುವಲ್ಲಿ ಇದು ನಿಂತು ಹೋಗುತ್ತದೆ. ಉಳಿದ ಕಥಾಭಾಗವನ್ನು ನೇಮಿಚಂದ್ರನು ಬರೆಯಲಿಲ್ಲವೊ ಅಥವಾ ಬರೆದು ನಷ್ಟವಾಗಿದೆಯೊ ಎಂಬುದನ್ನು ಹೇಳುವುದು ಕಷ್ಟ. ಕೆಲವರು ಹೀಗೆ ಗ್ರಂಥಾರ್ಧ ಮಾತ್ರ ರಚಿಸಿದ ಕವಿಯೆಂದು ಇವನನ್ನು ಅರ್ಧನೇಮಿಯೆಂಬುದಾಗಿ ಪರಿಹಾಸ ಮಾಡುವುದುಂಟು. ಆದರೆ ಇದು ಸರಿಯಲ್ಲ; ನೇಮಿನಾಥನಿಗೆ ಅರಿಷ್ಟನೇಮಿ ಎಂಬ ಹೆಸರು ಜೈನರಲ್ಲಿ ವಾಡಿಕೆಯಿರುವುದರಿಂದ, ಇದನ್ನು ಅರಿಷ್ಟನೇಮಿಪುರಾಣವೆಂದುಕೊಂಡಿದ್ದು, ಮತ್ತೆ ಯಾವುದೋ ಸ್ಖಾಲಿತ್ಯದಿಂದ ಅರಿಷ್ಟನೇಮಿಪುರಾಣವು ಅರ್ಧನೇಮಿ ಪುರಾಣವಾಗಿ ನಾಮಾಂತರಗೊಂಡಿತು ಎಂಬುದು ಕೆಲವರ ಮತ.

ನೇಮಿಚಂದ್ರನ ಪಾತ್ರರಚನಾಕೌಶಲ ಈ ಕೃತಿಯಲ್ಲಿ ಹೆಚ್ಚಾಗಿ ವಿಶದವಾಗುತ್ತಿದೆ. 'ಜಿನಕಥೆ'ಯಾದರೂ, ವಸುದೇವಾಚ್ಯುತಕಂದರ್ಪರನ್ನು ಮನುಷ್ಯಸಹಜವಾದ ಗುಣಗಳಿಂದ ಚಿತ್ರಿಸಿದ್ದಾನೆ. ಕಂಸವಧೆ ಮೊದಲಾದ ಸನ್ನಿವೇಶಗಳು ಹೃದಯಂಗಮವಾಗಿ ಬಂದಿರುತ್ತವೆ. ಇಲ್ಲಿನ ವರ್ಣನೆಗಳಲ್ಲಿ ಮಿತಿ ಔಚಿತ್ಯಗಳುಂಟು. ಶೈಲಿಯು 'ಮೃದುಪದಬಂಧ ಬಂಧುರ'ವಾಗಿ ರಮಣೀಯತೆಯನ್ನು ತಳೆದಿದೆ.

ಕಾವ್ಯಾಮೃತಾಸ್ವಾದನದ ಸುಖ ಹೇಗೆ ಅನಿರ್ವಚನೀಯವೆಂಬುದನ್ನು ಎಷ್ಟು ಸುಂದರವಾಗಿ ಹೇಳಿದ್ದಾನೆ :

ಕಡುಕಂಪಂ ಪಿಡಿಕೆಯ್ಸಲಕ್ಕುಮೆ ಬಟಲ್ದೈತಂದ ತಂಗಾಳಿಯಂ
ಪಿಡಿಯಲ್ ಬರ್ಕುಮೆ ತೃಷ್ಣೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ ।
ಕುಡಿಯಲ್ ಬರ್ಕುಮೆ ಕೊರ್ವಿತೆಂದು ತರುಣೀ ಸಂಭೋಗಸೌಖ್ಯಂಗಳಂ
ನುಡಿಯಲ್ ಬರ್ಕುಮೆ ಬಾರದಿಂತುಟಿ ವಲಂ ಕಾವ್ಯಾಮೃತಾಸ್ವಾದನಂ ॥ (I–೩೧)

## ಕೃಷ್ಣನ ಜನನ

ಅಳಿಯುಂ ಪದ್ಮಿನಿ ವಾರ್ಧಿವೇಳೆ ವಿಷಮುಂ ಕಸ್ತೂರಿಯುಂ ಪುಲ್ಲ ಕ
ಜ್ಜಳಮುಂ ದೀಪಿಕೆ ಕಾಳರಾತ್ರಿ ತಮಮುಂ ನೀಲಾಶ್ಮಮುಂ ರೋಹಣ ।
ಸ್ಥಳಿ ಭೂದೇವಿ ತಮಾಳಮುಂ ಪಡೆದವೋಲ್ ನಾನಾಹಿತಾಂಕೂರಕಂ
ದಳನಂ ದೇವಕಿ ಲೀಲೆಯಿಂದ ಪಡೆದಳ್ ಕಂಸೋಷ್ಣನಂ ಕೃಷ್ಣನಂ ॥

(VII–೪೩)

## ಗೋವಳರ ನಡುವೆ ಕೃಷ್ಣ

ಉಡುಗಡಣದ ನಡು ಮೃಗಧರ
ನೆಡೆಗೊಂಡಿರ್ಪಂತೆ ಕಮಳನಯನಂ ಸಲೆ ತ
ನ್ನೊಡನಾಡುವ ಗೋವರ್ಕಳ
ನಡುವೆ ಕರಂ ತನ್ನ ಬೆಳಗೆ ಬೆಳಗಾಗಿರ್ದಂ ॥ (VII–೨೨)

## ೧೨. ರುದ್ರಭಟ್ಟ (೧೧೮೦)

“ಚಂದ್ರಮೌಳಿಪ್ರಮುಖ ನಿಖಿಲವಿದ್ವಜ್ಜನಂ ಮೆಚ್ಚೆ ಪೇಟ್ದಿಂ” ಎಂಬ ಮಾತಿನಿಂದ, ರುದ್ರಭಟ್ಟನು ವೀರಬಲ್ಲಾಳನ (೧೧೭೩-೧೨೨೦) ಮಂತ್ರಿಯಾದ ಚಂದ್ರಮೌಳಿ (೧೧೮೧-ಶ್ರವಣಬೆಳಗೊಳ ೩೭೭ನೆಯ ಶಾಸನ) ಮೊದಲಾದ ಪ್ರಮುಖ ವಿದ್ವಾಂಸರು ಮೆಚ್ಚುವಂತೆ ತನ್ನ ಕೃತಿನಿರ್ಮಾಣ ಮಾಡಿದಂತೆ ಹೇಳುತ್ತಾನೆ. ಆದುದರಿಂದ ಇವನ ಕಾಲ ಸು. ೧೧೮೦ ಇರಬೇಕು. ಈತನು ವಿಷ್ಣುಪುರಾಣದ ಪಂಚಮಾಂಶದ ಕಥಾವಸ್ತುವಿನಿಂದ ತನ್ನ ಅಮೋಘವಾದ ‘ಜಗನ್ನಾಥವಿಜಯ’ವನ್ನು ನಿರ್ಮಿಸಿರುವನು. ಇದಲ್ಲದೆ ‘ರಸಕಲಿಕೆ’ ಎಂಬೊಂದು ರಸಪ್ರತಿಪಾದನಾಗ್ರಂಥವನ್ನು ನಿರ್ಮಿಸಬೇಕೆಂದು ಸಾಳ್ವನ (೧೫೫೦) ರಸರತ್ನಾಕರದಿಂದ ತಿಳಿದು ಬರುತ್ತದೆ. ಆದರೆ ಇದು ಉಪಲಬ್ಧವಾಗಿಲ್ಲ.

ರುದ್ರಭಟ್ಟನಿಗೆ ಕೃತಿಶಾರದಾಭ್ರಚಂದ್ರಾತಪ, ಕವಿರಾಜ ಎಂಬ ಬಿರುದುಗಳಿದ್ದುವು. ಈತನು ಸ್ಮಾರ್ತಬ್ರಾಹ್ಮಣನು ಹರಿಹರರಲ್ಲಿ ಅಭೇದ ಕಲ್ಪನೆ ಇಟ್ಟುಕೊಂಡಿರುವುದನ್ನು ಗ್ರಂಥದಿಂದ ತಿಳಿಯಬಹುದಾದರೂ, ರುದ್ರಭಟ್ಟನಿಗೆ ಕೃಷ್ಣನಲ್ಲಿ ಒಲವು ಹೆಚ್ಚೆಂಬುದು ಅವನ ಹೃದಯಾಂತರಾಳದಿಂದ ಉಕ್ಕಿ ಬರುವ ಕೃಷ್ಣಸ್ತೋತ್ರಗಳಿಂದ ಸ್ಪಷ್ಟವಾಗದಿರದು.

## ಜಗನ್ನಾಥವಿಜಯ

ಇದರಲ್ಲಿ ೧೮ ಆಶ್ವಾಸಗಳಿವೆ. ವಿಷ್ಣುಪುರಾಣದ ಪಂಚಮಾಂಶದ ಎಂದರೆ ಶ್ರೀಕೃಷ್ಣನ ಜನನಾದಿಯಾಗಿ ಬಾಣಾಸುರಯುದ್ಧದವರೆಗಿನ ಕಥೆ ಇದರಲ್ಲಿ ಅಡಕವಾಗಿದೆ. ಇವನ ಬಂಧವು ಬಹಳ ಪ್ರೌಢವಾಗಿದೆ. ಭಾಷೆ ಹೆಚ್ಚು ಸಂಸ್ಕೃತಭೂಯಿಷ್ಠವಾಗಿರುವುದರಿಂದ ಕೆಲವು ವೇಳೆ ಕ್ಲಿಷ್ಟವಾಗಿದೆ; ಪಾಂಡಿತ್ಯ ಪ್ರಚುರತೆಯ ಕೃತಕತೆ ಕಂಡುಬರುವುದೂ ಉಂಟು; ಆಶ್ವಾಸಗಳ ಕೊನೆಯ ಗದ್ಯದ ಭಾಷೆಯನ್ನು ಗಮನಿಸಿರಿ; ಸಂಸ್ಕೃತ ಗೊಂಡಾರಣ್ಯವಿದು—

ಇದು ಸಮಸ್ತ ಕಮಳಭವಾಂಡಮಾಲಾಘಟೀತಾರಘಟಘಟ್ಟನಾ ಸ್ವತಂತ್ರನಿಜಸ್ವರೂಪನಿರೂಪಣ ಚಕಿತ ಸಕಳಾಮ್ನಾಯತಂತ್ರ ಲಕ್ಷ್ಮೀಕಾಂತ ಶ್ರೀಪಾದ ಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀ ಜಗನ್ನಾಥ ವಿಜಯಮಹಾಪ್ರಬಂಧದೊಳ್—ಎಂದಿದೆ. ರುದ್ರಭಟ್ಟನ ಕೃತಿಯಿಂದ ಕೇಶಿ ರಾಜನು ತನ್ನ ಶಬ್ದಮಣಿದರ್ಪಣದಲ್ಲಿ ಲಕ್ಷ್ಯಗಳನ್ನು ಆಯ್ದುಕೊಂಡಿರುವುದು ಕವಿಯ ಪ್ರಯೋಗಪ್ರಾಮಾಣ್ಯವನ್ನು ಅರುಹುತ್ತದೆ. ಪ್ರಕೃತಿವರ್ಣನೆ ಯನ್ನು ಮಾಡುವುದರಲ್ಲಿ ರುದ್ರಭಟ್ಟನು ಕೃತಕೃತ್ಯನು. ಹಲವೆಡೆ ಕವಿ ಸಮಯದ ಗುಚ್ಛಗಳು ಭಾರವಾಗಿವೆ; ಆದರೂ ಕವಿತೆಯಲ್ಲಿ ಓಜಸ್ಸು ಕಾಂತಿ ಪ್ರಸಾದಗಳುಂಟು; ಲಾಲಿತ್ಯಸುಲಭತೆಗಳನ್ನು ರುದ್ರಭಟ್ಟನ ಭಕ್ತ್ಯಾ ವೇಶಭರದಲ್ಲಿ ಕಾಣಬಹುದು; ಭಕ್ತಿರಸವನ್ನು ಪರಿಪುಷ್ಟಿಗೊಳಿಸುವಾಗ ಅವನು 'ಕಾವ್ಯಸಾಮಾಧಿ'ಯಲ್ಲಿದ್ದುಬಿಡುತ್ತಾನೆ; ಆಗ ಅವನ ವಾಣಿ ಹೃದಯವನ್ನು ಮೀಟುವುದು. ಅದ್ಭುತ, ವೀರ ಇತ್ಯಾದಿ ರಸಗಳು ಯಥೋ ಚಿತವಾಗಿ ಬಂದಿದ್ದರೂ, ಜಗನ್ನಾಥವಿಜಯದಲ್ಲಿ ಪ್ರವಹಿಸುವ ಪ್ರಧಾನ ರಸವು ಭಕ್ತಿರಸವೇ ಎನ್ನಬಹುದು.

ಪೀಠಿಕಾಸಂಧಿಯಲ್ಲಿ ಬರುವ ಸುಕವಿಪ್ರಶಂಸೆ ಕುಕವಿನಿಂದೆಗಳು ಸಂಪ್ರ ದಾಯದಂತೆ ಸಾಗಿದರೂ, ಅವುಗಳಲ್ಲಿ ರುದ್ರಭಟ್ಟನ ಕವಿತಾಸಾಮರ್ಥ್ಯದ ಆತ್ಮವಿಶ್ವಾಸವು ಹೊರಹೊಮ್ಮುತ್ತಿದೆ:

ಕವಿತಾಪ್ರೌಢನೆ ಸೋಲ್ವವೋಲ್ ಕೃತಿಯೊಳಜ್ಞಂ ಸೋಲ್ವನೇ, ಚಂದ್ರಕಾಂ
ತವೊಸರ್ವಂತಿರೆ ಗೋರಿಕಲ್ಲೊಸರ್ಗಮೇ ಬೆಳ್ದಿಂಗಳೊಳ್, ತುಂಬಿ ಪೀ।

ರ್ವವೊಲೆಂ ಪೀರ್ದಪುದೇ ಕಡಂದುಱಿತೆ ನವ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣುತ್ಕರಂ ಚೈತ್ರದೊಳ್ ॥

ತನ್ನ ಕವಿತಾರಸದ ಯೋಗ್ಯತೆ :

ಇನಿಯಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ
ದನ ರಸದಣ್ಪಿನಂತೆ ನನೆಯೇಱಿದ ಮಲ್ಲಿಗೆಯಂತೆ ಪೂರ್ಣಚಂ ।
ದ್ರನಸಿರಿಯಂತೆ ಒಂದೆಸೆಪ ತೆಂಕಣ ತಂಬೆಲರಂತೆ ರುದ್ರಭ
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ ॥ (I-೧೬)

ಕೃಷ್ಣನ ಬಾಲಲೀಲಾವಿನೋದ ಪೂತನಾಮರ್ದನ ಇತ್ಯಾದಿಯನ್ನೊಳಗೊಂಡ ತೃತೀಯಾಶ್ವಾಸವು ಕಾವ್ಯದ ಜೀವಾಳದಂತಿದೆ. ಆದರಿಂದ ಉದಾಹರಣೆಗಳು :

ಯಶೋದೆ ಹೊರಗೆ ಹೋದ ಸಮಯವನ್ನು ಕಾದು ಪೂತನಿ ಕೃಷ್ಣನಿಗೆ ನಂಜೂಡಿ ಬಂದ ಬವಣೆ :

ಪ್ರಣಯಾಲಂಬಿನಿಯಂತೆ ಪೂತನೆ ಯಶೋದಾಕಾರದಿಂ ಬಂದು ನಿ
ರ್ಘೃಣೆ ನಂಜೂಡಿದ ತನ್ನ ಪೆರ್ಮೊಲೆನುಮಾಡಲ್ ಬಾಲಕಂ ನೆತ್ತಱಿಂ ।
ನೆಣನಂ ಖಂಡಮನೆಯ್ದೆ ಪೀಡಿ ಪಿಡಿದುಂಡೋಹೋಹೊ ಹಾ ಮಾಣ ದಾ
ರುಣ ಮಾಣೆಂದೊಱಲುತ್ತೆ ಬೀಟ ತವೆ ಪೀರ್ದಂ ಪೂತನಾಜೀವಮಂ ॥

ಲತಾಂಗಿಯರು ಬಾಲಕೃಷ್ಣನನ್ನು ತೂಗಿದಾಗ ಹೇಳಿದ ಜೋಗುಳ :

ಉದರಮೆ ತೊಟ್ಟಿಲಾಗೆ ಭುವನತ್ರಯಮಂ ನೆಲಸಿತ್ತಾಲ್ದಿ ದೇಹಿವ
ರ್ಗದ ಕೃತಪಾಪಪುಣ್ಯಫಲಮಂ ಸಲೆತೂಗುವ ಕರ್ಮಸಾಕ್ಷಿಯಂ ।
ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿರದಚ್ಯುತ ಜೋ ಮಹಾತ್ಮ ಜೋ
ಸದಮಲಬೋಧ ಜೋ ಪರಮ ಜೋ ಹರಿ ಜೋಯೆನುತುಂ ಲತಾಂಗಿಯರ್ ॥
(III-೨೮)

ಒಂದು ದಿನ ಮುಕುಂದನು ಹಾಲನ್ನು ಕುಡಿಯಲೊಲ್ಲದಿರಲು ಯಶೋದೆ ಕಂಡು, “ಕೃಷ್ಣಾ, ಬಂಗಾರದ ಗಂಟೆ ಕಟ್ಟಿದ ನಮ್ಮ ನಂದಿನಿಯ ಹಾಲುಂಟು ; ಅಣ್ಣ ಬರುವುದಕ್ಕೆ ಮುಂಚಿತವಾಗಿ ನೀನು ಕುಡಿದುಬಿಡು ; ಆಗ ನಿನ್ನ ಕೂದಲು ಉದ್ದ ಬರುವುದು” ಎಂದು ನಂಬಿಸಲು, ಮುಕುಂದನು ಹಾಲು

ಕುಡಿದು, "ಅಬ್ಬೆ, ಈಗಳ್ ಚೆಂಡಿಕೆ ಎನಿತುದ್ದವಾದುದು" ಎಂಬುದಾಗಿ ಬೆಸ ಕೊಂಡು ಒಪ್ಪಿದನಂತೆ. (III-೫೨)

ಎಷ್ಟು ಸಹಜ ಚಿತ್ರವಿದು.

ಇತರರು ಆಡಿಸುವಾಗ, ಮುರಾರಿ ಹೇಗೆ ಆಡಿದನೆಂಬುದನ್ನು ವರ್ಣಿಸುವ 'ಸಂಸಾರನಾಟಕ ಸೂತ್ರಧಾರಿ ಮುರಾರಿ ಕೃಪೞಿಗಾಡಿದಂ' ಎಂಬುದಾಗಿ ಅಂತ್ಯವಾಗುವ ಐದು ಪದ್ಯಗಳು (III ೫೩-೫೭) ಯಾವ ಕೃಷ್ಣಭಕ್ತರ ನ್ನಾದರೂ ಕುಣಿಸುವುವು.

ರುದ್ರಭಟ್ಟನು ಕೃಷ್ಣನ ಮಹಿಮೆಯನ್ನು ಹಾಡಿ ದಣಿಯನು. ಇತರ ಸಂಸ್ಕೃತಮೂಲದಲ್ಲಿ ಈ ಪ್ರಕಾರಗಳಿದ್ದರೂ, ರುದ್ರಭಟ್ಟನು ತನ್ನ ಪ್ರತಿಭೆ ಯಿಂದ ಈ ಭಕ್ತಲಹರಿಗೆ ಒಂದು ವೈಶಿಷ್ಟ್ಯವನ್ನು ತಂದಿರುವನು. ಅದು ಸಂಭಾಷಣಾರೂಪದ ಕಥನ ಪ್ರಕಾರ.

ಕತೆಯಂ ಕೇಳಲೆ ಕಂದ, ಹುಂ, ರಘುಜನೆಂಬಂ ಹುಂ, ಸಕಾಂತಂ ವನ
ಸ್ಥಿತನಾದಃ ಗುರು ಪೇೞೆ ಹುಂ, ದಶಶಿರು ಕೊಂಡುಯ್ದನಾ ರಾಮನಾ ।
ಸತಿಯಂ ತಾನೆನೆ ಪೂರ್ವಮಂ ನೆನೆಯುತಂ ಹುಂ ಕೊಳ್ಳದುತ್ಕೋಪಹುಂ
ಕೃತಿಯಂ ಮಾಡುತುಮೌಂಡುಗರ್ಚಿ ಕಿಸುಗಣ್ಬೆಟ್ಟಚ್ಯುತಂ ರಂಜಿಕುಂ ॥

(III—೬೧)

ಹರಿ ನೀಂ ಮಣ್ದಿಂದೆ, ತಿನ್ನೆಂ ಜನನಿ, ಪುಸಿದನೆಮ್ಮಗ್ರಜಂ, ತೋಱುವಕ್ರಾಂ
ತರಮಂ, ನೋಡೆಂದು ಬಾಯಂ ತೆಱೆವುದುಮದಱೊಳ್, ವಾರಿಧಿಯೇೞುಂ
ಕುಲೋರ್ವೀ ।
ಧರವೇೞುಂ ದ್ವೀಪವೇೞುಂ ಬೆರಸು ಜಗಮನೀರೇೞುಮಂ ಕೂಡೆ ಕಂಡ
ಚ್ಚರಿವಟ್ಟಂ ಮುಚ್ಚುಮುಚ್ಚಾನನಮನೆನುತುಮಾ ಕಾಂತೆ ವಿಭ್ರಾಂತೆ
ಯಾದಳ್ ॥ (III—೬೩)

ಇಂಥ ಚಿತ್ರಗಳಿಂದ ರುದ್ರಭಟ್ಟನು ಪಾತ್ರ ಸನ್ನಿವೇಶಗಳನ್ನು ನಮ್ಮ ಕಣ್ಣ ಮುಂದೆ ತಂದು ನಮ್ಮನ್ನು ರಸಾಮೃತವಾರಿಧಿಯಲ್ಲಿ ಬಿಡುವನು.

## ೧೩. ಅಗ್ಗಳೆ (೧೧೮೯)

ಅಗ್ಗಳನು ಸಾಮಯಿಕ ಸಂಪ್ರದಾಯದ ಮಾರ್ಗದಲ್ಲಿ ಚಂಪೂಕಾವ್ಯ

ರಚಿಸಿದ ಜೈನಕವಿಗಳಲ್ಲಿ ಅಗ್ಗಳನೆನ್ನಬಹುದು. "ಕಳೆಗಳೆನಿತಱಿತೊಳವಮಗ್ಗಳ ಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್" ಎಂಬ ಹೇಳಿಕೆಯನ್ನು ಗ್ರಹಿಸಿದರೆ ಇವನು ಯಾವನೋ ಒಬ್ಬ ರಾಜನ ಆಸ್ಥಾನದಲ್ಲಿ ಶ್ರೇಷ್ಠ ಕವಿಯಾಗಿರಬೇಕು. ಇವನು ರಚಿಸಿದ ಕೃತಿ—

## ಚಂದ್ರಪ್ರಭಪುರಾಣವು

ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ಕಥೆಯಾಗಿದೆ; ೧೬ ಆಶ್ವಾಸಗಳುಂಟು. ಗುರುವಾದ ಶ್ರುತಕೀರ್ತಿ "ಆತ್ಮ ಶಿಷ್ಯನಾದ ಅಗ್ಗಳನಿಂದ ಅತಿಶಯಿತ ಕಾವ್ಯಮಾರ್ಗದೆ ನುತ ಚಂದ್ರಪ್ರಭಪುರಾಣವನ್ನು ಹೇಳಿಸಿದನು" ಎಂಬುದಾಗಿ ಶಾಸನೋಕ್ತವಾಗಿದೆ.[1] "ಏಕಾದಶಶತಮುಂ ಮತ್ತೇಕಾದಶಮಾಗೆ ಶಕನೃಪಾಬ್ದಂ, ಸೌಮ್ಯಂ, ಪ್ರಾಕಟ ವರ್ಷದ ಚೈತ್ರಸಿತೈಕಾದಶಿಯಂದು ನೆಗಬ್ದುದೀ ಕೃತಿರತ್ನಂ" ಎಂಬ ಪದ್ಯದಿಂದ ಈ ಕೃತಿಯು ಶಾಲಿವಾಹನಶಕಕ್ಕೆ ಸರಿಯಾದ ಸೌಮ್ಯ ಸಂವತ್ಸರದ ಚೈತ್ರಮಾಸ ಶುಕ್ಲಪಕ್ಷದ ಏಕಾದಶಿಯಂದು ರಚಿತವಾದುದೆನ್ನಬೇಕು. ಪಾರ್ಶ್ವನಾಥನು (೧೨೦೫) ಇವನ ಕೃತಿಯ ಮಹಿಮೆಯನ್ನು ಹೀಗೆ ಕೊಂಡಾಡಿದ್ದಾನೆ :

ವಾಸ್ತವಭಕ್ತಿಯುತಂ ರೂ
ಪಸ್ತವನಮಣಿಪ್ರವಾಳಮಂ ಜಿನನಾಸ್ಥಾ ।
ನಸ್ತವನಮನೊದವಿಸಿ ಭೂ
ವಿಸ್ತುತನಾದಗ್ಗಳಂಗಮಗ್ಗಳರೊಳರೇ ॥

ಇಲ್ಲಿ ಪಾರ್ಶ್ವನಾಥನು ಅಗ್ಗಳನ ಶ್ರೇಷ್ಠತರಭಕ್ತಿಯನ್ನೂ ಜಿನನಿಗೆ ಮಣಿಪ್ರವಾಳದಂತಿರುವ ಸ್ತವನವನ್ನೂ ಒದವಿಸಿರುವುದನ್ನು ಕೊಂಡಾಡಿದ್ದಾನೆ. ಇಲ್ಲಿ ಹೇಳಿರುವ 'ಮಣಿಪ್ರವಾಳ' ಅರ್ಥೋಚಿತವಾಗಿದೆಯೆನ್ನಬಹುದು. ರಚನೆಯು 'ಹವಳದ ಮಣಿ'ಕಟ್ಟಿನಂತೆ ಎಂಬುದರಲ್ಲಿ ಮಲೆಯಾಳಿಗಳೂ ತಮಿಳರೂ ಭಾಷೆಯ ಬಂಧದ ಮಟ್ಟಿಗೆ ಹೇಳುವ ಇನ್ನೊಂದು ಅರ್ಥವೂ ಇಲ್ಲಿಗೆ ಒಪ್ಪುತ್ತದೆ. ಅತ್ಯಂತ

---

1 ಬಿಳಿಗಿ ಶಾಸನ (೧೫೫೨).

ಸಂಸ್ಕೃತಭೂಯಿಷ್ಠವಾದ ಭಾಷೆಗೆ 'ಮಣಿಪ್ರವಾಳ'ವೆನ್ನುವರು. ಅಗ್ಗಳನ ಭಾಷೆ ಹಾಗೆಯೇ ಇದೆ. ಎರಡು ಉದಾಹರಣೆಗಳು :

ಕರಕಂಗಳ್ (ಆಲಿಕಲ್ಲು)

ಘನಸಮಯ ಶಬರಕರಗತ
ಕನತ್ತಟ್ಟದಂಡ ಪಾತವಿಗಳನ್ನೀಲ ।
ಸ್ತನಯಿತ್ನುಕುಲತಮಾಲೀ
ವನ ಪ್ರಸೂನಂಗಳೆನಿಸಿದುವು ಕರಕಂಗಳ್ ॥ (IV–೩೭)

'ಎನಿಸಿದುವು' ಎಂಬ ಕನ್ನಡ ಪದವನ್ನುಳಿದರೆ ಈ ಕಂದಪದ್ಯದಲ್ಲಿ ಎಲ್ಲವೂ ಕಷ್ಟವಾದ ಸಂಸ್ಕೃತ ಪದಗಳು.

ನಿದಾಘ (ಬೇಸಿಗೆ)

ಅತಿತಪ್ತೋದ್ಧೃಪ್ತಧೂಳೀಪಿಹಿತ ಮಹಿತಳಂ ತುಂಗವಾತೂಳಿಕಾಲಿಂ
ಗಿತರೋದೋಮಂಡಲಂ ಪ್ರೋಚ್ಚಳಿತ ಮರುಮರೀಚಿವ್ರಜ ವ್ಯಾಪ್ತದಿಕ್ಸಂ ।
ತತಿ ಬಂದತ್ತಂದಗುರ್ವಿಂ ಬಗೆಗೆ ಪಡೆದವೋಘಂ ಸಮುದ್ಭೂತಮಾಘು
ಹೃತನದ್ಯೋಘಂ ವಿಮೇಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ॥
(IX–೭೫)

ಇವು ಉಕ್ಕಿನ ಕಡಲೆಗಳು. ಆದರೂ "ಕಿವಿಯುಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ, ಶಬ್ದಸಂದರ್ಭದೊಳ್ ಸವಿಯಂ ಮುಂದಿಡುವರ್ಥ...." ಇತ್ಯಾದಿ ಗುಣಗಳಿಂದ "ಚಿತ್ತಂ ಮೂಡಿ ತೇಂಕಾಡೆ ಪೊಣ್ಮುವ ನಾನಾ ರಸಗಳು" ಒಪ್ಪವಾಗಿ ಕೆಲವೆಡೆ ಪುಷ್ಟಿಗೊಂಡಿವೆ ಎನ್ನಬಹುದು. ಅಂಥ ವರ್ಣನೆಗಳು :

ಮಗಳನ್ನು 'ಅಕ್ಕ' ಎಂದು ಮುದ್ದಾಗಿ ಸಂಬೋಧಿಸಿ ಬುದ್ಧಿ ಹೇಳುವುದು.

ಅಕ್ಕ ನಿಜ ಪ್ರಿಯಂಗೆ ಮನದಂದದೆ ನೀಂ ಬೇಸಕೆಯ್ವುದಾಗಳುಂ
ಮಕ್ಕಳ ಮಾಟಿಕೆಯಂತಿರದೆ ನೀನೊಡವಂದ ಜನಕ್ಕೆ ಸಂತಸಂ ।
ಮಿಕ್ಕಳಮಾಗೆ ಮನ್ನಿಪುದು ಮಾವನ ಪೆರ್ಮೆಗತ್ತೆಯೊಲ್ಮೆಗಂ
ತಕ್ಕ ನೆಪಟ್ಟಿಯಂ ನೆಗಟ್ಟುದೀವುದು ಪೆತ್ತೆಮಗಂ ಪ್ರಮೋದಮಂ ॥

ಕೆಳಗಿನದು ಎಷ್ಟು ಮನೋಹರವಾದ ಪರಿಸಂಖ್ಯಾಲಂಕಾರ :

ಸತತಂ ಮಾರ್ಗೋಲ್ಲಂಘನ
ಗತಿ ಹಯದೊಳವಗ್ರಹಂ ಮದೇಭಸಮೂಹಾ ।
ಕೃತಿಯೊಳ್ ಸಮರಾಗಮನ
ಸ್ಥಿತಿ ನಲ್ಲರೊಳಲ್ಲದಿಲ್ಲ ಪೆಱತೊಂದೆಡೆಯೊಳ್ ॥ (I–೮೬)

ಎಳವೆಂಡಿರ ಕಡೆಗಣ್ಣ ಕಾಂತಿ

ಸುಱಿವೆಳವೆಂಡಿರ ಕಡೆಗ
ಣ್ಬಟಿಯಿಂ ಪಸರಿಸುವ ಬೆಳಗು ಬೆಳದಿಂಗಳ ಪೊಂ ।
ಪುಟಿಯೆಂದು ಸುರಿವುವದಱೊಳ್
ಮಳೆಯಿಲ್ಲದೆಯುಂ ಪ್ರಣಾಳ ಶಶಿಕಾಂತಂಗಳ್ ॥ (VI–೪೭)

ಪೊಸವೆಳ್ದಿಂಗಳ ಸುಂದರ ವರ್ಣನೆ

ಕೆಂಪಿಲ್ಲದ ಬಿಸಿಲಣ್ಮುವ
ಕರಪಿಲ್ಲದೆ ಸಾಂದ್ರ ಚಂದ್ರನಕ್ಷೋದಂ ಮ ।
ತ್ತಿಂಪಿಲ್ಲದ ಪಾಲ್ಗಡಲಂ
ಬೆಂ ಪೊಸವೆಳ್ದಿಂಗಳಂ ಬಟಿಕ್ಕೇನೆಂಬೆಂ ॥ (VIII–೪೩)

## ೧೪. ಆಚಣ್ಣ (೧೯೫೫)

ತನ್ನ ವಿಷಯವಾಗಿ ಆಚಣ್ಣನು ವರ್ಧಮಾನಪುರಾಣದಲ್ಲಿ ಹೇಳಿಕೊಂಡಿರುವುದರಿಂದ, ಅವನು ಜೈನನೆಂದೂ, ಭಾರದ್ವಾಜಗೋತ್ರದವನೆಂದೂ ತಂದೆ ಕೇಶಿರಾಜನೆಂದೂ ತಾಯಿ ಮಲ್ಲಾಂಬಿಕೆಯೆಂದೂ ತಿಳಿದುಬರುತ್ತದೆ. ಇವನಿಗೆ ವಾಣೀವಲ್ಲಭನೆಂಬ ಬಿರುದು ಇದ್ದಿತು. ಈತನು ತುಂಬ ವಿನಯಶಾಲಿ (I–೩೫) ತಕ್ಕ ಆಧಾರಗಳಿಂದ ಆಚಣ್ಣನು ವರ್ಧಮಾನಪುರಾಣವನ್ನು ಕ್ರಿ. ಶ. ೧೯೫೦–೧೨೨೮ರ ಅವಧಿಯಲ್ಲಿ ರಚಿಸಿರಬೇಕೆಂಬುದಾಗಿ ತೀರ್ಮಾನಿಸಲಾಗಿದೆ.[1] ಅವನು

---

[1] ವರ್ಧಮಾನಪುರಾಣ, ಮದ್ರಾಸು ವಿಶ್ವವಿದ್ಯಾನಿಲಯ, ಪು. xv.

'ಶ್ರೀಪಾದಾಶೀತಿ' ಎಂಬ ಜೈನಮತದೊಳಗಣ ಪಂಚಪದಗಳ ಮಹಿಮೆಯನ್ನು ಹೊಗಳುವ ೯ಳ ಕಂದಪದ್ಯಗಳ ಗ್ರಂಥವನ್ನು ಬರೆದಿರುವನು.

## ವರ್ಧಮಾನಪುರಾಣ

ಇದರಲ್ಲಿ ೨೪ ನೆಯ ತೀರ್ಥಂಕರನಾದ ಶ್ರೀವರ್ಧಮಾನ ಮಹಾವೀರನ ಪವಿತ್ರ ಚರಿತವು ಅಡಕವಾಗಿದೆ. ತನ್ನ ಕೃತಿಯ ಶ್ರೇಷ್ಠತೆಯನ್ನು ಹೀಗೆ ಹೇಳಿ ಕೊಂಡಿದ್ದಾನೆ :

ಸದಳಂಕಾರದಗಾರಮುದ್ಧುರಸಭಾವಾನೀಕದೋಕಂ ಸದ
ರ್ಥದ ಸಾರ್ಥಂ ವರಶಬ್ದವೃಂದದ ವಿರಾಜನ್ಮಂದಿರಂ ನಾಡೆಯುಂ ।
ಮೃದು ಸಂದರ್ಭದ ಗರ್ಭಮಿಂತಿದೆನಿಸಲ್ ಸಾಲ್ದಿರ್ದ ಕಾವ್ಯಂ ಸಭಾ
ಸದರಂತಃಕರಣಕ್ಕದೇಂ ಕಱೆಯದೇ ಸೌಖ್ಯಾಮೃತಾಸಾರಮಂ ॥ (I–೨೧)

ಕಾವ್ಯದೃಷ್ಟಿಯಿಂದ 'ಸೌಖ್ಯಾಮೃತಾಸಾರ'ವನ್ನು ಈ ಕೃತಿ ಕರೆಯುತ್ತದೆ ಎನ್ನುವಂತಿಲ್ಲ. ಸಹಜತೆಯು ಬಂದಿದ್ದರೂ, ಸಂಪ್ರದಾಯಾನುಸಾರಿಯಾಗಿ ಆಚಣ್ಣನು ಕಾವ್ಯವನ್ನು ಹೆಣೆದಿದ್ದಾನೆ; ಯಮಕ ಚಿತ್ರಕವಿತೆಗಳಿಗೆ ಕೆಲವೊಮ್ಮೆ ಮಾರುಹೋಗಿದ್ದಾನೆ.

ವಕುಳಂ ಸಪರಿಮಳಪ್ರಸ
ವಕುಳಂ ಸೌರಭಸಮಾಗತ ಭ್ರಮರಾರಾ ।
ವಕುಳಂ ಸೊಗಯಿಸಿದತ್ತೆಸೆ
ವಕುಳಂಬಿತ ವಿಟಪಮವನಿಸಂಸ್ಥಾವಕುಳಂ ॥ (II–೭)

### ದ್ವ್ಯಕ್ಷರಿ :

ಕಲಿಕೊಂಕಲ್ಕೇಕಕ್ಕುಂ
ಕೆಲಕ್ಕೆ ಕೋಲಿಕ್ಕೆಲಕ್ಕಕ್ಕಲ್ಲಂ ।
ಕಲಿ ಕೊಲಲೆ ಕಲಕ್ಕಕ್ಕುಂ
ಕುಲಕಕ್ಕುಂ ಕಲಿ ಕಲಂಕಿ ಕೊಂಕೆ ಕಲಂಕಂ (VII–೫೨)

## ಗತಪ್ರತ್ಯಾಗತ :

ಕುಂದಿನಿಂದೆಚ್ಚನದು ಬಂ
ಟಿಂದಮಲ್ಲದೆ ನಿಂದುದೆಂ ।
ದೆಂದು ನಚ್ಚದೆ ನಿಂದೆಲ್ಲಮದಟಂ
ಬಂದು ನಚ್ಚದೆ ನಿಂದಿಕುಂ ॥ (VII–೫೩)

ಇವುಗಳಲ್ಲಿ ಯಾವ ಅವ್ಯೃತಸಾರವಿರುವುದು? ಕವಿಯು ಕನ್ನಡ ಚಂಪೂಗಳಲ್ಲಿ ಪ್ರಸಿದ್ಧವಾದ ಆರು ವರ್ಣವೃತ್ತಗಳಲ್ಲದೆ, ದ್ರುತವಿಳಂಬಿತ, ಮಲ್ಲಿಕಾಮಾಲೆ, ಮಾಲಿನಿ, ಶಾರ್ಙ್ಗ, ಸ್ವಾಗತ, ಪೃಥ್ವೀ, ಹರಿಣೀ ಇತ್ಯಾದಿ ಅಪೂರ್ವ ವೃತ್ತಗಳನ್ನೂ ರಗಳೆ ತಿವದಿಗಳೆಂಬ ಕನ್ನಡ ಛಂದಸ್ಸುಗಳನ್ನೂ ಬಳಸಿಕೊಂಡಿದ್ದಾನೆ.

ಇದರಲ್ಲಿ ಬಂದಿರುವ ಕೆಲವು ಸ್ವಾರಸ್ಯವಾದ ಪದಗಳು, ವಿಶಾಖನಂದಿ ವಿಶ್ವನಂದಿಯನ್ನು ಕಂಡಾಗ—

ಸಿಂಗದ ಶಿಶುವಂ ಕಂಡ ಕು
ರಂಗದ ಮಱಿಯಂದೆ ಬೆದೆಱಿ ದೆಸೆಗೆಟ್ಟು ಕರಂ ।
ಬೆಂಗೊಟ್ಟೋಡಿದನವನು
ತ್ತುಂಗಕರಂಗಳ ಮರಂಗಳೆಡೆದೆಱಿಪುಗಳೊಳ್ (II–೪೮)

ನಿಜಾನುಜನ ಕಳೇಬರವನ್ನು ಕಂಡು ಬಲರಾಮನು ಪ್ರಲಾಪಿಸುವನು :

ಹಾ ಹಾ ಮನುಕುಲಮಂಡನ
ಹಾ ಹಾ ಸುರಖಚರಮನುಜ ಚೂಡಾರತ್ನಾ ।
ಹಾ ಹಾ ಗುರುಜನ ವತ್ಸಲ
ಹಾ ಹಾ ಬುಧಬಂಧುವಂದಿಕಲ್ಪ ಮಹೀಜಾ ॥ (IX–೬೧)

ಸರಸತಿ ನಿನ್ನ ಭಾಗ್ಯವರೆಯಾದುದೆ ಹಾ ನಿನತೋಲೆವಾಗ್ಯವೋ
ಸರಿಸಿದುದೇ ಧರಿಶ್ರಿ, ಸಿರಿ ನಿನ್ನಯ ಮೆಯ್ಸಿರಿ ಸೂಱೆವೋಯ್ತು ಮೆ ।
ಯ್ಯಗ್ಗರೆದುದೆ ವೀರಲಕ್ಷ್ಮಿ ನಿನತೆಯ್ದೆ ತನಂ ಬಿದಿಮೇರೆದಪ್ಪಿ ನಿ
ಷ್ಕರುಣದೆ ನಿಮ್ಮ ಬಾಟಿಮ್ಮೊದಲನಕ್ಕಟ ವಂಚಿಸಿ ಕೊಂಡುವೋದನೇ ॥
(IX–೭೦)

ಈ ಪುರಾಣದಲ್ಲಿ ಬರುವ ಭವಾವಳಿಯ ಕಥೆಗಳು ಬಹಳ ತೊಡಕಿನವಾದುದರಿಂದ ಕಾವ್ಯರಸಾಸ್ವಾದನೆಗೆ ಸ್ವಲ್ಪ ಕಷ್ಟವಾಗುವುದು. ವರ್ಣನೆಗಳಲ್ಲಿಯೂ ಪಾತ್ರರಚನೆಗಳಲ್ಲಿಯೂ ಕವಿ ಅಷ್ಟು ಯಶಸ್ವಿಯಾಗಲಿಲ್ಲ. ಮಹಾಕಾವ್ಯಕ್ಕೆ ಬೇಕಾದ ೧೮ ಲಕ್ಷಣಗಳನ್ನೂ ಪಂಪನು ಆದಿಪುರಾಣದಲ್ಲಿ ಹೇಳಿರುವ ಲೋಕಾಕಾರಕಥನ ಮೊದಲಾದ ಎಂಟು ಜೈನಪುರಾಣ ಲಕ್ಷಣಗಳನ್ನೂ ಇದರಲ್ಲಿ ಕಾಣಬಹುದು. ಜೈನತೀರ್ಥಂಕರ ಚಂಪೂಮಾಲೆಯಲ್ಲಿ ವರ್ಧಮಾನಚರಿತೆಯನ್ನು ಪೋಣಿಸಿದ ಕೀರ್ತಿ ಆಚಣ್ಣನಿಗೆ ಸಲ್ಲುತ್ತದೆ.

## ೧೫. ಬಂಧುವರ್ಮ (೧೨೦೦)

ಹರಿವಂಶಾಭ್ಯುದಯ ಮತ್ತು ಜೀವಸಂಬೋಧನೆ ಎಂಬೆರಡು ಗ್ರಂಥಗಳನ್ನು ರಚಿಸಿದ ಈ ಜೈನ ಕವಿ ಸುಮಾರು ೧೨೦೦ರ ಸಮಯದಲ್ಲಿದ್ದಿರಬೇಕೆಂಬುದಾಗಿ ಕವಿಚರಿತ್ರೆಕಾರರು ಅಭಿಪ್ರಾಯಪಟ್ಟಿರುತ್ತಾರೆ. ಈತನು ಹಿಂದಣ ಸಂಪ್ರದಾಯದಲ್ಲಿ ಕಾವ್ಯರಚನೆ ಮಾಡಿದ್ದರೂ ಆ ರಚನೆಯ ಸೌಂದರ್ಯವೂ ಲಾಲಿತ್ಯವೂಇದೆ.

### ಹರಿವಂಶಾಭ್ಯುದಯ

೨೨ನೆಯ ತೀರ್ಥಂಕರನಾದ ನೇಮಿನಾಥನ ಪುರಾಣವನ್ನು ೧೪ ಆಶ್ವಾಸಗಳಲ್ಲಿ ಚಂಪೂರೂಪವಾಗಿ ಹೇಳಿರುವನು. ಕರ್ಣಪಾರ್ಯ ನೇಮಿಚಂದ್ರರು ಆಯ್ದುಕೊಂಡ ಪುರಾಣವಸ್ತುವೇ ಇದರ ವಸ್ತುವಾಗಿದೆ. ಈ ಕೃತಿಯಲ್ಲಿ ವರ್ಣನೆಗಳು ಮನೋಹರವಾಗಿ ಬಂದಿವೆ. ಕೆಲವೆಡೆ ಆತನ ಕವಿತೆಯಲ್ಲಿ ಚಮತ್ಕೃತಿ ಮತ್ತು ತಿಳಿಯಾದ ವಿಡಂಬನೆಯನ್ನು ಕಾಣಬಹುದು.

### ಉದ್ಯಾನದ ವರ್ಣನೆ

ತಳಿರ್ಗಳ ಕೆಂಪು ಸಂಪಗೆಯ ಕಂಪು ಮದಾಳಿಯಲಂಪು ಚೆಲ್ವಿನಿಂ
ಮಿಳಿರ್ವೆಳಗೊಂಬು ದಂಪತಿಗಳಿಂಬು ಮನೋಭವನಂಬು ಪೂ ।
ಗೊಳಗಳ ತೆಳ್ಪು ತೆಂಕಣೆಲರೊಳ್ಪು ಲತಾಳಿಯ ತಳ್ಪು ಕಾಮುಕ
ರ್ಕಳಿನಭಿನಂದನಂ ಬಗೆದು ನೋಡಲು ಮಿಂಚು ಮನೋನುಬಂಧನಂ ॥

ತಿಳಿಯಾದ ವಿಡಂಬನೆ—ಶಿಶುಪಾಲನು ಕೃಷ್ಣನನ್ನು ತೆಗಳುವುದು :

ಉಡಿದಯ್ ಭಂಡಿಯನೇನಗುರ್ವೊ ಮಗುಟ್ದುಂ ವಿಕ್ರಾಂತದಿಂ ಕಾಗೆಯಂ
ಪಿಡಿದಯ್ ಸಂಕಿಸದೆಟ್ಟು ಕಟ್ಟಿಬಡಗೂಂಟೆಂದಿಂತಿವಂ ನೋವಿನಂ ।
ಬಡಿದಯ್ ನೀರೊಳಗೊಳ್ಳಿಯಂ ಮಡಿಪಿದಯ್ ನೀಂ ಚೋದ್ಯಮೋ ಮತ್ತೆರ
ಟ್ಟಿಗಿಡುವಂ ಮಾಣ್ದಿರದೊತ್ತಿದಯ್ ಗಡಮಿದೇನಾಶ್ಚರ್ಯಮೋ ಸಾಹಸಂ ॥

ಜೀವಸಂಬೋಧನೆಯಲ್ಲಿ ೧೨ ಅಧಿಕಾರಗಳಿವೆ. ಒಟ್ಟಿನಲ್ಲಿ ೫೫೮ ಪದ್ಯಗಳೂ ಅಷ್ಟೇ ಗದ್ಯವಚನಗಳೂ ಇವೆ. ಇದರಲ್ಲಿ ಜೈನಮತದ ಸಾರವನ್ನೊಳಗೊಂಡ ದ್ವಾದಶಾನುಪ್ರೇಕ್ಷೆಗಳನ್ನು ಕವಿಯು ಜೀವನನ್ನುದ್ದೇಶಿಸಿದಂತೆ ಹೇಳಿದ್ದಾನೆ. ಇದು ಚಂಪೂ ರೂಪದಲ್ಲಿದೆ. ಸಂದರ್ಭೋಚಿತವಾದ ಕಥೆಗಳಿಂದ ಆಯಾ ತತ್ವಗಳ ಮಹತ್ವವನ್ನು ವಿಶದಪಡಿಸುತ್ತಾನೆ. ತನ್ನ ಕಾವ್ಯೋದ್ದೇಶವನ್ನು ಹೀಗೆ ಕೊಟ್ಟಿದ್ದಾನೆ :

ಅಱಿವಿಲ್ಲದೆ ತಕ್ಕಿಡೆಯೊಳ್
ತಱಿಸಲ್ಲದೆ ತೊಡರ್ದು ನಮೆವ ಜೀವಕ್ಕೆಲ್ಲಂ ।
ನೆಱೆಯೆ ಹಿತಮೆಂದು ಒಗೆದಿದ
ನಱಿಪುವೆನಱಿವಂತು ಜೀವಸಂಬೋಧನೆಯಂ ॥ (I–೭)

ಕವಿಯು ಯಾವ ಮೂಲಕ್ಕೂ ಹೋಗದೆ ಜೈನಧರ್ಮಶಾಸ್ತ್ರಗಳ ತತ್ವಗಳನ್ನು ತಾನರಿಯದೆ ಸ್ವತಂತ್ರವಾಗಿ ಹೇಳಲುದ್ಯುಕ್ತನಾದುದು ಒಂದು ನವೀನ ಸಾಧನೆಯೆನ್ನಬೇಕು. ಆ ದೃಷ್ಟಿಯಿಂದ ಈ ಗ್ರಂಥಕ್ಕೆ ಬೆಲೆಯಿದೆ.[1] ನೀತಿ ವೈರಾಗ್ಯಬೋಧಕ ಗ್ರಂಥವಾದರೂ ಪ್ರತಿಪಾದನಾಕ್ರಮದಲ್ಲಿ ಸ್ವಾರಸ್ಯವುಂಟು ; ಶೈಲಿಯಲ್ಲಿ ಲಾಲಿತ್ಯವುಂಟು, ಮಾಧುರ್ಯವುಂಟು ; ಮಾತ್ರವಲ್ಲ ಲೋಕಾನುಭವದ ಉದಾಹರಣೆಗಳೂ ನಾಣ್ಣುಡಿಗಳೂ ಈ ಗ್ರಂಥವನ್ನು ಜೈನೇತರರೂ ಪ್ರೀತಿಯಿಂದ ಪ್ರಯೋಜನಾರ್ಥವಾಗಿ ಓದುವಂತೆ ಮಾಡಿದೆ. ಒಂದೆರಡು ಉದಾಹರಣೆಗಳು :

---

[1] ತಮಿಳು ಭಾಷೆಯಲ್ಲಿಯೂ 'ಜೀವಸಂಬೋಧನೆ' ಎಂಬ ಮಣಿಪ್ರವಾಳದಲ್ಲಿ ರಚಿತವಾದ ಗ್ರಂಥವೊಂದಿದೆ. ಕನ್ನಡಜೀವಸಂಬೋಧನೆಗೂ ಇದಕ್ಕೂ ಬಹಳ ಹೋಲಿಕೆ ಇದೆ.

## ಅಧ್ರುವಾನುಪ್ರೇಕ್ಷೆ

ಒಡವೆಯನುಂಟುಮಾಡಿ ಒಟಿಕೊಯ್ಯನೆ ಧಾರ್ಮಿಕನಪ್ಪನಿಲ್ಲದಿಂ
ತೊಡರಿಪನೀಗಳೆಂಬ ಬಗೆ ಪೊಲ್ಲದು ಸಲ್ಲದು ಮೃತ್ಯುವೆಂಬವಂ ।
ಪಡೆವಿನಮಿರ್ಪನಲ್ಲನೆಡೆಯೊಳ್ ಪೊಡೆದಿಕ್ಕುಗುಮುಳ್ಳ ಪಾಂಗಿನೊಳ್
ತಡೆಯದೆ ಧರ್ಮದೊಳ್ ನೆಗೞ್ವುಮೆಂಬುದು ಗೋಸಣೆ ಜೈನಮಾರ್ಗ
ದೊಳ್ ॥ (೧೧)

ವ|| ಕಿಚ್ಚುರ್ಯಿತಗಳ್ದ ಮನೆಯೊಳ್ ಕೈಯ್ಗೆ ದೊರೆಕೊಂಡುದನೆ ಕೊಂಡು ಪೊಱಮಡದೆಲ್ಲಮಂ ಪೊಱಮಡಿಪ್ಪೆನೆಂದುಮಮೆೞ್ಸಿಟ್ಟು ಮಾಣ್ದೊಡಂ, ಪುಟ್ಟಿದಂದೆ ಮೃತ್ಯುತಗುಳ್ದ ಮಾನಸವಾೞಿೞೊಳ್ ನಟಿಯೆ ಪಡೆದೊಡಲ್ಲದೆ ಧರ್ಮಂಗೆಯ್ಯೆನೆಂದಿರ್ದೊಡಂ ಬೇಗಮಾತಂಗೆ ಕೇಡುಮಿತಂಗೆ ಸಾವುಮಾಗದಿರದೆಂದು ನಿಚ್ಚಮಱಿವರಿರ್ದು ಸಾೞಿಯುಂ ಕೇಳದಿರ್ಪರೆಂಬುದೇಂ ? ಜವಂ ಪೆಱವು ಗತಿಗಳೊಳೇನುದ್ದೆ ಸಮಾ ಮನುಷ್ಯಗತಿಯೊಳ್ ಪುಟ್ಟಿದವರ್ಗೆ ಕರಂ ಮುನಿದತಿ ವರ್ತಿಯಾಗಿ ಕೊಲಲ್ ಮಸುಗುವನೊ—

ನಾಣ್ನುಡಿಯನ್ನು ಅಳವಡಿಸಿಕೊಂಡು ಸುಲಭವಾದ ಭಾಷೆಯಲ್ಲಿ ಕೊಟ್ಟ ವ್ಯಾಖ್ಯಾನ ಬಹಳ ಚೆನ್ನಾಗಿರುತ್ತದೆ.

ಲೋಕಾನುಪ್ರೇಕ್ಷೆಯಿಂದ ಒಂದು ಉದಾಹರಣೆ :

ಪರಮಾಣು ಕಿಱಿದು ಗಗನಂ
ಪಿರಿದೆಂಬರ್ ಕಂಡರಿಲ್ಲ ದೀನತೆ ಕಿಱಿದಾ ।
ಪರಮಾಣುಗೆ ಗಗನಕ್ಕಂ
ಪಿರಿದಭಿಮಾನಮೆ ದಲೆಂದು ನುಡಿವರ್ ಕಂಡರ್ ॥ (೧೫)

ವ|| ಎಲ್ಲವಱಿಂ ಕಿಱಿದಪ್ಪ ಪರಮಾಣುವಿಂಗಮಾ ದೀನತೆ ಕಿಱಿದು ಎಲ್ಲವಱಿಂ ಪಿರಿದಪ್ಪಾಕಾಶಕ್ಕೆ ಅಭಿಮಾನಮೇ ಪಿರಿದು, ಎಂದು ಬಗೆದಳಿಪಂ ತೊಱಿದು ಪೆಂಪಂ ತಳೆವುದು. ಆತನೆನಸುಂ ದೋಷಮನಾಗಲೀಯದಿರ್ಪುದೇ ಕೆಂದೊಡೆ—ಇತ್ಯಾದಿ. ದೀನತೆ—ಅಭಿಮಾನಗಳನ್ನು ಇದಕ್ಕಿಂತ ಮಾರ್ಮಿಕವಾಗಿ ಯಾರಿಂದ ಮತ್ತು ಹೇಗೆ ಬೋಧಿಸಲು ಸಾಧ್ಯ ?

## ೧೬. ಪಾರ್ಶ್ವಪಂಡಿತ (೧೨೦೫)

ಪಾರ್ಶ್ವನಾಥಪುರಾಣವನ್ನು ಪಾರ್ಶ್ವಪಂಡಿತನು ಶಕವರ್ಷ ೧೧೪೪ರಲ್ಲಿ (ಕ್ರಿ. ಶ. ೧೨೨೨) ರಚಿಸಿದಂತೆ ಕೆಳಗಿನ ಪದ್ಯದಿಂದ ತಿಳಿದುಬರುತ್ತದೆ :

ಶಕವರ್ಷಂ ಚತುರಬ್ಧಿ ಚಂದ್ರ ಶಶಿಸಂಖ್ಯಂ ಚಿತ್ರಭಾನೂತ್ಥ ಕಾ
ರ್ತಿಕ ಶುದ್ಧೋದಿತ ಪಂಚಮೀ ಧಿಷಣವಾರಂ ಪೂಣ್ಕೆ ಸಂಪೂರ್ಣಮಾ ।
ಯ್ತು ಕವಿಪ್ರಸ್ತುತ ಪಾರ್ಶ್ವನಾಥಚರಿತಂ ಪಾರ್ಶ್ವೋದಿತಂಕೂಡನೆ
....................................................... ..............(XVI–೧೮೯)

೧೨೦೫ರಲ್ಲಿ ಇವನು ಒಂದು ಶಾಸನವನ್ನು ರಚಿಸಿದಂತೆ ಗೊತ್ತಾಗಿದೆ[1] ವಿದ್ವಾಂಸರ ಮನೆತನಕ್ಕೆ ಸೇರಿದವನೆಂಬುದಾಗಿ ಹೇಳಿಕೊಂಡಿದ್ದಾನೆ. ಇವನಿಗೆ 'ಸುಕವಿಜಯಮನೋಹರ್ಷಸಸ್ಯಪ್ರವರ್ಷಂ', 'ವಿಬುಧಜನಮನಃ ಪದ್ಮಿನೀಪದ್ಮ ಮಿತ್ರಂ'. 'ಕವಿಕುಲತಿಲಕಂ' ಇತ್ಯಾದಿ ಬಿರುದುಗಳಿದ್ದುವು. ಸವದತ್ತಿಯ ರಟ್ಟವಂಶದ ಕಾರ್ತವೀರ್ಯರಾಜನನ್ನು (೧೨೦೨–೧೨೨೦) ಹೊಗಳಿ ಆತನಲ್ಲಿ 'ಕವಿಕುಲತಿಲಕ'ನಾಗಿ ನೆಗಟ್ಟಿದಂತೆ ಹೇಳಿರುವನು. (XVI-೧೮೮)

ಪಾರ್ಶ್ವನಾಥಪುರಾಣ ೨೩ ನೆಯ ತೀರ್ಥಂಕರನ ಪವಿತ್ರ ಚರಿತ್ರೆ. ಪೌದನ ಪುರದ ಅರವಿಂದರಾಜನ ಮಂತ್ರಿ ವಿಶ್ವಭೂತಿಗೆ ಇಬ್ಬರು ಮಕ್ಕಳು. ಕಮಠ (ದುರಾಚಾರಿ) ಮತ್ತು ಮರುಭೂತಿ (ಸುಗುಣಿ). ಇವರ ಭವಾವಳಿಯ ಒಂಬತ್ತು ಕಥೆಗಳನ್ನು ಮನೋಹರವಾಗಿ ನಿರೂಪಿಸಲಾಗಿದೆ. ಕೊನೆಯಲ್ಲಿ ಮರುಭೂತಿ ಆನತಕಲ್ಪದಲ್ಲಿ ಆನತೇಂದ್ರನಾಗಿ ಹುಟ್ಟಿ ಅನಂತಸುಖವನನುಭವಿಸಿ ಆಯುರವಸಾನದಲ್ಲಿ ಕಾಶೀದೇಶದ ಅಶ್ವಸೇನ ಮಹಾರಾಜನ ಮಡದಿ ಬ್ರಹ್ಮ ದತ್ತಾ ಮಹಾದೇವಿಯ ಪುಣ್ಯೋದರದಲ್ಲಿ ಜಿನಶಿಶುವಾಗಿ ಜನಿಸುವನು. ಇವನೇ ಪಾರ್ಶನಾಥನೆಂಬುದಾಗಿ ದೇವೇಂದ್ರಾದಿಗಳಿಂದ ಕರೆಯಲ್ಪಟ್ಟನು. ಕೌಮಾ ರ್ಯದಲ್ಲೇ ವಿರಕ್ತನಾಗಿ ಪರಿನಿಷ್ಕ್ರಮಣಾದಿ ಕಲ್ಯಾಣಗಳ ತದನಂತರದಲ್ಲಿ ಕೇವಲಜ್ಞಾನವನ್ನು ಗಳಿಸಿ ಸಮ್ಮೇದ ಪರ್ವತದ ಶಿಖರದಲ್ಲಿ ಪ್ರತಿಮಾಯೋಗದ

---

1 ಕ. ಕ. ಚ., ಸಂ. ೧. ಪು. ೩೨೩.

ಲ್ಲಿದ್ದು ಮುಕ್ತಿಯನ್ನು ಪಡೆದನು. ಇದೇ ಪುರಾಣದೊಳಗಣ ಕಥಾಸಾರ. ಕಥೆಯನ್ನು ಸುಲಲಿತವಾಗಿಯೇ ಕವಿ ನಿರೂಪಿಸಿದ್ದಾನೆ.

೧೮ ವರ್ಣನೆಗಳ ಭಾರದಿಂದ ಕಾವ್ಯವು ಸಾಂಪ್ರದಾಯಿಕವಾಗಿ ಸಾಗುತ್ತಿದ್ದರೂ, ಅಲ್ಲಲ್ಲಿ ಪಾರ್ಶ್ವಪಂಡಿತನ ಪ್ರತಿಭೆ ಸ್ವತಂತ್ರವಾದ ಕಿರಣಗಳನ್ನು ಹೊಳೆಯಿಸದೆಯಿಲ್ಲ. ಪಾರ್ಶ್ವನು ಎಷ್ಟು ಚಂದವಾಗಿ ಪೂರ್ವಕವಿಗಳ ಕಾವ್ಯ ವಿಮರ್ಶೆಯನ್ನು ಒಂದೊಂದೇ ತೂಕವುಳ್ಳ ಮಾತಿನಲ್ಲಿ ಹೇಳಿರುತ್ತಾನೆ :

ಪಂಪನ ನುಣ್ಪುವೆತ್ತ ನುಡಿ ಪೊನ್ನನ ಬಿನ್ನಣದೋಜೆ ರನ್ನನೊ
ಳ್ಪಂ ಪುದಿದಿರ್ದ ಲಕ್ಷಣವಿಚಕ್ಷಣತೋನ್ನತಿ ಕಣ್ಣಮಯ್ಯನಿಂ ।
ಪಂ ಪುದಿದಿರ್ದ ಗೌರವಗುಣಂ ಗುಣವರ್ಮನ ದೇಸೆವೆತ್ತ ಮಾ
ತೇಂ ಪರಿಕಿಪ್ಪೊಡೀ ಕೃತಿಯೊಳುಂಟೆನೆ ಪೇಟ್ಪುದು ಪೇಟಲೊಲ್ವಂ ॥

(I–೭)

ಮಂದಮಾರುತನ ಶೈತ್ಯಸೌರಭ್ಯಮಾಂದ್ಯಗಳೆಂಬ ಮೂರು ಗುಣಗಳನ್ನು ಹೃದಯಂಗಮವಾಗಿ ವರ್ಣಿಸಿದ ತೆರನಿದು :

ಸಂದಣಿಸಿರ್ದ ಮಲ್ಲಿಗೆಯ ಮೊಲ್ಲೆಯ ಜಾದಿಯೆಸಳ್ಗಳೊಳ್ಕರಂ
ಸಂದ ಸುಗಂಧಮಂ ಬಿಡದೆ ತಂದು ಸರೋವರ ಸೀಕರಂಗಳಿಂ ।
ನಾಂದು ನವಪ್ರಸೂನ ತರುಶಾಖೆಗಳಲ್ಲಿಯೆ ನೀದು ಬಂದು ತಾಂ
ಮಂದ ಸಮೀರಣಂ ಕಳೆದುದಾ ಬಳದಧ್ವದೊಳಾದ ಖೇದಮಂ ॥

ಸಿರಿಮದವು ಬಲ್ಲವರನ್ನೇ ದುಶ್ಚರಿತ್ರಕ್ಕೆ ಇಳಿಸಿದರೆ ಮರುಳನು 'ಮರುಳಾಗಿ' ಮಾಡುವುದರಲ್ಲಿ ಆಶ್ಚರ್ಯವುಂಟೇ ಎನ್ನುವುದು ಎಷ್ಟು ಸಹಜ !

ಸಿರಿಯಿಂದೊಗೆವ ಮದು ಬ
ಲ್ಲರುಮಂ ಬಗೆಗಡಿಸಿ ದುಶ್ಚರಿತ್ರದೊಳೆಸೆಪಂ ।
ತಿರೆ ಮಾಟ್ಕು ಮೆಂದೊಡಿವನಂ
ಮರುಳಂ ಮರುಳಾಗಿ ಮಾಟ್ಪುದೇಂ ವಿಸ್ಮಯಮೋ ॥

ನಾಗಚಂದ್ರನು 'ಗುಣಹೀನನ ಸಿರಿಯಿಂದಂ ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ' ಎಂಬುದಾಗಿ ಹೇಳಿದರೆ ಕಮಠನನ್ನು ಕುರಿತು ಪಾರ್ಶ್ವನು :

ಗುಣಹೀನನೆನಿಪ ಕಮಠನ
ಪಣಮುಂ ಕುಲಮುಂ ಮಹೋನ್ನತಿಯನಿಂತೇಕ ।
ಕ್ಷಣಮಿರಿಸಲಾಱವದಱಿಂ
ಗುಣಮೆ ಮಹೋನ್ನತಿಗೆ ಕಾರಣಂ ಪೆಱತುಂಟೇ ॥

ದ್ವಿತೀಯಾಶ್ವಾಸದಲ್ಲಿ ಕವಿಯು ರಾಜನೀತಿಯನ್ನು ಕುರಿತು ಅನೇಕ ಮಹತ್ವದ ವಿಷಯಗಳನ್ನು ಪ್ರತಿಪಾದಿಸಿರುವುದು ಸುಂದರವಾಗಿದೆ. ವಜ್ರವೀರ್ಯನಿಗೆ ಮಂತ್ರಿಗಳು ಕೊಡುವ ಮಂತ್ರಾಲೋಚನೆಯಲ್ಲಿ ಸಾಮದ ಶ್ರೇಷ್ಠತೆಯನ್ನು ಹೀಗೆ ಹೇಳಿರುತ್ತದೆ :

ಸಾಮದೊಳಳವಡುವಡೆ ಸಂ
ಗ್ರಾಮಂ ರಿಪುನೃಪರೊಳೇಕೆ ಪಾಲ್ಸಕ್ಕರೆಯಿಂ ।
ದಾಮಯಮುಪಶಮಿಪೊಡೆ ವಿ
ದ್ಯಾಮಯ ಸೇವಿಸಲದೇಕೆ ಕಟುಕೌಷಧಮಂ ॥ (II–೪೦)

ಆದರೆ ಅಪನಯನಿಗೆ ದಂಡವೇ ಉಪಾಯ ; ಕಫಕ್ಕೆ ಕಟುಕತ್ರಯವಿದ್ದಂತೆ ಎಂದು ಹೇಳುತ್ತಾನೆ :

ನಯವಿದು ಸಾಮದಿನಪ
ನಯನಂ ದಂಡದೊಳೆಗಲ್ಚುದೆಂತೆನೆ ಕಟುಕ ।
ತ್ರಯದಿಂದಲ್ಲದೆ ಮಧುರ
ಪ್ರಯೋಗದಿಂ ಕಫಮನಾವನುಪಶಮಿಯಿಸುವಂ ॥ (II–೪೨)

ಪಾರ್ಶ್ವನು ಸಂಗೀತನೃತ್ಯಗಳಲ್ಲಿ ತನಗಿದ್ದ ಜ್ಞಾನವನ್ನು ಸಂದರ್ಭೋಚಿತವಾಗಿ ತೋರ್ಪಡಿಸಿದ್ದಾನೆ. ಇಂದೋಳ, ವಸಂತ ಮುಂತಾದ ರಾಗಗಳ ಮಾಧುರ್ಯವನ್ನು ಹಾಡಿದ್ದಾನೆ.

ಇಂದೋಳಗೀತದಾಗರ
ಮಿಂದುವಿನ ವಿಳಾಸಮಖಿಳಲತೆಗಳ ಕಾಂತಂ ।
ಸುಂದರಿಯರ ಸುರತಸುಖಂ
ಬಂದುದು ಮಧುಮಾಸಮತನು ವಿಭವಾವಾಸಂ ॥ (II-೯೦)

ನಾಯಕೀ ಮಧುರ ಸಂಗೀತವು ಮನಸ್ಸನ್ನು ಮರುಳುಗೊಳಿಸಿತಂತೆ :

ಇಂಚರವಿಶ್ರಾಂಟಿಪಂತವ್ಯತಮಂ ಕಿವಿಯಿಂ ಸವಿಯಿಪ್ಪನುಣ್ಪನಿಂ
ದಂಚೆಯ ತುಪ್ಪುಳಂ ತಿರಿಪಿದಂತೆವೊಲಾ ತಿರಿಪೆಯ್ದೆ ಮೆಲ್ಪನಾ ।
ಳ್ದಂ ಚಿರಮಲ್ಲದೊಪ್ಪೆ ವಳಿ ನಲ್ಲಳ ಮೆಯ್ವಳಿಯಂತೆ ರಾಗಮಂ
ಸಂಚಿಸೆ ನಾಯಕೀ ಮಧುರಗೇಯಮದೇಂ ಮನಮಂ ಮರುಳ್ಚಿತೋ ॥

(X–೪೮)

೧೨ನೆಯ ಆಶ್ವಾಸದಲ್ಲಿ ೯ರಿಂದ ೩೧ರ ವರೆಗಿನ ಪದ್ಯಗಳಲ್ಲಿ ಸಂಗೀತ ನೃತ್ಯಗಳ ವರ್ಣನೆ ತುಂಬ ಚೆನ್ನಾಗಿದೆ.

ನರ್ತಕಿ ಎರಚಿದ ಪುಷ್ಪಾಂಜಲಿ :

ವನಲತೆ ಪಲ್ಲವ ಪುಟದಿಂ
ಮನಸಿಶಯಂಗರ್ಘ್ಯಮೀವವೊಲ್ ಧವಳ ವಿಳೋ ।
ಚನರುಚಿನಿಭ ಪುಷ್ಪಾಂಜಳಿ
ಯನಿತ್ತು ನರ್ತಕಿ ವಿಚಿತ್ರವೆನೆ ನರ್ತಿಸಿದಳ್ ॥ (XII–೨೫)

ಶಿಶಿರಋತುವನ್ನು ವರ್ಣಿಸುವ ಈ ಪದ್ಯವು ಬಹಳ ಮನೋಜ್ಞವಾಗಿದೆ :

ಜಗಕಪಕಾರಿ ತೀವ್ರನೆನಿಸಿರ್ದಧಿಕಾರಿ ನಿರಾಕುಳಂ ಕುಟುಂ
ಬಿಗಳ ಧನಂಗಳಂ ಕವರ್ದು ಮೇಲುದಮಂ ಸುಗಿವಂತೆ ವೃಕ್ಷ ರಾ ।
ಜಿಗಳ ನವಪ್ರಸೂನಫಳಮಂ ಶಿಶಿರಾನಿಳನೀಟ್ಡಿ ಕೊಂಡು ನೆ
ಟ್ಟಗೆ ನೆಲಸಿರ್ದ ಪಣ್ಣೆಲೆಯನೆಯ್ದೆ ಕಟಿಲ್ಚಿದುದೆಲ್ಲಿ ನೋಟಿಕ್ಕೊಡಂ ॥

(VII–೧೧೫)

ಇಲ್ಲಿ ಕವಿಸಮಯಾಂತರ್ಗತವಲ್ಲದ ಸಹಜಸುಂದರವರ್ಣನೆ ಇರುತ್ತದೆ. ರನ್ನನು ಚಿತ್ರಿಸಿದ ದುರ್ಯೋಧನನು ಭೀಮನ ಮೂದಲಿಕೆಯಿಂದ 'ನೀರೊಳಗಿರ್ದುಂ ಬೆಮರ್ತರೆ, ಇಲ್ಲಿ ಜಲಕೇಳಿಯ ಸಂದರ್ಭದಲ್ಲಿ ಮತ್ಸರಿಸಿದ ಸವತಿಯೊಬ್ಬಳು ಅಧಿಕ ರೋಷದಿಂದ ನೀರೊಳಗಿರ್ದು ಬೆಮರ್ತಳಂತೆ !

ವಾರಿಯ ಬಟಿಯನೆ ಸವತಿಯ
ತೋರಿದವೆನಿಸಿರ್ದ ಮೊಲೆಯ ಮೇಲಧಿಪನ ಕ ।

ಣ್ಣೀರಂತೆ ಪರಿದು ನೆಲಸಿರೆ
ನೀರೊಳಗಿರ್ದುಂ ಬೆಮರ್ತರ್ಅಳೊರ್ವಳ್ ಮುನಿಸಿಂ ॥ (IX-೧೩೭)

ಪಾರ್ಶ್ವಪಂಡಿತನು ಉಭಯ ಭಾಷೆಗಳಲ್ಲಿ ಪಳಗಿದ ಸವ್ಯಸಾಚಿಯೆನ್ನಬಹುದು. ಕೆಲವು ಸಲ ಸಂಸ್ಕೃತಪ್ರಚುರವಾದ ಶೈಲಿಯಿಂದ ಸಾಗುವನು.

ಲವಣಸಮುದ್ರ—

ಉರಗೇಂದ್ರಾಭಿಮತಾಂತರಂಗ ಬಹಿರಂಗಶ್ರೀಯುತಂ ವ್ಯಕ್ತರ
ತ್ನರುಚಿವ್ಯಾವೃತ ನಿಷ್ಕಳಂಕ ಹೃದಯಂ ನಿತ್ಯಂ ಗಭೀರಂ ಸುರಾ ।
ಸುರಸೇವ್ಯಂ ಕಮಠಪ್ರಣೂತವಿಭವಂ ಶ್ರೀಪಾರ್ಶ್ವತೀರ್ಥೇಶನಂ
ತಿರೆ ಪೂರ್ಣಂ ಲವಣಾರ್ಣವಂ ಸೊಗಯಿಕುಂ ನೀಲಪ್ರಭಾಡಂಬರಂ ॥
(I–೧೦೫)

ಸಂಸ್ಕೃತ ವಾತಾವರಣಕ್ಕೆ ಹಿತವಾದ ಶ್ಲೇಷೆಯಿಂದ ಶ್ರೀ ಪಾರ್ಶ್ವ ತೀರ್ಥಂಕರರನ್ನು ಲವಣಾರ್ಣವಕ್ಕೆ ಹೋಲಿಸಿರುವುದು ಸೊಗಸಾಗಿದೆ.

ಪಾತ್ರರಚನೆ ಸನ್ನಿವೇಶರಚನೆಗಳಲ್ಲಿ ಪಾರ್ಶ್ವನು ತನ್ನ ಸಾಮರ್ಥ್ಯವನ್ನು ಅಷ್ಟು ವ್ಯಕ್ತಪಡಿಸಿರುವುದಿಲ್ಲವೆಂದೇ ಹೇಳಬೇಕು. ಆದರೆ ಕಥನಕೌಶಲದಲ್ಲಿ ತುಂಬ ಸಿದ್ಧಿಪಡೆದ ಕವಿ. ಸಹಜತೆ ಹೆಚ್ಚಾಗಿರುವ ಅಲಂಕಾರಗಳನ್ನೂ ನೀತಿಯ ಮಾತುಗಳನ್ನೂ ಗಾದೆಯ ಮಾತುಗಳನ್ನೂ ಯಥೋಚಿತವಾಗಿ ಬಳಸಿರುವುದರಿಂದ ಕೃತಿಗೊಂದು ಕಳೆ ಬಂದುದುಂಟು. ಆತನು ಪ್ರಯೋಗಿಸಿದ ಕೆಲವು ಸ್ವಾರಸ್ಯವಾದ ಮಾತುಗಳು—

೧) ಸಾವಂಗೆ ಸಮುದ್ರದಗಲಮೇಂ ನೀಳಮದೇಂ (III–೬೨)
೨) ಮೂಗಿನೊಳುಟಿವಂಗೆ ಕಟಿವಂ ಕುಡುವಂತೆ (III–೮೯ ವ)
೩) ತೂಂಕಡಿಪ್ಪವರನೊಪ್ಪುವ ಪಾಸಿನ ಮೇಲೆ ನೂಂಕಿದಂತೆ (III–೧೦೩)
೪) ಪೊಡೆವಡಲ್ ಪೋಗೆ ದೇಗುಲಂ ಮೇಲೆಗೆಡೆದುದು (IV–೫೫ ವ)
೫) ಬೇವಿನ ಮರನಂ ಕೈಪೆಸೊರೆ ಪೊರ್ದುವಂತೆ (IV–೬೧ ವ)
೬) ಬಿಣ್ಗುಂಡಿಕ್ಕಿದ ಭೈತ್ರಕ್ಕೆಣೆಯಾಗಿ ಕಣ್ಗೊಳಿಸುಗುಂ (VII–೩೯)

(ಇಲ್ಲಿ ಹಡಗಿಗೆ ಬಿಣ್ಗುಂಡನ್ನು ಇಕ್ಕುವುದು—Anchor ಹಾಕುವುದು ಎಂದು ಹೇಳಿದೆ.)

೭) ಉಮಿಗುಟ್ಟಿ ಕಯ್ಪುಗುಳನಾಂತುದು (XV–೧೯)
೮) ಒರ್ವನ ಪುಣ್ಯದ ಫಲವಂ ಪಲರನುಭವಿಸುವರ್ (XV–೯೯)

ಈ ರೀತಿಯಾಗಿ ಪಾರ್ಶ್ವಪಂಡಿತನು 'ವಿಬುಧಜನಮನಃಪದ್ಮಿನೀಪದ್ಮ ಮಿತ್ರ' ನಾಗಿದ್ದಂತೆ ತಿಳಿಯುವುದು.

### ೧೭. ಜನ್ನ (೧೨೦೯)

ಜನ್ನನು ಬಲ್ಲಾಳನಿಂದ (೧೧೭೩–೧೨೨೦) ಮನ್ನಿಸಲ್ಪಟ್ಟು 'ಕವಿಚಕ್ರ ವರ್ತಿವೆಸರನ್ನು' ತಳೆದವನು. ಕನ್ನಡ ಕಾವ್ಯಸಾಮ್ರಾಜ್ಯದಲ್ಲಿ ಕವಿ ಚಕ್ರವರ್ತಿ ಎಂಬ ಬಿರುದನ್ನು ಪಡೆದವರು ಜನ್ನನಲ್ಲದೆ ಇಬ್ಬರು—ಪೊನ್ನ ಮತ್ತು ರನ್ನ. ಬೇರಾವ ಕನ್ನಡ ಕವಿಗಳಲ್ಲೂ ಇಲ್ಲದ ಒಂದು ವೈಶಿಷ್ಟ್ಯ ಜನ್ನನಲ್ಲಿದೆ. ಅದು ಅವನ ಕವಿತೆಯಲ್ಲಿ ಕಂಡುಬರುವ ಒಂದು ವಿಶಿಷ್ಟವಾದ 'ನಯ' ಎನ್ನಬಹುದು. ಒಂದು ಶಬ್ದ ಹೆಚ್ಚಿಲ್ಲ, ಒಂದು ಕಡಿಮೆಯಿಲ್ಲ ಎಂಬಂತಹ ಹಿತಮಿತವಾದ ಕ್ರಮದಲ್ಲಿ ಉಚಿತ ಪದಪ್ರಯೋಗ ಮಾಡುವುದರಲ್ಲಿ ಜನ್ನನದು ಸಿದ್ಧಹಸ್ತ. ಪದಗಳು ರಚನೆಯಲ್ಲಿ ಒಂದಕ್ಕೊಂದು ಹೊಂದಿಕೆಯಾಗಿ ಮೈತ್ರಿಯನ್ನು ಪಡೆದು ರಮಣೀಯವಾದ ಅರ್ಥವನ್ನು ಕೊಡುವುವು. ಹೀಗೆ ಮಾಡುವಲ್ಲಿ ಅನಾವಶ್ಯಕ ವಾಗಿ ಒಂದೇ ಒಂದು ಕ್ಲಿಷ್ಟಪದವನ್ನು ಪಾಂಡಿತ್ಯಪ್ರಚುರತೆಗಾಗಿ ಜನ್ನನು ಪ್ರಯೋಗಮಾಡನು. ಸಮುಚಿತವಾದ ಸುಂದರ ಶಬ್ದಗಳು ಲೀಲಾಜಾಲ ವಾಗಿ ಜನ್ನನ ಮುಖದಿಂದ ಹೊರಹೊಮ್ಮುವಂತೆ ತೋರುತ್ತವೆ. ಇಂತಹ ಪ್ರಸಾದಪ್ರಸನ್ನತೆಗಳು ಅವನ ವೈಶಿಷ್ಟ್ಯ; ಅವನ ಕವಿತೆಯ 'ನಯ'. ಆದು ದರಿಂದಲೇ ಮಧುರನು "ನೇಮಿಜನ್ನಮರಿರ್ವರೆ ಕರ್ಣಾಟಕೃತಿಗೆ ಸೀಮಾಪುರು ಷರ್" ಎಂದಿರುವನು. ಇಲ್ಲಿ ನೇಮಿಯ ವಿಷಯದಲ್ಲಿ ಮಧುರನು ಸ್ವಲ್ಪ ಪಕ್ಷ ಪಾತ ವಹಿಸಿದ್ದಾನೆ ಎಂದು ಹೇಳುವವರಿರಬಹುದು. ಆದರೆ ಜನ್ನನ ಮಟ್ಟಿಗೆ ಈ ಪ್ರಶಂಸನೆ ಸಾರ್ಥಕ್ಯವೆಂಬುದಾಗಿ ರಸಜ್ಞರು ಒಪ್ಪದಿರಲಾರರು.

ಜನ್ನನು ವಿದ್ವಾಂಸರ ಮತ್ತು ಅಧಿಕಾರಿಗಳ ಮನೆತನಕ್ಕೆ ಸೇರಿದವನು. ತಂದೆ ಹೊಯ್ಸಳ ನಾರಸಿಂಹನಲ್ಲಿ (೧೧೪೧–೧೧೭೩) ಕಟಕೋಪಾಧ್ಯಾಯ ನಾಗಿದ್ದನು. ಆತನ ಪತ್ನಿ ದಂಡನಾಯಕನ ಮಗಳು; ಗುರು ಎರಡನೆಯ ನಾಗ

ವರ್ಮನು ; ಸೂಕ್ತಿಸುಧಾರ್ಣವಕರ್ತೃವಾದ ಮಲ್ಲಿಕಾರ್ಜುನನು (೧೨೪೫) ಇವನ ಭಾವ ; ವೈಯಾಕರಣ ಕೇಶಿರಾಜ (೧೨೬೦) ಇವನ ಸೋದರಳಿಯ. ತಾನು 'ನಾಟ್ಪ್ರಭುಜನಾರ್ದನದೇವ' ಎಂಬುದರಿಂದ ಹೊಯ್ಸಳ ರಾಜನಲ್ಲಿ ಜನ್ನನು ಆಸ್ಥಾನಕವಿಯೂ ದಂಡಾಧೀಶನೂ ಆಗಿದ್ದನೆನ್ನಬಹುದು.

ಜನ್ನನು ಬರೆದ ಕೃತಿಗಳಲ್ಲಿ ಯಶೋಧರಚರಿತೆಯೂ ಅನಂತನಾಥಪುರಾಣವೂ ದೊರೆತಿವೆ. ಜನ್ನವಿರಚಿತ ಶಾಸನಗಳೂ ಕೆಲವು ಸಿಕ್ಕಿವೆ. ಇವನಿಗೆ ಸಾಹಿತ್ಯರತ್ನಾಕರ, ಕವಿಭಾಳಲೋಚನ, ಕವಿಚಕ್ರವತಿ ಮುಂತಾದ ಬಿರುದುಗಳಿವೆ.

ಕೆಳಗಿನ ಒಂದು ಪದ್ಯದಲ್ಲಿ ಪೂರ್ವಕವಿಗಳನ್ನು ಸ್ತುತಿಸುತ್ತಾ ಅವರವರಲ್ಲಿ ಆತ ಕಂಡುಕೊಂಡ ವೈಶಿಷ್ಟ್ಯವನ್ನು ಎಷ್ಟು ನಿರ್ದಿಷ್ಟವಾಗಿ ಹೇಳಿರುವನೆಂಬುದನ್ನು ಗಮನಿಸಬಹುದು :

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ।
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧಮಿಾ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ॥

## ಯಶೋಧರಚರಿತೆ

ಇದು ಜನ್ನನ ಮೊದಲನೆಯ ಕೃತಿಯೆಂಬುದಾಗಿ ತಿಳಿದುಬರುತ್ತದೆ. ಹೊಯ್ಸಳ ವೀರಬಲ್ಲಾಳನ (೧೧೭೩–೧೨೨೦) ಕಾಲದ ಶುಕ್ಲ ಸಂವತ್ಸರದಲ್ಲಿ (೧೨೦೯) ರಚಿತವಾಯಿತು. ಬಹಳ ಸುಂದರವಾದ ಪುಟ್ಟ ಕಾವ್ಯ. ಚಂಪೂ ರೂಪವಲ್ಲ ; ಎಲ್ಲ ಕಂದವೃತ್ತಗಳೇ ಎನ್ನಬಹುದು. (ಅವತಾರಾಂತ್ಯದಲ್ಲಿ ಒಂದೆರಡು ವೃತ್ತಗಳು ಬಂದಿರುತ್ತವೆ.) ಒಟ್ಟನಲ್ಲಿ ೪ ಅವತಾರಗಳಿವೆ ; ೩೧೧ ಪದ್ಯಗಳಿವೆ. ವಾದಿರಾಜನ ಸಂಸ್ಕೃತ ಯಶೋಧರಚರಿತೆಯನ್ನನುಸರಿಸಿ ಈ ಕೃತಿರಚನೆಯಾಗಿರಬೇಕೆನ್ನುತ್ತಾರೆ. ಜನ್ನನ ಹೇಳಿಕೆಯಂತೆ ಈ ಕಥೆ ಸಂಸ್ಕೃತ ಪ್ರಾಕೃತಗಳಲ್ಲಿ ಪ್ರಸಿದ್ಧ ; ಅವನು ಆ ಕೃತಿಗಳನ್ನು ನೋಡಿಕೊಂಡಿರಬೇಕು.

ಕ್ಷಿತಿಯೊಳ್ ಸಂಸ್ಕೃತದಿಂ ಪ್ರಾ
ಕೃತದಿಂ ಕನ್ನಡದಿನಾದ್ಯರಾದೀ ಕೃತಿಯಂ ।

ಕೃತಿ ಮಾಡಿದರವರ್ಗಳ ಸ
ನ್ಮತಿ ಕೆಯ್ಗುಡುಗೆಮಗೆ ಸರಸಪದಪದ್ಧತಿಯೊಳ್ ॥ (I–೫)

ಮಾರಿದತ್ತನೆಂಬ ರಾಜನು ಚಂಡಮಾರಿಗೆ ಬಲಿಕೊಡುವುದಕ್ಕಾಗಿ ಅಭಯರುಚಿ ಅಭಯಮತಿ ಎಂಬ ಅರಸುಮಕ್ಕಳನ್ನು ಹಿಡಿದು ನಿಲ್ಲಿಸಿದಾಗ ಅವರು ತಮ್ಮ ಪೂರ್ವಕಥೆಗಳನ್ನು ಹೇಳುವರು. ಅದರಲ್ಲಿ ಯಶೋಧರ ರಾಜನ ಪಟ್ಟದ ಮಹಿಷಿ ಅಮೃತಮತಿಯು ಅಷ್ಟಾವಂಕನೆಂಬ ಹೊಲಸು ಮಾವುತನ ಹಾಡಿಗೆ ಮರುಳಾಗಿ ಶೀಲವನ್ನು ಕೆಡಿಸಿಕೊಂಡುದರಿಂದ ಹೇಗೆ ಆ ಜೀವಗಳಲ್ಲಿ ಪರಿಣಾಮಗಳಾದುವು, ಯಶೋಧರರಾಜನೂ ಆತನ ತಾಯಿ ಅಮೃತಮತಿಯೂ ಬರಿಯ ಹಿಟ್ಟಿನ ಕೋಳಿಯನ್ನು ಬಲಿಕೊಡುವುದಕ್ಕೆ ಯೋಚಿಸಿ ಹಿಂಸಾಕಲ್ಪನೆ ಮಾತ್ರ ಮಾಡಿದುದರಿಂದ ಹೇಗೆ ಭವಾವಳಿಯ ಮೂಷೆಗಳಲ್ಲಿ ನವೆದರು ಇತ್ಯಾದಿ ನಿರೂಪಿಸಲ್ಪಟ್ಟಿವೆ. ಇದನ್ನು ಕೇಳಿದ ಮಾರಿದತ್ತರಾಜನು ಆ ಮಕ್ಕಳನ್ನು ಬಿಡುಗಡೆ ಮಾಡಿ ಅಹಿಂಸಾವ್ರತವನ್ನು ಕೈಗೊಂಡು ತಪಸ್ಸಿಗೆ ನಡೆದನು. ಇದೇ ಯಶೋಧರಚರಿತೆಯ ಕಥಾ ಸಾರಾಂಶ. ಈ ಕಥೆ ಜೈನರಲ್ಲಿ ಜೀವದಯಾ ಷ್ಟಮಿ ಕಥೆ ಎಂಬುದಾಗಿ ಪ್ರಸಿದ್ಧವಾಗಿದೆ.

ಕಥಾನಿರೂಪಣೆಯಲ್ಲಿ ಜನ್ನನ ಕೌಶಲವು ಅದ್ವಿತೀಯವಾಗಿದೆ. ತನ್ನದೇ ಆದ ರೀತಿಯಲ್ಲಿ ವಾದಿರಾಜನ ಸಂಸ್ಕೃತ ಮೂಲವನ್ನು ಅಳವಡಿಸಿಕೊಂಡು, ಮೂಲಕ್ಕೆ ಅನ್ಯಾಯವಾಗದಂತೆ, "ಮೂಲದಲ್ಲಿ ಅನಗತ್ಯವೆಂದು ತೋರಿದ ಒಂದೆರಡು ಅಂಶಗಳನ್ನು ಬಿಟ್ಟಿದ್ದಾನೆ. ಭಾವಪುಷ್ಟಿಗಾಗಿಯೂ ಅರ್ಥ ಪ್ರಸಾರ ಕ್ಕಾಗಿಯೂ ಮೂಲದಲ್ಲಿಲ್ಲದ್ದನ್ನು ಹೊಸದಾಗಿ ಸೇರಿಸಿದ್ದಾನೆ.[1] ಈ ಕೃತಿಯು ಸರ್ವಾಂಗ ಸುಂದರವಾದರೂ ಕಾವ್ಯದೃಷ್ಟಿಯಿಂದ ಇದರ ರಸಸ್ಥಾನದ ಕೇಂದ್ರ ಅಮೃತಮತಿಯ ಕಾಮಾಂಧತೆ ಮತ್ತು ಅದರ ವಿಕಾರಗಳು. ಇವು ಅಮೃತಮತಿಯನ್ನು ಅಧಃಪಾತಾಳಕ್ಕೆ ಕೆಡಹಿದುವು. ಮುಂದೆ "ಯಶೋಧರನ ಸಂಯಮ, ಉದಾತ್ತತೆ, ಧರ್ಮಸಂಕಟ, ದೌರ್ಬಲ್ಯ, ಯಶೋಮತಿಯ ಸಂಪ್ರದಾಯಮೂಢತೆ, ಈ ಮನುಷ್ಯಸ್ವಭಾವದ ಏಳು ಬೀಳುಗಳನ್ನು ಸಮ ರ್ಪಕವಾಗಿ ಚಿತ್ರಿಸುತ್ತ ಅವನು (ಜನ್ನನು) ತೀವ್ರವಾಗಿ ಮನವರಿಕೆಯಾಗುವ

---

[1] ಕೆ. ವಿ. ರಾಘವಾಚಾರ್ ಯಶೋಧರಚರಿತೆಯ ಸಂಗ್ರಹ, ಪು. ೩೫.

ಕಥೆಯನ್ನು ಸರಸರನೆ ಹೆಣೆದಿದ್ದಾನೆ.[1] ಯಶೋಧರ ಅಮೃತಮತಿಯ ಪಾತ್ರ ಚಿತ್ರಣದಲ್ಲಿಯೂ ಜನ್ನನು ಅತ್ಯಂತ ಯಶಸ್ವಿಯಾಗಿದ್ದಾನೆ ಎನ್ನಬಹುದು. ಕೆಲವು ಉತ್ತಮ ನಿದರ್ಶನಗಳು—

ಅಮೃತಮತಿ ರಾಣಿಯು ಅಪಾತ್ರನಾದ ಅಷ್ಟಾವಂಕನನ್ನು ಮೋಹಿಸಿದ ಳೆಂಬುದನ್ನು ಹೀಗೆ ಹೇಳುತ್ತಾನೆ :

ಅಮೃತಮತಿಯೆತ್ತ ರೂಪಾ
ಧಮನಷ್ಟಾವಂಕನೆತ್ತ 'ಚಿತ್ರಮಪಾತ್ರೇ ।
ರಮತೇ ನಾರೀ' ಎಂಬುದು
ಸಮನಿಸಿದುದು ಬೆಂದ ಬಿದಿಗೆ ಕಣ್ಣೆಲ್ಲಕ್ಕುಂ ॥ (II–೩೪)

ಸಖಿಯು ಅಷ್ಟಾವಂಕನ ಅಸಹ್ಯರೂಪವನ್ನು ವರ್ಣಿಸಿದರೆ, ಪ್ರತಿಯೊಂದು ಕೊರತೆಗೂ ಕಾಮಾಂಧಳಾದ ರಾಣಿಯ ಸಂತೋಷದ ಸಮಾಧಾನವಿದು :

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ।
ಸ್ಮರಚಾಪಮನಿಟಿಕೆಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ॥ (II–೩೪)

ತಡವಾಗಿ ಬಂದಳೆಂದು ಅಮೃತಮತಿಗೆ ಅಷ್ಟಾವಂಕನು ಮುನಿಸಿನಿಂದ ಒದೆಯುವನು :

ತೋರಮುಡಿವಿಡಿದು ಕುಡಿಯಂ
ನಾರಂ ಸದೆವಂತೆ ತಡೆದು ಬೀಟೆಯ ಕಾಲಿಂ ।
ಬಾರೇಟಿತಿ ಬದಿಯನೊದೆದೊಡೆ
ಕೇರೆ ಪೊರಳ್ವಂತೆ ಕಾಲವೇಲೆ ಪೊರಳ್ದಳ್ ॥ (II–೫೦)

ಆ ಹಿಂಸೆಯನ್ನನುಭವಿಸುತ್ತಾ ಜಾರೆಯಾದ ರಾಣಿಯು ಕೊಡುವ ಉತ್ತರವು ಯಾವ ಕುಲಟೆಯನ್ನಾದರೂ ನಾಚಿಸುವಂತಿದೆ :

---

1 ಕ. ಸಾ. ಚ., ಪು. ೨೦೪.

ತಡವಾದುದುಂಟು ನಲ್ಲನೆ
ಬಿಡು ಮುಳಿಯದಿರರಸನೆಂಬ ಪಾತಕನೆನ್ನಂ ।
ತೊಡೆಯೇಱಿಸಿ ಕೇಳಿಕೆಯಾ
ದೊಡೆ ನೋಡುತ್ತಿರ್ದನುಂತೆ ನಿಲಲಣ್ಮುವೆನೇ ॥

ಕಿವಿಸವಿ ದನಿ, ಕಣ್ಸವಿ ರೂ
ಪವಧರಿಸಲೆ ಗಜವೆಡಂಗ ನೀನುಂಟಿದೊಡೆ ಸಾ ।
ವವಳೆನಗೆ ಮಿಕ್ಕ ಗಂಡರ್
ಸಮಸೋದರರೆಂದು ತಿಳಿಪಿದಳ್ ನಂಬುಗೆಯಂ ॥

(II–೫೧, ೫೨)

ಕಾಮವಿಕಾರವು ಎಂಥ ಅನರ್ಥಕಾರಿ ; 'ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ' ಎಂಬ ಮಾತು ಅಕ್ಷರಶಃ ನಿಜವಾಯಿತು.

ಅಕಂಪನ ಮುನಿಗಳ ಬೋಧನೆ ಎಂಬುದು ಜೈನತತ್ವ ಭಕ್ತಿ ಅನುಭವಗಳ ರಸಪಾಕದಂತಿದೆ. ಎಷ್ಟು ಸುಲಭವೂ ಸ್ಪಷ್ಟವೂ ಆದ ನಿರ್ವಚನ !

## ಆತ್ಮನ ನಿಜಸ್ವರೂಪ

ಏದೊರೆಯನಾತ್ಮನೆಂದೊಡೆ
ನಾದಿಯನಂತಂ ನಿರತ್ಯಯಂ ಚಿನ್ಮಯ ನಿಃ ।
ಪ್ರಾದೇಶಿಕನೆಂದಾತನು
ಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ ॥ (IV–೨೬)

ಕಲ್ಲೊಳ್ ಪೊನ್ ಪಾಲೊಳ್ ಘೃತ
ಮಿಲ್ಲೆನವೇಡುಂಟು ದೇಹದೊಳಗಾತ್ಮನದೇ ।
ಕಿಲ್ಲ ಕುರುಡಂಗೆ ತೋಱದೊ
ಡಿಲ್ಲಪ್ಪುದೆ ವಸ್ತು ಭೇದಿಪಂಗಾತ್ಮನೊಳಂ ॥ (IV–೨೭)

## ಸಮ್ಯಕ್ತ್ವವೆಂದರೇನು ?

ಕೇವಲ ವಿಬೋಧನೇತ್ರಂ
ದೇವನೆ ಪರಮಾತ್ಮನಾಗಮಂ ತದ್ವಚನಂ ।

ಜೀವದಯೆ ಧರ್ಮಮೆಂಬೀ
ಭಾವನೆಯುಂ ನೆಱೆಸೆಂಬುವುದೆ ಸಮ್ಯಕ್ತ್ವಂ ॥ (IV–೩೦)

## ಮೊತ್ತಮೊದಲನೆಯ ಅಣುವ್ರತ

ಕೊಲಲಾಗದು ಪುಸಿಯಾಗದು
ಕಳಲಾಗದು ಪೆಱರ ಪೆಂಡಿರೊಳ್ ತನ್ನ ಮನಂ ।
ಸಲಲಾಗದು ತೀರದುದ
ಕ್ಕಲವರಲಾಗದು ಪರಶ್ರೀಯಂ ಬಯಸುವವಂ ॥ (IV–೩೧)

## ದಯಾಮೂಲಂ ಧರ್ಮಂ

ಅದಱಿಂ ತನ್ನಂತಿರೆ ಬಗೆ
ವುದು ಪೆಱರಂ ಪ್ರಾಣಹಿಂಸೆಯಂ ಮಾಡಲ್ವೇ ।
ಡ ದಯಾಮೂಲಂ ಧರ್ಮಂ
ಪದುಳಿಸಿ ಕೇಳ್ಮಗನೆ ಹಿತಮಿದುಭಯಭವಕ್ಕಂ ॥ (IV–೩೩)

ಅನಂತನಾಥ ಪುರಾಣವು ಜನ್ನನ ಮತ್ತೊಂದು ಉತ್ತಮವಾದ ಚಂಪೂಕೃತಿ. ಇದರಲ್ಲಿ ಬಂದಿರುವ 'ಶಕ ಸಂವತ್ಸರಮುಂದು ಸಾಸಿರದ ನೂಱ ಯ್ವತ್ತೆರಟಿಪ್ ಸಲ್ವಿನಂ ವಿಕೃತಾಬ್ದಂ ಬರೆ........' ಎಂಬ ಪದ್ಯದಿಂದ ಈ ಪುರಾಣವು ಕ್ರಿ. ಶ. ೧೨೩೦ಕ್ಕೆ ಸರಿಯಾದ ವಿಕೃತಿಸಂವತ್ಸರದಲ್ಲಿ ರಚಿತವಾಯಿ ತೆಂದು ಗೊತ್ತಾಗುತ್ತದೆ. ಅದು ಹೊಯ್ಸಳ ವೀರನರಸಿಂಹನ (೧೨೨೦–೧೨೩೫) ಆಳ್ವಿಕೆಯ ಕಾಲ. ಚಂಪೂಕವಿ ವೃಷಭರ್ಕಳ ದಾರಿಯಲ್ಲಿ ೧೪ನೆಯ ತೀರ್ಥಂಕರನಾದ ಅನಂತನಾಥನ ಚರಿತವನ್ನು ೧೪ ಆಶ್ವಾಸಗಳಾಗಿ ಕವಿ ಇಲ್ಲಿ ಹೇಳಿರುತ್ತಾನೆ. 'ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ ಪೇಟ್ದಪೆಂ ಚರಿತಪುರಾಣಮಂ' (I–೩೭) ಎಂದು ಜನ್ನನು ಮಾಡಿದ ಪ್ರತಿಜ್ಞೆ ಬಹಳಮಟ್ಟಿಗೆ ಪೂರಯಿಸಲ್ಪಟ್ಟಿದೆ. ಅನಾವಶ್ಯಕವಾದ ಅಲಂಕಾರಗಳೂ ವರ್ಣನೆಗಳೂ ಇಲ್ಲಿ ಬಂದಿಲ್ಲ ; ನಿರಾಡಂಬರವಾಗಿ ಕಥನವು ಸಾಗುವುದು ; ಜನ್ನನ ವಿಶಿಷ್ಟವಾದ 'ನಯ'ದಿಂದ ಶೈಲಿಯಲ್ಲಿ ಲಾಲಿತ್ಯ ಮಾಧುರ್ಯಗಳು ಮನೆ ಮಾಡಿವೆ ; ಕೃತಿಯಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲ ಸಮನ್ವಯವಾಗುತ್ತಿವೆ. ಆದರೂ ಜೈನಧರ್ಮ ವಿವರಣೆಗಳಿಂದಾಗಿ ಎಲ್ಲೆಡೆಯೂ ಕಾವ್ಯಧರ್ಮಕ್ಕೆ ಸಾಫಲ್ಯ

ವಾಗಿದೆಯೆನ್ನುವಂತಿಲ್ಲ. ಕೃತಿಯಲ್ಲಿ ಬಂದಿರುವ ವಸುಷೇಣ–ಸುನಂದೆ–ಚಂಡಶಾಸನರ ಆಖ್ಯಾನವು ಅದರಲ್ಲಿ ಚಿತ್ರರಿಸಲ್ಪಟ್ಟ ಪ್ರಣಯ ಸಮಸ್ಯೆಯ ಮೂಲಕ, ಯಶೋಧರಚರಿತೆಯಂತಹ ಒಂದು ಉತ್ತಮ ಕಲಾಕೃತಿಯಾಗಿ ಶೋಭಿಸುತ್ತದೆ.

ಅನಂತನಾಥಪುರಾಣದ ಕಾವ್ಯಗುಣಕ್ಕೆ ಮನಸೋತ ಸೂಕ್ತಿಸುಧಾರ್ಣವಕಾರನು ತನ್ನ ಸಂಕಲನಕ್ಕೆ ಬೇಕಾದ (೧೮ "ಅಂಗಗಳಿಗೆ") ಉಚಿತವಾದ ವರ್ಣನೆಯ ಅನೇಕ ಪದ್ಯಗಳನ್ನು ಅದರಲ್ಲಿ ಕಂಡುಕೊಂಡು ೨೦೩ ಪದ್ಯಗಳನ್ನು ಆಯ್ದುಕೊಂಡಿರುವನು. ಇದೊಂದು ಆ ಗ್ರಂಥಕ್ಕೆ ದೊಡ್ಡ ಗೌರವ.

ಅನಂತನಾಥಪುರಾಣದಿಂದ ಕೆಲವು ಉದಾಹರಣೆಗಳು :

ಕವಿತೆಯ ಯೋಗ್ಯತೆಯನ್ನು ತಿಳಿಯಬಲ್ಲವರಿಲ್ಲದಿದ್ದರೆ ಏನು ಫಲ ?

ಎನಿತನೊಱಲ್ದು ಪೇಳ್ದ ಕವಿಯೇವನದಂ ಪೆಸರಿಟ್ಟು ಮೆಚ್ಚ ಬ
ಲ್ಲನನಱಸಲ್ಕೆವೇಳ್ಪುದವನು ಜಗದೊಳ್ ಪಡೆಯಲ್ಕೆ ಬಾರದಾ ।
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ॥

(I-೪೩)

ಕೆಲವರಿಗೆ ನಿಂದಿಸುವುದು ಸ್ವಾಭಾವಿಕವಾಗಿದೆ ; ಹಾಗೆ ಮಾಡದಿದ್ದರೆ ಅವರು ಬದುಕಲಾರರಂತೆ ; ಅದು ಹಾಗೆಯೇ ಸಾಗುತ್ತಿರಲಿ ; ಬಾಳುವ ಮನೆಗೆ ಬಗುಳುವುದೊಂದು (ನಾಯಿ) ಬೇಕೆನ್ನುವರಲ್ಲವೆ ?

ಪೞಿದೊಡೆ ಬಾಳ್ವನಲ್ಲದೊಡೆ ಬಾಳ್ವನೆ ಸತ್ಕೃತಿಗೇಳ್ದು ದುರ್ಜನಂ
ಪೞಿದು ವೃಥೋಕ್ತಿ ಸಲ್ಲದೊಡೆ ಸಲ್ಲನೆ ಕಾವ್ಯನಿಬಂಧನಕ್ಕೆ ಮಾ ।
ಪೞಿಯೆ ಪೊಗೞ್ತೆಯಲ್ತೆ ರಸವತ್ಕೃತಿಯಂ ಕವಿ ಪೇೞ್ಗೆ ದುರ್ಜನಂ
ಪೞಿಯುತುಮಿರ್ಕೆ ಬಾಳ್ವ ಮನೆಗೊಂದು ಬಗುಳ್ವುದು ವೇೞ್ಕುಮೆನ್ನರೇ॥

(I–೪೦)

ವಧೂವರರ ಮಧ್ಯದ ಜವನಿಕೆಯನ್ನು 'ಕನ್ನಹಾಕಿ' ನೋಡುವ ಉತ್ಕಲಿಕೆ ವಧುವಿಗೆ :

ಕಿವಿವೇಟಮನಿಱಿಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ ।
ಯುವತಿಯ ಕಣ್ಣುಂ ಮನಮುಂ
ಜವನಿಕೆಯುಂ ಕಣ್ಣವಿಃಕ್ಕಲಟಮಟಮಟಿಸಿದುವೋ ॥ (VI—೫೬)

ಕಂದನ ಇದೊಂದು ಸುಖವನ್ನು ಪಡೆಯಬೇಕಾದರೆ 'ನೋಂಪು' ಮಾಡಬೇಕು; 'ನೋಱದಳ್ಗಿ' ಆ ಸುಖ ಲಭಿಸದು.

ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ಲಗೆಯಿಂ ಮುದ್ದು ಮೊಗಂ ತುಳುಕೆ ಪರಸುತ್ತುಂ ನೋಡಿ ಬಾ ದೇವ ಬಾ ।
ಜಗತೀವಲ್ಲಭ ಬಾರ ಮಾಣಿಕಮೆ ಬಾರೆನ್ನಾನೆಯಿಂದೆತ್ತಿ ಮೆ
ಯ್ದೆಗೆವನ್ನಂ ಮೊಲೆಯೂಡಿ ತೂಪಿಱಿವ ಸೈಪೇಂ ನೋಱದಳ್ಗಕ್ಕುಮೇ ॥
(VII—೫೦)

## ೧೮. ಸೋಮರಾಜ (೧೨೨೨)

ಈ ಕವಿಯು ವೀರಶೈವ ಕವಿ ಅಲ್ಲಮಾಂಕನ ದಯೆಯಿಂದ ಕೃತಿಯನ್ನು ರಚಿಸಿರುವುದಾಗಿ ಹೇಳುತ್ತಾನೆ. ಹರಿಹರನ ಪ್ರಭಾವ ಇವನ ಮೇಲೆ ತುಂಬ ಬೀರಿದೆ. ಇವನು ತನ್ನ ಕೃತಿಯಾದ ಉದ್ಭಟಕಾವ್ಯವನ್ನು ಶಕವರ್ಷ ೧೧೪೪ (ಕ್ರಿ ಶ. ೧೨೨೨)ಕ್ಕೆ ಸಲ್ಲುವ ಚಿತ್ರಭಾನು ಸಂವತ್ಸರದಲ್ಲಿ ರಚಿಸಿರುವಂತೆ ಹೇಳಿಕೊಂಡಿದ್ದಾನೆ; ಒಂದು ರಾಜವಂಶಕ್ಕೆ ಸೇರಿದವನಿರಬೇಕು. ಕೃತಿಯನ್ನು ಅಲ್ಲಮನಿಗೆ ಅರ್ಪಣೆ ಮಾಡಿರುತ್ತಾನೆ:

ಜನನಾಥೋತ್ತಮ ಸೋಮರಾಜನುಸಿರ್ದೀ ಕಾವ್ಯಂ ವಲಂ ಶಾಲಿವಾ
ಹನಶಾಕಾಬ್ದವಃದೆಯ್ದೆ ಸಾಸಿರದನೂಱಿಂ ಸಂದ ನಾಲ್ವತ್ತು ನಾ ।
ಲ್ಕನೆಯಾ ರಂಜಿತ ಚಿತ್ರಭಾನುವ ವರಾಶ್ವೀಜೋತ್ಸಿತೈಕಾದಶೀ
ವನಜಾರಾತಿತನೂಜವಾಸರದೊಳಾದತ್ತಲ್ಲಮಂಗರ್ಪಿತಂ ॥

ಇವನ ಕೃತಿಗೆ ಶೃಂಗಾರಸಾರ, ಉದ್ಭಟಕಾವ್ಯ ಎಂಬುದಾಗಿ ಎರಡು ಹೆಸರುಗಳುಂಟು. ಕುಮಾರಪಾಲ ಘೂರ್ಜರನ (ಉದ್ಭಟನ) ವೀರಶೃಂಗಾರ ಭಕ್ತಿಗಳಿಂದ ಕೂಡಿದ ಚರಿತೆ. ಈ ಚಂಪೂಕಾವ್ಯದಲ್ಲಿ ೧೨ ಆಶ್ವಾಸಗಳಾಗಿ

ಹೇಳಲ್ಪಟ್ಟಿದೆ. ಹರಿಹರನ 'ಉದ್ಭಟ ರಗಳೆ' ಕವಿಗೆ ಸ್ಫೂರ್ತಿಯನ್ನು ಕೊಟ್ಟಿರಬೇಕು. ಉದ್ಭಟನು ದೇವಲಋುಷಿಯ ಯಜ್ಞಘಾತುಕನಾದ ನಿಘರ್ಜಾಸುರನನ್ನು ಕೊಂದು, ಸುಧರ್ಮನೆಂಬ ಚೋಳರಾಜನ ಮಗಳಾದ ಸೌಂದರ್ಯವತಿಯನ್ನು ಮದುವೆಯಾದನು. ಓಹಿಲನೆಂಬ ಶಿವಭಕ್ತನು ದೇಹದೊಂದಿಗೆ ಕೈಲಾಸಕ್ಕೆ ಹೋದರೆ, ತಾನು ತನ್ನ ನಗರವನ್ನೆಲ್ಲಾ ಕೈಲಾಸಕ್ಕೆ ಕರಕೊಂಡು ಹೋಗುವೆನೆಂಬ ಶಪಥವನ್ನು ಹೆಂಡತಿಯೊಡನೆ ಮಾಡಿ, ಕೊನೆಯಲ್ಲಿ ಶಿವನನ್ನು ಒಲಿಸಿ ತನ್ನ ಪ್ರತಿಜ್ಞೆಯನ್ನು ನೆರವೇರಿಸುವನು. ಇದೇ ಕಾವ್ಯದ ಕಥಾಸಾರಾಂಶ. ಶೈವತತ್ವವನ್ನರಿತುಕೊಂಡ ಭಕ್ತಕವಿ ಸೋಮರಾಜನು ನಿರ್ದುಷ್ಟವೂ ಲಲಿತವೂ ಆದ ಈ ಕಾವ್ಯದಿಂದ ಶೈವಪಾರಮ್ಯವನ್ನು ಸಾರುವನು.

## ೧೯. ಎರಡನೆಯ ಗುಣವರ್ಮ (೧೨೩೫)

ಜೈನಕವಿ ಜನ್ನನನ್ನು (೧೨೩೦) ಸ್ತುತಿಸಿದ ಮತ್ತು ಮಲ್ಲಿಕಾರ್ಜುನನಿಂದ (೧೨೪೫) ಉಲ್ಲೇಖಿಸಲ್ಪಟ್ಟ ಈ ಕವಿಯು ಸುಮಾರು ೧೨೩೫ರಲ್ಲಿದ್ದಿರಬಹುದು ಎಂಬ ಕವಿಚರಿತೆಕಾರರ ಅಭಿಪ್ರಾಯವು ಗ್ರಾಹ್ಯವಿದೆ. ಈತನು ಒಂಬತ್ತನೆಯ ತೀರ್ಥಂಕರನಾದ ಪುಷ್ಪದಂತನ ಪವಿತ್ರ ಚರಿತೆಯನ್ನು ೧೪ ಆಶ್ವಾಸಗಳಾಗಿ ಚಂಪೂರೂಪದಲ್ಲಿ ಬರೆದಿರುವನು. ಈ ಕೃತಿಯನ್ನು ತನ್ನ ಪೋಷಕನಾದ ನಾಟ್ಟಿಭುಜಭೋಮಣಿ ಶಾಂತಿವರ್ಮನಿಗೆ ಅರ್ಪಣೆಮಾಡಿರುವನು. ಇದಲ್ಲದೆ ಚಂದ್ರನಾಥಾಷ್ಟಕವೆಂಬ ಸ್ತೋತ್ರವನ್ನು ಕೊಲ್ಲಾಪುರದ 'ತ್ರಿಭುವನತಿಲಕಾಲಂಕೃತ ಚಂದ್ರನಾಥ'ನನ್ನು ಸಂಬೋಧಿಸಿ ರಚಿಸಿರುವನು.

ಪುಷ್ಪದಂತಪುರಾಣದಲ್ಲಿ ಕವಿಯು ಮಾಡುವ ಪೂರ್ವ ಕವಿಗಳ ಸ್ತವನ:

> ಅನುಗುಣವಾಗಿ ಕೂಡೆ ಗುಣವರ್ಮನ ಮೈಸಿರಿ ಪಂಪನೋಜೆ ಪೊ
> ನ್ನನ ಪೊಸದೇಸೆ ರನ್ನನ ಗುಣೋನ್ನತಿಯಗ್ಗಳನೊಳ್ಪು ನಾಗವ ।
> ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ
> ದ್ರನ ರಸವೃತ್ತಿ ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್ ॥ (I-೩೬)

ಇಲ್ಲಿ ಒಬ್ಬೊಬ್ಬ ಪ್ರಸಿದ್ಧ ಕವಿಯ ವೈಶಿಷ್ಟ್ಯವನ್ನುಸುಂದರವಾಗಿ ಹೇಳಿರುವನು. ತನ್ನ ಕಾವ್ಯವನ್ನು 'ನವ್ಯಕಾವ್ಯ' ಎಂಬುದಾಗಿ ಆತ್ಮವಿಶ್ವಾಸದಿಂದ

ಹೇಳಿಕೊಂಡಿರುವನು. ಗುಣವರ್ಮನು ತನ್ನಿಂದ ಹಿಂದಿನ ಪ್ರಸಿದ್ಧ ಗುಣವರ್ಮನನ್ನು (I) ಸ್ಮರಿಸಿದ್ದಾನೆ.

ಕಾವ್ಯದಲ್ಲಿ 'ಪದಪದದೊಳ್ ಸಾಲ್ವನಿತರ್ಥಮನಿತ್ತೊಡಂ' ಅದು ಮನೋಹರವಾಗಬೇಕಾದರೆ ನುಣ್ಣನಿಯನ್ನು 'ತೋರುವ ಸೊಬಗು' ಬೇಕೇ ಬೇಕಂತೆ.

ಎನಿತಂ ಪದಪದದೊಳ್ ಸಾ
ಲ್ವನಿತರ್ಥಮನಿತ್ತೊಡಂ ಮನಂಗೊಳ್ವೊಳೆ ನು ।
ಣ್ಣನಿಯಂ ತೋಱುತ್ತಮೆ ವಾ
ಗ್ವನಿತೆಯನೊಲಪೊಂದು ಸೊಬಗು ಸಮನಿಸವೇಡಾ ॥ (I–೩೨)

ಈ ಕವಿಯು ಹೇಳಿದಂತೆಯೆ 'ಸೊಬಗು' ಬರುವಂತೆ ತನ್ನ ಕಾವ್ಯ ಬರೆದಿರುವನು. ಅತ್ಯಂತ ಕಿರಿದಾದ ಕತೆಯನ್ನು ತನ್ನ ಕವಿತಾಶಕ್ತಿ, ಪಾಂಡಿತ್ಯಗಳಿಂದ ಔಚಿತ್ಯಪೂರ್ವಕವಾಗಿ ೧೪ ಆಶ್ವಾಸಗಳ ಮಹಾಕಾವ್ಯವನ್ನಾಗಿ ಮಾಡಿದ್ದಾನೆ. ಸಂದರ್ಭೋಚಿತವಾಗಿ ಬರುವ ನಾಣ್ಣುಡಿಗಳು, ನ್ಯಾಯವಚನಗಳು, ಅಲಂಕಾರಗಳು ಕಾವ್ಯಶರೀರಕ್ಕೆ ವಿಶೇಷವಾದ ಶೋಭೆಯನ್ನು ತಂದಿರುತ್ತವೆ. ಪುಷ್ಪದಂತ ಪುರಾಣದಲ್ಲಿ ಜನ್ಮಾಂತರ ಕಥಾಶೃಂಖಲೆಗಳ ಗೊಂದಲವಿರುವುದರಿಂದ ಜೈನೇತರರಿಗೂ ಅದೊಂದು ಹೃದಯಂಗಮವಾದ ಕಾವ್ಯವಾಗಿದೆ.

## ೨೦. ಆಂಡಯ್ಯ (೧೨೩೫)

ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡವಲ್ಲಿ ಕಬ್ಬಮಂ
ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ ।
ಬ್ಬಿಗರದು ಮಾತನಾಡಿದವೊಲಂದನಾಳ್ದಿರೆ ಪೇಟ್ವ ಬಲ್ಲ ನೆ
ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ದೊರೆಕೊಳ್ವದಾರೊಳಂ ॥

ಎಂಬುದಾಗಿ ಕನ್ನಡಿಗರು ಬೆಸಗೊಂಡ ಪ್ರಕಾರ ಆಂಡಯ್ಯನು ತನ್ನ 'ಸೊಬಗಿನ ಸುಗ್ಗಿ'ಯನ್ನು ಬರೆದನು. ಕನ್ನಡಿಗರಿಗೆ ಅದನ್ನು ಒಂದು ಅಪೂರ್ವವಾದ ಕಾಣಿಕೆಯಾಗಿ ಕೊಟ್ಟನು. ಅದಕ್ಕೆ 'ಕಾವನಗೆಲ್ಲ', 'ಮದನ ವಿಜಯ', 'ಕಬ್ಬಿಗರ ಕಾವ', ಎಂಬ ಹೆಸರುಗಳೂ ಇವೆ. ಈ 'ಕಾವನಗೆಲ್ಲ'ದಲ್ಲಿ ವೈದಿಕ

ಪುರಾಣೋಕ್ತ ಶಿವಕಾಮರ ಯುದ್ಧವು ವರ್ಣಿತವಾಗಿಲ್ಲ. ಯಾವ ಮೂಲ ದಲ್ಲಿಯೂ ಇದುವರೆಗೆ ದೊರಕದ ಒಂದು ಹೊಸ ಕಥೆಯನ್ನು ಸ್ವಪ್ರತಿಭಾ ಚಾತುರ್ಯದಿಂದ ಆಂಡಯ್ಯನು ಅಂದವಾಗಿ ನಿರೂಪಿಸಿದ್ದಾನೆ. ಕಾಮ ವಿಜಯದ ತನ್ನ ಕಥೆಯನ್ನು ತನ್ನ ಪೂರ್ವದ ಸ್ಥಿತಿಯನ್ನು ಮರೆತಿದ್ದ ಕಾಮನಿಗೆ ಅಚ್ಚರಸಿಯೋರ್ವಳು (ರತಿ) ಹೇಳುವುದು, ಅನಂತರ ಕಾಮನಿಗೆ ಶಾಪ ವಿಮೋಚನೆಯಾಗುವುದು ತೀರ ನವೀನವಾಗಿದೆ. ಜೈನಪುರಾಣಗಳಲ್ಲಿ ಜನ್ಮಾಂತರ ಗಳ ಕಥೆಯನ್ನು ಹೇಳುವ ಸಂಪ್ರದಾಯವೋ ಅಥವಾ ಕಾದಂಬರಿಯಲ್ಲಿ ಗಿಳಿಯು (ವೈಶಂಪಾಯನನು) ಜನ್ಮಾಂತರದ ಕಥೆಯನ್ನು ಶೂದ್ರಕನಿಗೆ (ಚಂದ್ರಾಪೀಡ ನಿಗೆ) ಹೇಳುವಂತಿರುವ ಸೊಬಗೋ ಆಂಡಯ್ಯನ ಮೇಲೆ ಪ್ರಭಾವ ಬೀರಿರ ಬಹುದು.

'ಕರ್ವುವಿಲ್ಲ'ನೆಂಬರಸನು 'ಕಂಪಿನ ಪೊೞಲನ್ನು' ಆಳುತ್ತಿದ್ದನು. ಆತನ ಮಡದಿ ಚೆಲ್ವಿನ ಪುತ್ತಳಿ ಇಚ್ಚೆಗಾರ್ತಿ. 'ಸಿವನೆಂಬ ದುಟ್ಟಗೊರವನು' 'ಕರ್ವುವಿಲ್ಲ'ನ ಪರಿವಾರಕ್ಕೆ ಸೇರಿದ ಚಂದ್ರನನ್ನು ಸೆರೆಹಿಡಿದನು. ಚಂದ್ರನನ್ನು ಮರಳಿ ಪಡೆಯುವುದಕ್ಕಾಗಿ ಸಿವನು ಕರ್ವುವಿಲ್ಲನೊಡನೆ ಭಯಂಕರ ಯುದ್ಧ ಮಾಡುವನು. ಅಲರಂಬಿನ ಪೂಗಣೆಗಳ ತಾಪವನ್ನು ತಾಳಲಾರದೆ ಈಶನ 'ಪಾಡಿಯೆಲ್ಲಂ ಪಿಟ್ಟುಂ ಪಿಟ್ಟಾಗಿ' ಹೋಯಿತು. ಕೊನೆಯಲ್ಲಿ ಶಿವನನ್ನು ಅರೆಪೆಣ್ಣಾಗಿ ಮಾಡುವನು. ಶಿವನು ಕುಪಿತನಾಗಿ 'ಕಾಮನು ತನ್ನೋಪಳನ್ನು ಕೂಡದೆ ಪೆಱರಱಿಯದೆಂತೆಲ್ಲಿಯಾದೊಡಂ ತಾನು ಕಾಮನೆಂಬುದಂ ಮಱೆ ದಿರಲಿ' ಎಂದು ಶಾಪವಿತ್ತನು. ಅದೇ ಕಾಮನು ಈಗ ಪೂವಿನ ಪೊೞಲಿನ ಅರಸನಾದ ನನೆಯಂಬನು. ಅಚ್ಚರಸಿಯು ಹೇಳಿದ ಈ ಕಥೆಯನ್ನು ಕೇಳಿ ದೊಡನೆ ಆತನು ಶಾಪವಿಮುಕ್ತನಾಗುವನು. ಆಮೇಲೆ ಕರ್ವುವಿಲ್ಲನಿಗೂ ಇಚ್ಚೆ ಗಾರ್ತಿಗೂ ಪಟ್ಟಾಭಿಷೇಕವಾಗುವುದು. ಇದು ಕಬ್ಬಿಗರ ಕಾವದ ಕಥಾಸಾರ. ಈ ಕಥೆಯಲ್ಲಿ ಶ್ಲೇಷೆಯಿಂದ ಕದಂಬ ಕಾಮನ ವಿಜಯ ಕಥೆಯನ್ನು ಆಂಡಯ್ಯನು ಹೇಳಿರುತ್ತಾನೆಂಬುದಾಗಿ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯ ಪಟ್ಟಿರುತ್ತಾರೆ.

ಆಂಡಯ್ಯನನ್ನು ಕನ್ನಡ ಸಾಹಿತ್ಯದ ಕಡುಗಲಿಯಾಗಿ ಸ್ಮರಿಸುತ್ತಿರುವುದು

ವಸ್ತುನವೀನತೆಗೆ ಮಾತ್ರವಲ್ಲ, ಕಥನರೀತಿಗೂ ಭಾಷಾವೈಶಿಷ್ಟ್ಯಕ್ಕೂ ಆತನು ಚಿರಸ್ಮರಣೀಯನೆಂಬುದು ಸರ್ವವಿದಿತವಾಗಿದೆ. 'ಅಚ್ಚಗನ್ನಡಂ ಬಿಗಿವೊಂದಿರೆ' ಮತ್ತು 'ಮಾತನಾಡಿದವೊಲ್ ಅಂದವನಾಳ್ದಿರೆ' ಎಂಬ ಧ್ಯೇಯವನ್ನು ಸಂಪೂರ್ಣವಾಗಿ ಆತನು ಸಾಧಿಸಿದ್ದಾನೆ. ದೇಶ್ಯಪದಗಳನ್ನೂ ತದ್ಭವಗಳನ್ನೂ ಲೀಲಾಜಾಲವಾಗಿ ಪ್ರಯೋಗಿಸಿದ ಬಲ್ಮೆ ಅವನದು. ಒಂದೇ ಒಂದು ತದ್ಭವ ವಲ್ಲದ ಸಂಸ್ಕೃತ ಪದವನ್ನು ಅವನು ಪ್ರಯೋಗಿಸಲಿಲ್ಲವೆಂದರೆ ತಪ್ಪಾಗದು. ಹಿಂದಣ ಚಂಪೂಕವಿಗಳ ಕೃತಿಗಳಲ್ಲಿನ ಸಂಸ್ಕೃತ ಸಮಾಸ ಪದಗಳ ಕ್ಲಿಷ್ಟತೆಯಿಂದ ನೀರಿಳಿಯುದ ಗಂಟಲಿಗೆ ಆಂಡಯ್ಯನು ಸೊದೆಯ ಹನಿಗಳನ್ನು ಸುರಿದನು. ಭಾಷಾಶೈಲಿ ಲಲಿತವೂ ಮಧುರವೂ ಆಗಿದೆ. ವರ್ಣನೆಗಳು ಸುಂದರವಾಗಿವೆ. ಕನ್ನಡಮೆನಿಪ್ಪಾ ನಾಡನ್ನು ಹೀಗೆ ಚಿತ್ರಿಸುತ್ತಾನೆ—

"ನೀರ್ವೂಗಳ ಕಂಪಿಗೆ ಮಾಣದೆ ಮುಸುಱಿ ಮೊರೆವ ಪೆಣ್ದುಂಬಿಗಳ, ತುಂಬಿಗಳ ಬಱಿವಿಡಿದು ಬನದೊಳಿಡೆಯಾಡುವ ಸಬರಿಯರ, ಸಬರಿಯರ ನಡೆಯ ನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ, ಗಳಗಳನೆ ಪಸರಿಸಿ ಪರಿದ ಬಯಲೊಳ್ ಬೆಳೆದ ಬಿಳಿಯ ಕರ್ಬಿನ ಕೋಲ್ಗೆ ಕೊರಲುದ್ದಮಾದೆಳನೀರ ಪೊನಲ, ನಲವಿಂ ಬೆಳೆಗೆಯ್ಗೆ ಐಗುವ ಪಕ್ಕಿಗಳ ನಲೆದು ಸೋವ ನಾಡಗಾಡಿ ಕಾರ್ತಿಯರ ಗಾಡಿಗೆ ಸೋಲ್ತು ನಿಲ್ವ ಬಟ್ಟೆಗರ....ಚೆಲ್ವನೊಳಕೊಂಡಿರ್ಪ" ಕನ್ನಡಮೆನಿಪ್ಪಾನಾಡು ಯಾವ ಕನ್ನಡಿಗನ ಹೃದಯವನ್ನು ಹಿಗ್ಗಿಸದು ? ಈ ಗದ್ಯದಲ್ಲಿ ಬಂದಿರುವ ಮುಕ್ತ ಪದಗ್ರಾಸವೆಂಬ ಶಬ್ದಾಲಂಕಾರವು ಎಷ್ಟು ಸಹಜವೂ ಲಲಿತವೂ ಆಗಿದೆ.

ಕೆಲವು ವರ್ಣನೆಗಳಲ್ಲಿ ಬರಿಯ ದೇಶ್ಯ ಶಬ್ದಗಳು ಮಾತ್ರ ಇರುತ್ತವೆ :

ಎಲೆ ತೀಡುವ ತೆಂಗಾಳಿಯೆ
ನಲವಿಂ ಕಾಲ್ವಿಡಿದು ತಿಳಿಪಿ ತಳ್ವಿಲ್ಲದೆ ಕಾ ।
ದಲನಂ ತಂದೊಡೆ ನಱುಸು
ಯ್ಯಲರಿಂದಂ ನಿನ್ನನೇಗಳುಂ ನೆಱಿಪೊರೆವೆಂ ॥

ತೆಂಗಾಳಿಗೆ ತನ್ನ ಸುಯ್ಯೆಲರಿಂದ ಪೋಷಣೆಮಾಡುವ ಇನಿಯಳಂತೆ! ಶೃಂಗಾರರಸಪುಷ್ಟಿಯ ಸೋಪಾನಗಳಂತಿರುವ ಮಾತುಗಳು.

ಆಂಡಯ್ಯನ ಕೆಲವು ಸ್ವಾರಸ್ಯವಾದ ಸಮಸ್ತಪದಗಳನ್ನು ಗಮನಿಸಬಹುದು : ಕಮ್ಮಂಗಣೆಯುಂ, ಕರ್ವುವಿಲ್ಲಂ, ಅಲರಂಬು, ನನೆಗೋಲು, ನನೆಗಣೆಯುಂ, ನನೆವಿಲ್ಲಂ; ನೆತ್ತಿಗಣ್ಣಂ, ಉರಿಗಣ್ಣಂ, ಮುಕ್ಕಣ್ಣಂ, ಕಟಿಗೊರಲಂ, ನಂಜುಗೊರಲಂ, ಬಾಂದೊಱೆದಲೆಯುಂ, ಬಿಸುಗದಿರಂ, ಬೆಂಗದಿರಂ, ಪಗಲಾಣ್ಮನ್, ತಣ್ಗದಿರಂ, ನುಡಿವೆಣ್, ಮೆಯ್ಗಣ್ಣಂ, ನಾಲ್ಮೊಗಂ, ಪೊಡೆಯುಲರಂ, ಪಲವುಂ ನಾಲಗೆಯುಳ್ಳವಂ ಇತ್ಯಾದಿ. ಇವು ಮನೋಹರವಾಗಿ ಕನ್ನಡ ಭಾಷೆಯ ಶಕ್ತಿಯನ್ನು ಹೆಚ್ಚಿಸಿರುತ್ತವೆ. (ತಮಿಳು ಇದೇ ರೀತಿಯಲ್ಲಿ ಸಾಗಿ ಬೆಳೆದು ಬಂದಿರುತ್ತದೆ.)

## ೨೧. ಕಮಲಭವ (೧೨೩೫)

ಪೊನ್ನನಂತೆ ಶಾಂತಿನಾಥನ ಚರಿತವನ್ನು ಶಾಂತೀಶ್ವರಪುರಾಣವೆಂಬ ಚಂಪೂ ಕಾವ್ಯದಲ್ಲಿ ೧೬ ಆಶ್ವಾಸಗಳಾಗಿ ಇವನು ಬರೆದನು. ಈ ಕೃತಿಯು ಮಹಾಕಾವ್ಯದ ಮತ್ತು ಜೈನಪುರಾಣ ಲಕ್ಷಣಗಳಿಂದ ಕೂಡಿರುತ್ತದೆ. ಕಮಲಭವನ ಕವಿತಾಸಾಮರ್ಥ್ಯ ಸ್ತುತ್ಯವೆನ್ನುವಂತಿದೆ. ದೇವಕವಿಯ ಕುಸುಮಾವಳಿಯಲ್ಲಿನ ಪದ್ಯಗಳು ಇದರಲ್ಲಿ ಕೆಲವು ಬಂದಿರುವುದು ಆಶ್ಚರ್ಯ. ದೇವಕವಿಯ ಮೇಲಿನ ಯಾವುದೋ ಒಂದು ಅಭಿಮಾನದಿಂದ ಇವನು ಹೀಗೆ ಮಾಡಿರಬಹುದು. ಅಂಥವನ್ನು ಸ್ವತಂತ್ರವಾಗಿ ರಚಿಸಲಾರದಂತಹ ದುರ್ಬಲನು ಕಮಲಭವನಲ್ಲ. ವರ್ಣನೆಗಳು ಕವಿಸಮಯ ಸಂಪ್ರದಾಯಕ್ಕನುಸಾರವಾಗಿ ಬಂದಿದ್ದರೂ ಅವೆಲ್ಲ ಹೃದಯಂಗಮವಾಗಿವೆ. ಪುರಾಣದ ಚತುಷ್ಕೋಣದ ಒಳಗೆ ಇಂಬಿರುವಷ್ಟು ಸ್ವತಂತ್ರವಾಗಿ ಕಮಲಭವನ ಕವಿತಾವಾಣಿ ಸುಳಿದಿರುವಳು. ಕವಿತೆಯಲ್ಲಿ ಸುಲಲಿತವಾದ ಓಟವಿದೆ.

ಶಾಂತೀಶ್ವರಪುರಾಣದೊಳಗಿನ ಕೆಲವು ಉತ್ತಮ ಭಾಗಗಳು.

ತನ್ನ ಕವಿತೆಯ ವಿಷಯವಾಗಿ :

ಕಮಳಭವನ ಕವಿತಾರಸ
ಮಮರ್ದಿನ ತನಿವೊನಲನಂಗಮೋಹನ ಬಾಣಂ ।

ರಮಣೀಯ ಮಧುರರುತಿ ಬಾ
ಳ ಮರಾಳದ ನಲ್ಮೆಯಾಟಮಿನಿಯಳ ಕೂಟಂ ॥ (I–೫೯)

ಜ್ಯೋತಿಃಪ್ರಭಾದೇವಿಯ ಸ್ವಯಂವರವರ್ಣನೆ ಬಹಳ ಹೃದಯಂಗಮವಾಗಿದೆ. ಸಿಂಗರಿಸಿದಮೇಲೆ ಅವಳು ಕಣ್ಣಿಗೆ ಹೇಗೆ ಕಂಡಳು :

ವರಶೃಂಗಾರ ಕಳಾಧಿದೇವತೆಯೋ ಲಾವಣ್ಯಾಮೃತಾಪಾರ ಸಾ
ಗರದೊಳ್ ಪುಟ್ಟಿದ ಪೂರ್ವಲಕ್ಷ್ಮಿಯೊ ಜಗನ್ನೇತ್ರಾಂಬುಜಾ ಕೃಷ್ಟಿಗೆ
ಯ್ದ ರಮಾದೇವಿಯೊ ಕಂತು ರಾಜನ ಜಯಶ್ರೀಕಾಂತೆಯೋ ತಾನೆನಲ್ ।
ಧರಣೀಕಾಂತಕುಮಾರಿ ಕಣ್ಗೊಳಿಸಿದಳ್ ಸಾಶ್ಚರ್ಯಸೌಂದರ್ಯದಿಂ ॥
(IV–೨೪೭)

ಕುರುಧರೆಯ ವರ್ಣನೆ

ಆಳರಸಿಲ್ಲದಟಿಳ್ಗೊಳ್ ಕೇಳ್
ಕೀಳೆಂಬುದದೆಂತುಮಿಲ್ಲ ಸಿರಿ ಬಡತನಮಂ ।
ಬಾಳಾಪಮಿಲ್ಲೆನಲ್ ಸುಖ
ದಾಳಯಮೆನ್ನದರದಾರೊ ಪೇಟಿಬ್ ಕುರುಧರೆಯಂ ॥

ಬಾಟಿ

ಅರೆವಿರಿದೊಪ್ಪುವ ಪಣ್ಗಳ್
ಬೆರಸಿದ ಬಿಣ್ಗೊನೆಗಳಿಂದೆ ಪಥಿಕರ ಕಣ್ಣ ।
ಚ್ಚರಿವಡೆದು ಬಿಡದೆ ಬಾಯಂ
ಬಿರಿಯಿಸುತೆಸೆದಿರ್ಪುದಲ್ಲಿ ಬಾಟಿಯ ಮರಗಳ್ ॥

ಶಾಂತೇಶ್ವರ ಚಕ್ರವರ್ತಿಯ ಆರೋಗಣೆ

ಸುರಸಿಂಧು ಫೇನಪಿಂಡೋ
ತ್ಕರಮಿವೆನಲ್ ಕಾಂತಿವೆತ್ತು ನಗಣದ ತೆಟಿದಿಂ ।
ಓರಿದುಂ ಲಘುತ್ವದಿಂ ಬಿ
ತ್ತರಿಪಿಡ್ಡಲಿಗೆಗಳನಂತವರ್ ಒಡ್ಡಿಸಿದರ್ ॥ (XV ೭೩)

## ೨೨. ಮಲ್ಲಿಕಾರ್ಜುನ (೧೨೪೫)

ಕನ್ನಡದಲ್ಲಿ ಪೂರ್ವಕವಿಗಳ ಕೃತಿಗಳಿಂದ ಆಯ್ದುಕೊಂಡು ಕಾವ್ಯಸಂಕಲನವನ್ನು ಮಾಡಿದ ಮೊದಲಿಗನೆಂದರೆ ಮಲ್ಲಿಕಾರ್ಜುನನು. ಹೊಯ್ಸಳ ವೀರ ಸೋಮೇಶ್ವರನು (೧೨೩೩–೧೨೬೪) ಸೂಕ್ತಿಸುಧಾರ್ಣವವೆಂಬೀ ಸಂಕಲನವನ್ನು ಮೆಚ್ಚಿರುವುದಾಗಿ ಹೇಳಿಕೊಂಡಿದ್ದಾನೆ. ಈ ಗ್ರಂಥದಲ್ಲಿ ಮಹಾಕಾವ್ಯದ ೧೮ ಅಂಗಗಳಾದ ವಾರಿಧಿ, ಪರ್ವತಂ, ಪುರಮಧೀಶ್ವರಂ....ಇತ್ಯಾದಿ ವರ್ಣನೆಗಳನ್ನು ಪ್ರಸಿದ್ಧರಾದ ಪೂರ್ವಕವಿಗಳಿಂದ ಸಂದರ್ಭೋಚಿತವಾಗಿ ತೆಗೆದುಕೊಂಡು ಒಂದು ದೊಡ್ಡ ಕಾವ್ಯಾರ್ಣವವನ್ನೇ ಕಟ್ಟಿದ್ದಾನೆ. ಒಟ್ಟಿನಲ್ಲಿ ೧೮ ಆಶ್ವಾಸಗಳಿವೆ. 'ಮಲ್ಲಿಕಾರ್ಜುನ ಮಹಾಕವೀಶ್ವರ', 'ಸರಸಕವೀಶಂ' ಎಂಬುದಾಗಿ ತನ್ನನ್ನು ಕುರಿತು ಹೇಳಿಕೊಂಡಿರುವುದನ್ನು ನೋಡಿದರೆ ಈತನು ಸ್ವತಂತ್ರವಾಗಿ ಕಾವ್ಯ ರಚನೆ ಮಾಡಿರಬೇಕೆನ್ನಬಹುದು. ಸೂಕ್ತಿಸುಧಾರ್ಣವದಲ್ಲಿ ಕೆಲವೆಡೆ ಈತನ ಸ್ವಂತ ರಚನೆಗಳಿರುವುದರಲ್ಲಿ ಸಂದೇಹವಿಲ್ಲ. ಇವನು ಕನ್ನಡದ ಪ್ರಖ್ಯಾತ ವೈಯಾಕರಣ ಕೇಶಿರಾಜನ (೧೨೬೦) ತಂದೆ ಮತ್ತು ಕವಿಚಕ್ರವರ್ತಿ ಜನ್ನನ ಭಾವ. ಇವನಿಗೆ ಚಿದಾನಂದಮಲ್ಲಿಕಾರ್ಜುನನೆಂಬ ಹೆಸರೂ ಉಂಟು.

ಸೂಕ್ತಿಸುಧಾರ್ಣವದಲ್ಲಿ ವರ್ಣನಾಭಾಗಗಳೇ ಹೆಚ್ಚು ಬಂದಿರುತ್ತವೆ. ಸನ್ನಿವೇಶರಚನೆ ಪಾತ್ರನಿರ್ಮಾಣಗಳ ದೃಷ್ಟಿಯಿಂದ ಸ್ವಾರಸ್ಯವುಳ್ಳ ಪದ್ಯಗಳು ಉದ್ಧೃತವಾಗಲಿಲ್ಲವೆಂದರೆ ತಪ್ಪಾಗದು. ಒಟ್ಟಿನಲ್ಲಿ ಸುಮಾರು ೨೨೦೦ ಪದ್ಯಗಳು ಸಂಗ್ರಹಿಸಲ್ಪಟ್ಟಿವೆ. ೨೮ ಗ್ರಂಥಗಳಿಂದಲೂ ಕೆಲವು ಶಾಸನಗಳಿಂದಲೂ ಆಯ್ದುಕೊಂಡಿರುವ ಪದ್ಯಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಕವಿಯು ಆಕರಗಳನ್ನು ಸೂಚಿಸಿರುವುದರಿಂದ, ಆತನ ಸ್ವಂತ ರಚನೆಯನ್ನು ನಿರ್ದೇಶಿಸುವುದು ಕಷ್ಟವಾಗದೆ. ಆತನ ಮೆಚ್ಚಿನ ಕೃತಿಗಳೆಂದರೆ ಲೀಲಾವತಿ, ಅನಂತನಾಥಪುರಾಣ, ಚಂದ್ರಪ್ರಭಪುರಾಣ, ಜಗನ್ನಾಥವಿಜಯ ಎನ್ನಬಹುದು ಅವುಗಳಿಂದ ಅನುಕ್ರಮವಾಗಿ ೨೦೪, ೨೦೩, ೧೭೯, ೧೫೦ ಪದ್ಯಗಳನ್ನು ಉದ್ಧರಿಸಿದ್ದಾನೆ. ಒಟ್ಟಿನಲ್ಲಿ ಸುಮಾರು ಇಷ್ಟೇ ಪದ್ಯಗಳನ್ನು ಉಳಿದ ೮೪ ಗ್ರಂಥಗಳಿಂದ ಉದ್ಧರಿಸಿದ್ದಾನೆ. ಸೂಕ್ತಿಸುಧಾರ್ಣವದಲ್ಲಿ ಆಕರ ದೊರಕದ ಉತ್ತಮ ಪದ್ಯಗಳಲ್ಲಿ ಕೆಲವು :

ಆವಳ ಕಯ್ಯ ಪುಸ್ತಕದೊಳಿರ್ಪವು ಲೋಕದ ಸಾರಸೂಕ್ತಿಯಿ
ನ್ನಾವಳ ವಾಗ್ವಿಲಾಸ ಚತುರತ್ವದೆ ಪೋದುದು ಪದ್ಮಜಂಗೆ ಮು ।
ನ್ನಾವರಿಸಿರ್ದ ಛಾಂದಸಿಕೆಯಾವಳ ಪೊಲ್ವೆಯಪುತ್ರಿಕೀರ್ತಿ ಲ
ಕ್ಷ್ಮೀ ವಧುವಾದಳಾ ವಧುಗೆ ಕಾವ್ಯದ ನಾಂದಿಯೊಳರ್ಘ್ಯವೆತ್ತುವೆಂ ॥

(I–೬)

ಕರೆದು ಬುಧವ್ರಜಂ ಸುಕವಿ ಮಲ್ಲಪನಂ ಮನದಕ್ಕಱಿಂದಮಾ
ದರಿಸಿ ಸುಧಾರ್ಣವಾಖ್ಯಕೃತಿಯಂ ರಚಿಯಿಪ್ಪುದೆನಲ್ಕೆ ಲೋಕವ ।
ಚ್ಚರಿಪಡೆ ಸಜ್ಜನರ್ ಪೊಗೞೆ ಸೋಲಮಗುಂದಲೆಯಾಗೆ ಬಿಚ್ಚತಂ
ಪರಿಣತರಪ್ಪರೊಲ್ವೆಳಸೆ ಪೇೞಲೊಡರ್ಚಿದೆನೀ ಪ್ರಬಂಧಮಂ ॥

(I–೭೫)

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತು ನಂದನಮಂಬುಕೇಳಿ ಕಾಂ ।
ತಾರತಿ ಚಿಂತೆ ಮಂತ್ರಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂ ಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ॥

(I–೭೬)

ಒಂದು ಮನೋಹರವಾದ ಪರಿಸಂಖ್ಯೆ :

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳದಲ್ಲಹಿತತ್ವಂ ಹೊಂ ।
ಗೇದಗೆಯ ಹೊದೞೊಳಲ್ಲದಿ
ಳಾ ದುರ್ಧರ ಕಂಟಕತ್ವಮಿಲ್ಲಾ ನಾಡೊಳ್ ॥ (IV–೧೯)

ನಾಯಕಾಭ್ಯುದಯಕ್ಕೆ ಏನೆಲ್ಲ ಸಾಧಿಸಬೇಕು ?

ಮುನಿಸಿಂದಾಂತರನಿಕ್ಕಿ ಭೂವಳಯಮಂ ನಿಷ್ಕಂಟಕಂ ಮಾಡಿ ಕೀ
ರ್ತಿ ನಿಜಾಜ್ಞಾಸಹಿತಂ ದಿಶಾವಳಿಯಮಂ ತಳ್ತಿಪ್ಪಿ ಸಂಗೀತಮಂ ।
ಜನನಾಥಂ ಮುದದಿಂದಮೋಲಗದೊಳೆತ್ತಂ ಕೇಳ್ದು ತಾಂ ತ್ಯಾಗವ
ರ್ಧನಮಂ ಮಾಡಿಪ್ಪುದು ನಾಯಕಾಭ್ಯುದಯಮೆಂಬಿಂಗಂ
ಮಹಾಕಾವ್ಯದೊಳ್ ॥ (V–೧)

ನರಸಿಂಹ [ರಾಜನು ?] ಮದುವೆ ಬಾಸಿಗ ಕಟ್ಟಿದಾಗ--

ಎಳವೆಱೆಯ ಶ್ರೀಕಂಠಂ
ತಳಿದಂತಿರೆ ಬಾಳಪಟ್ಟದೊಳ್ ಕಣ್ಗೆಸೆದಂ ।
ಮಳಯಜ ವಿಲಿಪ್ತಗಾತ್ರಂ
ತೊಳಗುವ ಬಾಸಿಗಮನಾಂತು ವರ ನರಸಿಂಹ ॥ (VI–೩೩)

ಸುಂದರವಾದ ವಿನೋಕ್ತಿಗೆ ಒಂದು ಉದಾಹರಣೆ :

ಕಳಹಂಸಂ ಸುೞಿಯದ ಪೂ
ಗೊಳನಮೃತಮರೀಚಿ ಬೆಳಗದಂಬರಚಕ್ರಂ ।
ಕಳಭಂ ಸಂಚರಿಸದ ವನ
ವಳಯಂ ಸುತರಾಡದಂಗಣಂ ರಂಜಿಕುಮೇ ॥ (VII–೨೦)

ಇಂಥವು ಅನೇಕ ಬಂದಿವೆ. ಇವುಗಳಲ್ಲಿ ಕೆಲವನ್ನು ಮಲ್ಲಿಕಾರ್ಜುನನೇ ಸ್ವತಃ ರಚಿಸಿರುವನೆಂಬುದು ನಿಸ್ಸಂದೇಹವಾಗಿರುತ್ತದೆ.

## ಇತರ ಚಂಪೂಕಾವ್ಯರಚಕರು

೧೩ನೆಯ ಶತಮಾನದ ಮಧ್ಯಕಾಲದಿಂದ ೧೯ನೆಯ ಶತಮಾನದ ಮಧ್ಯ ಕಾಲದವರೆಗೆ ಎಂದರೆ ಸುಮಾರು ಆರು ಶತಮಾನಗಳ ಅವಧಿಯಲ್ಲಿ ಚಂಪೂ ಕಾವ್ಯಶ್ರೀಯು ಹೇಗೋ ಕಳೆಗುಂದಿ ಬಾಳಿದಳು. ಅನೇಕ ಕವಿಗಳು ಆ ಕಾವ್ಯಶ್ರೀಗೆ ಕಾಂತಿಯನ್ನು ತುಂಬಲು ಹವಣಿಸಿದರು. ಅವರಲ್ಲಿ ಪ್ರಮುಖ ರಾದವರು : ಮಹಾಬಲಕವಿ (೧೨೫೪), ಚೌಂಡರಸ (೧೩೦೦), ನಾಗರಾಜ (೧೩೩೧), ವೃತ್ತವಿಲಾಸ (೧೩೬೦), ಮಧುರ (೧೩೮೫), ಆಯತವರ್ಮ (೧೪೦೦), ಸುರಂಗಕವಿ (೧೫೦೦), ಅಭಿನವವಾದಿ ವಿದ್ಯಾನಂದ (೧೫೩೦), ಷಡಕ್ಷರದೇವ (೧೬೫೦), ತಿರುಮಲಾರ್ಯ (೧೭೬೦), ಚಿಕುಪಾಧ್ಯಾಯ(೧೭೬೦), ಅಳಿಯ ಲಿಂಗರಾಜ (೧೮೫೦) ಮೊದಲಾದವರು. ವಚನಗಳ, ಷಟ್ಪದಿಗಳ, ಸಾಂಗತ್ಯಗಳ ಮತ್ತು ರಗಳೆಗಳ ಹೊಸ ವರ್ಚಸ್ಸಿನ ಮುಂದೆ 'ಚಂಪೂ' ಎಷ್ಟಾ ದರೂ ಸ್ವಲ್ಪ ಸಪ್ಪೆಯಾಗಿಯೇ ಬಿಟ್ಟಿತು. ಅಷ್ಟಾದಶವರ್ಣನೆಗಳೂ ಕವಿಸಮಯ ಗಳೂ ಅಷ್ಟು ಆಕರ್ಷಕವಾಗಿರಲಿಲ್ಲ. ಅಂದಿನ ಸಹೃದಯರಿಗೆ ಅವು ಹಳಸಿಹೋಗಿ ದ್ದುವು. ಹೊಸತಿನ ಕಡೆಗೆ ಅವರ ಮನಸ್ಸು ಹಾತೊರೆಯುತ್ತಿತ್ತು. ರಾಘ

ವಾಂಕ ಕುಮಾರವ್ಯಾಸ ರತ್ನಾಕರರು ಆ ಹೊಸತನ್ನು ಪೂರಯಿಸುತ್ತಿದ್ದರು. ಇರಲಿ.

ಕೊನೆಯ ಚಂಪೂಕವಿಗಳಲ್ಲಿ ಎಲ್ಲರನ್ನು ಪರಿಚಯಮಾಡಿಕೊಡುವುದು ಪ್ರಸ್ತುತದಲ್ಲಿ ದುಸ್ಸಾಧ್ಯವಿರುವುದರಿಂದ, ಅವರಲ್ಲಿ ಒಬ್ಬಿಬ್ಬರನ್ನು ಮಾತ್ರ ಸಂಧಿಸೋಣ. ಮಧುರ ಷಡಕ್ಷರದೇವರಂಥ ಪ್ರತಿಭಾವಂತ ಕವಿಗಳು ಅಗಾಧ ವಾದ ಪಾಂಡಿತ್ಯದಿಂದ ಚಂಪೂಕಾವ್ಯಕ್ಕೆ ನಿಜವಾಗಿಯೂ ಮತ್ತೊಮ್ಮೆ ಕಾಂತಿ ಯನ್ನು ತುಂಬಿದ್ದಾರೆ ಎನ್ನಬಹುದು. ಅಭಿನವವಾದಿ ವಿದ್ಯಾನಂದನು ಅತ್ಯುಪ ಯುಕ್ತವಾದ 'ಕಾವ್ಯ ಸಂಕಲನ'ವೊಂದನ್ನು ಪೋಣಿಸಿದುದು ಮತ್ತೊಂದು ಹಿರಿಯಸೇವೆ.

(೧) ಅಭಿನವವಾದಿ ವಿದ್ಯಾನಂದ (೧೫೫೦) 'ಕಾವ್ಯಸಾರ'ವೆಂಬ ಉತ್ತಮ ಸಂಕಲನವನ್ನು ಸಂಪಾದಿಸಿದನು. ಇದರಲ್ಲಿ ೪೫ ಅಧ್ಯಾಯಗಳೂ ೧೧೪೩ ಪದ್ಯಗಳೂ ಇವೆ ; ಉದಾಹೃತ ಪದ್ಯಗಳಿಗೆ ಆಕರಗಳ ಹೆಸರುಗಳನು ಕೊಟ್ಟಿರುವುದರಿಂದ ಇದು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ಕ್ಕಿಂತ ಹೆಚ್ಚಿನ ಬೆಲೆಯುಳ್ಳುದಾಗಿದೆ. ಕಾವ್ಯಸಾರದಲ್ಲಿ ಉದ್ಧೃತರಾದ ಕವಿಗಳಿವರು : ಗುಣವರ್ಮ I (೯೦೦?), ಪಂಪ (೯೪೧), ನಾಗವರ್ಮ I (೯೯೦), ರನ್ನ(೯೯೩), ನಾಗಚಂದ್ರ (೧೧೦೦), ಹರಿಹರ (೧೧೬೫), ಉದಯಾದಿತ್ಯ (೧೧೫೦), ನೇಮಿ ಚಂದ್ರ (೧೧೭೦), ರುದ್ರಭಟ್ಟ (೧೧೮೦), ಅಗ್ಗಳ (೧೧೮೯), ವಾಣೀವಲ್ಲಭ (೧೨೦೦), ಪಾರ್ಶ್ವಪಂಡಿತ (೧೨೦೫), ಜನ್ನ (೧೨೦೯), ಗುಣವರ್ಮ II (೧೨೩೫), ಕಮಲಭವ (೧೨೩೫), ಆಂಡಯ್ಯ (೧೨೩೫), ಮಧುರ (೧೩೮೫) ಎಂಬೀ ಹದಿನೇಳು ಮಂದಿ.

ಇದರಿಂದ ನಾಲ್ಕು ಸುಂದರ ಉದಾಹರಣೆಗಳು

ಧರ್ಮನಾಥಪುರಾಣ (ಮಧುರ) :

(೧) ಪಂಡಿತರುಂ ವಿವಿಧಕಲಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ।

ಕಂಡರ್ ಕೇಳ್ದೊಡೆ ಗೋರವರ
ಡುಂಡುಬಳಿಯೇ ಬೀದಿವಱಿಯೆ ಬೀರನ ಕತೆಯೇ ॥ (I–೪೯)

## ಶೂದ್ರಕ

(೨) ಸಣ್ಣಂ ನಡು ತಿಣ್ಣಂ ಮೊಲೆ
ಒಣ್ಣಂ ಪಸುರ್ವಿಸಱಿ ಒಣ್ಣವಧರಂ ಮಧುರಂ।
ಕಣ್ಣಲರ್ಗಣ್ಣೆಮೆ ಮಂದಂ
ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ (VII–೨೮೧)

## ಕವಿಕುಂಜರ ಲೀಲಾವತಿ

(೩) ಸ್ತನದುನ್ನತಿಯಂ ಜಘನದ
ತನಿವರ್ಚಂ ನೋಡಿ ನೋಡಿ ಬಡವಾಯ್ತೆನೆ ಕಾ।
ಮಿನಿಯ ನಡುವೆಸೆದುದಲ್ಪಂ
ಘನವೆನಿಸಿದ ನೆರೆಯ ಸಿರಿಯ ಸೈರಿಸಲಾಱಿಂ (VII–೨೯೩)

(೪) ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೆ ದೇವನೆಂದು ರಾ
ಜಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೇ ದೇವಿಯೆಂದು ಸೇ।
ವ್ಯಂ ಬುಧನೇಮಿಚಂದ್ರನೆ ಕವೀಶ್ವರನೆಂದಿಳೆಗಿಂದ್ರನೆಂದು ದಿ
ವ್ಯಂ ಬಿಡಿದಂತೆ ಮೂಡಿದುದು ಮೂಡಣ ದಿಕ್ಕಿನೊಳರ್ಕಮಂಡಲಂ ॥
(XXXIII–೮೭೨)

(೨) **ಷಡಕ್ಷರದೇವ** (೧೬೫೦) : ಷಡಕ್ಷರದೇವನು ೧೩ ನೆಯ ಶತಮಾನದಿಂದ ೧೯ನೆಯ ಶತಮಾನದವರೆಗಿನ ಚಂಪೂಕವಿಗಳಲ್ಲಿ ಮಹಾಕವಿ ಎನಿಸಿಕೊಳ್ಳುವ ಯೋಗ್ಯತೆಯುನ್ನು ಪಡೆದ ಏಕಮಾತ್ರ ಕವಿ. ಈ ವೀರಶೈವ ಕವಿಯ ಸ್ಥಳ ಮೈಸೂರು ಪ್ರಾಂತ್ಯಕ್ಕೆ ಸೇರಿದ ದನುಗೂರು. ಆತನು ಶ್ರೇಷ್ಠ ಕವಿ ಮಾತ್ರವಲ್ಲ, ಮಠಾಧಿಪತಿಯಾಗಿದ್ದುದರಿಂದ ಧಾರ್ಮಿಕ ಗುರುವೂ ಆಗಿದ್ದನು ತನ್ನ ಅಸಾಮಾನ್ಯ ಪ್ರತಿಭೆಪಾಂಡಿತ್ಯಗಳಿಂದ ಮತ್ತೊಮ್ಮೆ ಚಂಪೂ ಕಾವ್ಯಕ್ಕೆ ಒಂದು ಅಪೂರ್ವ ಕಳೆ ಕಟ್ಟಿ ತನ್ನ ಕೃತಿರತ್ನಗಳಾದ ರಾಜಶೇಖರ ವಿಲಾಸ, ಶಬರಶಂಕರವಿಲಾಸ ಮತ್ತು ವೃಷಭೇಂದ್ರವಿಜಯಗಳ ಮೂಲಕ

ಧರ್ಮವನ್ನೂ ಕಾವ್ಯಧರ್ಮವನ್ನೂ ಬೆಳಗಿದನು. ಪ್ರಸ್ತುತ ರಾಜಶೇಖರ ವಿಲಾಸದ ಪರಿಚಯ ವಿಷ್ಟನ್ನು ಕೊಡಲಾಗಿದೆ.

ರಾಜಶೇಖರವಿಲಾಸ : ಚೋಳರಾಜಕುಮಾರನಾದ ರಾಜಶೇಖರನ ವೈಹಾಳಿಯಲ್ಲಿ ಶಿವಭಕ್ತೆ ತಿರುಕೊಳವಿನಾಚಿಯ ಮಗನು ಅವಘಡಕ್ಕೆ ಗುರಿಯಾಗಿ ಮರಣ ಹೊಂದಲು, ರಾಜನು ಮಗನಿಗೆ ಮರಣದಂಡನೆಯನ್ನು ವಿಧಿಸಿ ತಾನೂ ಆತ್ಮಹತ್ಯೆ ಮಾಡಿಕೊಂಡನು ; ಆತನ ಪರಿವಾರದವರಲ್ಲಿ ಹಲವರು ಮಡಿಯುವರು ; ಕೊನೆಯಲ್ಲಿ ಶಿವನು ಪ್ರತ್ಯಕ್ಷನಾಗಿ ಭಕ್ತರಿಗೆ ಮುಕ್ತಿಯನ್ನು ಕೊಡುವನು—ಇದೇ ಈ ಚಂಪೂಕಾವ್ಯದ ಕಥಾವಸ್ತು. ವರ ಮಲ್ಲಣಾರ್ಯರುರ್ವೀ ಕವಿರಾಜರಾಜಿನುತಮಾಗಿರೆ ವರ್ಣಕದಿಂದೆ "ಭಾವರತ್ನಾಕರಮಾಗಿ ಪೇಳ್ದರದನೊಪ್ಪಿರೆ ವಸ್ತುಕಮಾಗಿ....ಹರಿಹರನುದಿತ ಮಾರ್ಗದಿಂದಿದ ನೊರೆವೆಂ" (I–೭೮, ೭೯) ಎಂದು ತನ್ನ ಕಥಾವಸ್ತು ಮತ್ತು ವಿನ್ಯಾಸಕ್ರಮಗಳನ್ನು ಷಡಕ್ಷರಿಯು ಸೂಚಿಸಿದ್ದಾನೆ. ಷಡಕ್ಷರಿಯು ಸೂಚಿಸಿದ್ದಾನೆ. ಷಡಕ್ಷರಿಯ ಭಾಷೆ ಸಂಸ್ಕೃತಪ್ರಚುರವಾಗಿದೆ. ಶೈಲಿ ನಿರರ್ಗಳವಾದರೂ ಬಿಗಿಯಾಗಿದೆ. ವರ್ಣನೆಗಳಲ್ಲಿ ಕವಿಸಮಯಗಳ ಪ್ರಭಾವವಿದ್ದರೂ ಸ್ವಾತಂತ್ರ್ಯದ ಕಳೆ ಇದ್ದೇ ಇರುತ್ತದೆ. "ನಿಸರ್ಗಚಿತ್ರವನ್ನು ಇದ್ದಕ್ಕಿದ್ದ ಹಾಗೆ ಸ್ವಭಾವೋಕ್ತಿಯ ಕುಶಲ ಕುಂಚದಿಂದ ಬರೆಯುವಂತೆ ಕಲ್ಪನೆಗಳನ್ನು ಒಂದರಮೇಲೊಂದು ತೂರುವಲ್ಲಿಯೂ ಮೇಲಾದ ಕನ್ನಡ ಕವಿಗಳಲ್ಲಿ ಅವನೊಬ್ಬನು. ಅವುಗಳಲ್ಲಿ ವಿದಗ್ಧತೆ, ಚಮತ್ಕೃತಿಗಳ ಪ್ರಾಬಲ್ಯವಿದೆ, ಪ್ರತಿಭೆಯ ಉಜ್ವಲತೆಯೂ ಇದೆ."[1] ಗ್ರಂಥದ ಆದಿಯಲ್ಲಿ ಶೃಂಗಾರರಸದ ವಿಭವವನ್ನು ಧಾರಾಳವಾಗಿ ಕಂಡರೂ ಕೊನೆಯಲ್ಲಿ ಕರುಣ ಭಕ್ತಿರಸಗಳ ವಿಜಯವನ್ನು ಕಾಣುತ್ತೇವೆ.

ಪಾತ್ರಚಿತ್ರಣದಲ್ಲಿ ನಾಯಕನಾದ ರಾಜಶೇಖರನು ಎಲ್ಲ ಚಂಪೂ ಸಂಪ್ರದಾಯದ ನಾಯಕರಂತೆ ೨೮ "ಅಂಗಗಳ" ಅಲಂಕಾರಗಳಿಂದ ಕಂಗೊಳಿಸುತ್ತಾನೆ. ಇದರಲ್ಲಿ ಅಂಥ ವೈಶಿಷ್ಟ್ಯವೇನೂ ಇರುವುದಿಲ್ಲ. ಕಾವ್ಯವನ್ನು ಅತ್ಯಂತ ರಮಣೀಯವಾಗಿ ಮಾಡಿದ ಚಿತ್ರಣವೆಂದರೆ ತಾಯಿ ತಿರುಕೊಳವಿನಾಚಿಯದು.

---

1 ಕ. ಸಾ. ಚ. ಪು. ೩೫೦.

೫ನೆಯ ಆಶ್ವಾಸದಲ್ಲಿ ಬರುವ ತಿರುಕೊಳವಿನಾಚಿ ಪ್ರಲಾಪವು ಕನ್ನಡ ಸಾಹಿತ್ಯ ದೊಳಗಣ ಅಮರ ಸನ್ನಿವೇಶ ರಚನೆಗಳಲ್ಲೊಂದು. ಅತ್ಯಂತ ಸ್ವಾಭಾವಿಕವಾದ ಕರುಣರಸದ ಘಟ್ಟಿಯದು :

ವ||....ಆ ಪುರಜನಂ ಕಂಡೀ ಮಡಿದ ಶಿಶುವಿನಳದೆಂದು ತಿಳಿದಳವಳಿದು ಪಳಯಿಸುವಳಂ ಕರೆದು ನೆರೆದ ಜನದೊಳ್ ಪುಗಿಸಿ ನರೇಂದ್ರತುರಗ ಖುರಹ ತಿಯಿಂ ಮಡಿದನೆಂದು ತೊಟ್ಟನೆ ತೋರಲೊಡನಾ ರುಂಡಮುಂ ಮುಂಡಮುಂ ಕಂಡಡವಿಗಿರ್ಚುಗೊಂಡ ಪುಲ್ಲೆಯಂತೆ ಹರಣಂ ಹಮ್ಮೈಸಿ ಪರ್ದೆರಗಿ ದುರಗಿ ಯಂತೆ ಮಿಡುಮಿಡನೆ ಮಿಡುಕಿ ಕಡಿವಡದೆಳವಳ್ಳಿಯಂತೆ ಕೊರಗಿ ಪೊಸೆದಿಟ್ಟ ಪೂಮಾಲೆಯಂತೆ ಕಂದಿ ಕುಂದಿ ಮಂದೈಸಿದಳಲಿಂ ಮುಂದುಗೆಟ್ಟು ಕೆಟ್ಟೆಂ ಕೆಟ್ಟೆನೆಂದು ಬಸಿರಂ ಪೊಗೆದು ದೆಸೆದೆಸೆಗೆ ಬಾಯಂ ಬಿಟ್ಟು ಮೊರೆಯಿಟ್ಟು ಮರುಗಿ....

ಎಂದಾ ಕಬಂಧಮನೆತ್ತಿ ತೊಡೆಯೊಳಿಟ್ಟಾ ರುಂಡಮಂ ಕರಯುಗದೊಳ್ಪಿ ಡಿದು ಮೊಗದೊಳ್ಮುಸುಂಕಿದ ಧೂಳಿಯಂ ಮೇಲುದಿನೊಳೊಯ್ಯನೊರಸಿ ಕೆಲಸ ರಿದ ಮಾಂಗಾಯ್ಗಳನೋಸರಿಸಿ ಗಲ್ಲಮಂ ಪಿಡಿದು ಮೆಲ್ಲನಲುಗಿ ಮುದ್ದಿಸಿ ಮುಂಡಾಡಿ ನೋಡಿ ಮೇರೆದಪ್ಪಿದಳಲಂ ಸೈರಿಸಲಾರದೆ—

ಹಾ ಮಗನೆ ಹಾ ಮನೋಜ್ಞನೆ
ಹಾ ಮುದ್ದುಗ ಹಾ ಮದೇಭಗತಿ ಮಂಜುಳ ಹಾ ।
ಹಾ ಮಧುರವಾಣಿ ಹಾ ಮ
ತ್ಪ್ರೇಮಾಸ್ಪದ ಹಾ ಮದೀಶವಂಶಲಲಾಮಾ ॥ (XIII–೧೦೬)

ಎಲ್ಲಿಯ ಹಯಮೆಲ್ಲಿಯ ನೃಪ
ನೆಲ್ಲಿಯ ವೈಹಾಳಿಯೆಲ್ಲಿಯತಿಕಳಕಳಮಿಂ ।
ತೆಲ್ಲಿಯ ದರ್ಶನಗಮನಮಿ
ದೆಲ್ಲಿಯ ಮೃತಿ ನಿನಗೆ ಬಂದುದೆಲೆ ಸುಕುಮಾರ ॥ (೧೦೭)

ಮುನ್ನರುವರಳಿದಳನೆಲೆ
ನಿನ್ನಂ ನೆರೆ ನೋಡಿ ಮಗನೆ ಮರೆದಿರ್ದೆಂ ಪೇಳ್ ।
ಇನ್ನಾರಿಂದಂ ಮರೆದಿಪೆ
ನೆನ್ನೊಳಗುಸಿರ್ಚುಮ್ಮನಿರದಿರಲೆ ತನುಜಾತಾ ॥ (೧೦೮)

ಇನ್ನೂ ವಿಧವಿಧವಾಗಿ ತಾಯಿ ತಿರುಕೊಳವಿನಾಚಿಯು ಹಲುಬುವಳು. ಈ ದುಃಖಸ್ರೋತವು ಬಹಳ ಸಹಜವಾಗಿ ಹರಿಯುತ್ತಿದೆ.

ಸತ್ಯೇಂದ್ರಚೋಳನು ತಿರುಕೊಳವಿನಾಚಿಯ ದೂರನ್ನು ಕೇಳಿದಾಗಿನ ಅವನ ಇರವನ್ನು ಕವಿ ಬಡಬಾನಲನನ್ನೂ ಜಲವನ್ನೂ ಏಕಕಾಲದಲ್ಲಿ ಧರಿಸಿರುವ ಸಮುದ್ರಕ್ಕೆ ಹೋಲಿಸಿರುವುದು ಎಷ್ಟು ಮನೋಜ್ಞವಾಗಿದೆ!

ಬಡಬಾನಳಮಂ ಜಲಮಂ
ಕಡಲೊಡನಾಂತಂತೆ ಕಾಯ್ಪುಮಂ ಕರುಣಮನಾಂ।
ತೊಡನೊಪ್ಪಿದನಾತ್ಮಜನೊ
ಳ್ಕಡುಶೋಕಂಗೈವ ಸುದತಿಯೊಳ್ ಸತ್ಯೇಂದ್ರಂ ॥ (XIII–೧೬೦)

## ಬೇರೆ ಉದಾಹರಣೆಗಳು

ಷಡಕ್ಷರಿಯ ವರಕವಿತ್ವದ ವೀರವಾಣಿಯೊಂದು :

ಆರಾರೇರರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವ ಕವಿತಾ ಚಿಂ।
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ॥

ಷಡಕ್ಷರಿಗೆ ಮಾರಾರಿಯ ಕೃಪೆ ಚೆನ್ನಾಗಿದ್ದಿತು.

## ಕೃತಿಯನ್ನು ಹೇಗೆ ಹೇಳತಕ್ಕದ್ದು ?

ಕವಿ ವಿಬುಧರ ಕಿವಿಯೊಳ್
ಸೂಸುವ ನವರಸಮಿಳಿದು ತೀವಿ ತನುವಂ ಮನವಂ।
ಕವಿದು ಪೊರಸೂಸಿತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ ॥ (I–೫೨)

'ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ' (ಅರ್ಥಾಂತರ ನ್ಯಾಸದ ಸೌಂದರ್ಯ) :

ಜಲನಿಧಿ ಜಲಮುಂ ಜಲಧ್ಯ
ತ್ಕುಲಕ್ಕೆ ನಲಿದಿತ್ತು ದತ್ತ ಮಿತ್ರನದೀ ನಿ ।
ರ್ಮಲ ಸಲಿಲಂ ದೊರೆದುದು ಗಡ
ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ॥ (I–೯೬)

ದ್ರಾವಿಡ ದೇಶದಲ್ಲಿನ 'ಗಂಧಸಾಲೆ' ಗದ್ದೆಗಳ ರಮಣೀಯ ದೃಶ್ಯ :

ತೂಗುತೆ ತೊನೆಯುತೆ ಒಲ್ಕುತೆ
ಬಾಗುತೆ ಕಂಪಿಡುತೆ ಕನಕರುಚಿವಾಳುತ್ತುಂ ।
ರಾಗಿಸುತೆ ರಂಜಿಸುತೆ ಸೊಂ
ಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ ॥ (II–೧೧)

ರಾಜಶೇಖರವಿಳಾಸದ ಸಂದೇಶವಿದು :

ಹರಪೂಜೆಯಿಂದೆ ಮಿಗಿಲೀ
ಶ್ವರಭಕ್ತರ ಪೂಜೆಯೆಂಬುದಾಗಮಮದರಿಂ ।
ಹರಚರಣದ್ರೋಹದಿನೀ
ಶ್ವರಶರಣದ್ರೋಹಮಗ್ಗಳಂ ವಸುಮತಿಯೊಳ್ ॥ (XIV–೧೨)

(೩) ಚಿಕುಪಾಧ್ಯಾಯ (೧೬೯೦) : ತಿರುಮಲಾರ್ಯ, ಸಿಂಗರಾರ್ಯ, ಸಂಚಿಯ ಹೊನ್ನಮ್ಮ, ತಿಮ್ಮಕವಿ, ಚಿದಾನಂದಕವಿ, ಮಲ್ಲರಸಮುಂತಾದ ಕವಿಗಳ ಸಮಕಾಲೀನನಾಗಿ ಚಿಕುಪಾಧ್ಯಾಯನು ೧೭ನೆಯ ಶತಮಾನದ ಅಂತ್ಯಭಾಗದಲ್ಲಿದ್ದನು. ಆತನ ವಿಷ್ಣುಪುರಾಣದ ರಚನೆಯಾದುದು ಶಕ ೧೬೦೩ ಎಂದರೆ ಕ್ರಿ. ಶ. ೧೬೯೧ರಲ್ಲಿ. ಈ ಕವಿಯು ಚಿಕ್ಕದೇವರಾಯನ ಆಸ್ಥಾನ ಕವಿಯಾಗಿದ್ದುದು, ಮಾತ್ರವಲ್ಲದೆ ಮಂತ್ರಿಯಾಗಿಯೂ ಇದ್ದನು. ಈ ವಾತಾವರಣದಲ್ಲಿ ವಿಪುಲವಾಗಿ ಕನ್ನಡಕೃತಿರಚನೆಯಾಗಿತ್ತು. ಕನ್ನಡದಲ್ಲಿ ನೂತನ ಗದ್ಯಯುಗವೊಂದು ಉದಯಿಸುವುದರಲ್ಲಿದ್ದಿತು. ಚಿಕುಪಾಧ್ಯಾಯನು ಅನೇಕ ಗದ್ಯರಚನೆಗಳನ್ನೂ ಮಾಡಿದ್ದಾನೆ. ಇವನ ನಿಜವಾದ ಹೆಸರು ಲಕ್ಷ್ಮೀಪತಿ; ಚಿಕುಪಾಧ್ಯಾಯ ಎಂಬ ಹೆಸರಿನಿಂದ ರಂಗಪಂಡಿತನ ಮಗನಾದ ಇವನು ಸಂಸ್ಕೃತದಲ್ಲಿ ಪ್ರಸಿದ್ಧವಾದ ವಿಷ್ಣುಪುರಾಣವನ್ನು ಲಲಿತವಾದ ಕರ್ಣಾಟಕ ಭಾಷೆಯಲ್ಲಿ ಚಿಕ್ಕದೇವರಾಜನ ಪ್ರೀತಿಯ ಆಜ್ಞೆಯಂತೆ ಹೇಳಿರುವನೆಂಬು

ದಾಗಿ ವಿಷ್ಣುಪುರಾಣ ೩೩ನೆಯ ಆಶ್ವಾಸದ ೨೩ನೆಯ ಪದ್ಯದಿಂದ ತಿಳಿದು ಬರುತ್ತದೆ.

ಧರಣೀಶಂ ಚಿಕ್ಕದೇವರಾಜನೊಲವಿಂದಾ ಸಂಸ್ಕೃತ ಪ್ರೋಕ್ತ ವಿ
ಸ್ಫುರಿತಂ ವಿಷ್ಣುಪುರಾಣಮಂ ಸುಲಲಿತಂ ಕರ್ಣಾಟಕದೊಳ್ ವಸ್ತುಕೋ ।
ತ್ಕರಮಂ ಪೇಳೆನೆ ರಂಗಪಂಡಿತ ಕುಮಾರಂ ಪೌರುಕುತ್ಸಾನ್ವಯಂ
ವರ ಲಕ್ಷ್ಮೀಪತಿ ನಾಮಧೇಯ ಚಿಕುಪಾಧ್ಯಾಯಾಖ್ಯೆಯಿಂ ವಿಶ್ರುತಂ ॥

(XXXIII–೨೩)

ಕನ್ನಡ ಕವಿಗಳಲ್ಲಿ ಚಿಕುಪಾಧ್ಯಾಯನಷ್ಟು ಅಧಿಕ ಸಂಖ್ಯೆಯಲ್ಲಿ ಕೃತಿರಚನೆ ಮಾಡಿದವರು ಪ್ರಾಯಶಃ ಬೇರೆ ಯಾರೂ ಹಿಂದೆ ಇದ್ದಿರಲಾರರು. ಕವಿಚರಿತೆಕಾರರು ಈತನ ಕೃತಿಗಳನ್ನು ೩೦ಕ್ಕಿಂತಲೂ ಮೇಲೆ ಲೆಕ್ಕ ಹಾಕಿರುವರು. ಇವುಗಳಲ್ಲಿ ರುಕ್ಮಾಂಗದಚರಿತ್ರೆ, ವಿಷ್ಣುಪುರಾಣ, ದಿವ್ಯಸೂರಿಚರಿತ್ರೆ, ಕಮಲಾಚಲ ಮಹಾತ್ಮ್ಯ, ಇತ್ಯಾದಿ ಚಂಪೂಗ್ರಂಥಗಳೂ ಯದುಗಿರಿ ಮಹಾತ್ಮ್ಯ, ಇತ್ಯಾದಿ ಗದ್ಯಗ್ರಂಥಗಳೂ ಶೃಂಗಾರಶತಕ, ನೀತಿಶತಕ, ಇತ್ಯಾದಿ ಸಾಂಗತ್ಯಕೃತಿಗಳೂ, ತಿರುವಾಯ್ಮೊಳಿ ಟೀಕೆ, ವೈದ್ಯಾಮೃತ ಟೀಕೆ, ಇತ್ಯಾದಿ ಟೀಕಾಗ್ರಂಥಗಳು ಚಿಕುಪಾಧ್ಯಾಯನ ಅಗಾಧಪಾಂಡಿತ್ಯವನ್ನೂ ಕೃತಿವೈವಿಧ್ಯತೆಯನ್ನೂ ಸೂಚಿಸುತ್ತವೆ.

ಪ್ರಾಚೀನ ಜೈನ ವೀರಶೈವ ಕವಿಗಳು ತಮ್ಮ ಧಾರ್ಮಿಕ ಗ್ರಂಥಗಳನ್ನು ಚಂಪೂರೂಪದಲ್ಲಿ ಬರೆದಂತೆ ವಿಶಿಷ್ಟಾದ್ವೈತ ದರ್ಶನಕ್ಕನುಸಾರವಾಗಿ ಈತನು ಕೆಲವು ಧಾರ್ಮಿಕ ಗ್ರಂಥಗಳನ್ನು ಚಂಪೂರೂಪದಲ್ಲಿ ಬರೆದನು. ಜೈನರು ಈ ಮಾರ್ಗವನ್ನು ಬಿಟ್ಟಿದ್ದರು. ಚಂಪೂಕೃತಿಗಳಲ್ಲಿ ಇವನು ಬಹಳ ಸಂಸ್ಕೃತ ಭೂಯಿಷ್ಠವಾದ ಭಾಷೆಯನ್ನೇ ಪ್ರಯೋಗಿಸಿದ್ದಾನೆ. ಕೆಲವೆಡೆ ಬಂದ ಪ್ರಯೋಗಗಳು ಅಪ್ರಸಿದ್ಧವೂ ಕ್ಲಿಷ್ಟವೂ ಆಗಿವೆ. ಅಂತೂ ಚಂಪೂವಿನ ಅಸ್ತಮಾನ ಸಮಯದಲ್ಲಿ ಕವಿದ ಮೋಡವನ್ನು ತೊಲಗಿಸಿ ಸ್ವಲ್ಪ ಸಂಜೆಯ ಕೆಂಬೆಳಕನ್ನು ಚಿಕುಪಾಧ್ಯಾಯನು ಬೀರಿದ್ದಾನೆ.

ಈತನಿಗೆ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲಿಯೂ ವಿಶೇಷ ಪಾಂಡಿತ್ಯ

ವಿದ್ದಿತು. ಇವನ ಸಾಂಗತ್ಯ ಕೃತಿಗಳು ಸರಳವಾಗಿವೆ; ಪದ್ಯಶೈಲಿಗಿಂತ ಗದ್ಯಶೈಲಿ ಹೆಚ್ಚು ಸುಂದರವಾಗಿದೆ. ಹೊಸಗನ್ನಡ ಗದ್ಯದ ಆದ್ಯನಿರ್ಮಾಪಕರಲ್ಲಿ ಚಿಕು ಪಾಧ್ಯಾಯನಿಗೆ ಅಗ್ರಸ್ಥಾನ ಸಲ್ಲತಕ್ಕದ್ದೆನ್ನಬಹುದು. ಆತನಿಂದ ಗದ್ಯದಲ್ಲಿ ರಚಿತವಾದ ವಿಷ್ಣುಪುರಾಣದ ಪಂಚಮಾಂಶದ ಪ್ರಾರಂಭ ಹೀಗಿದೆ :

"ಎಲೈ ಪರಾಶರ ಮುನಿಯೇ, ಪೂರ್ವಾಂಶದಲ್ಲಿ ಚಂದ್ರಸೂರ್ಯಾಂಶ ಸಮುದ್ಭವರಾದ ರಾಯರ ವಂಶವಿಸ್ತಾರವನ್ನೂ ಆ ವಂಶಾನುಚರಿತವನ್ನೂ ನಿರೂಪಿಸಿದಿರಿ. ಆ ಪರಮಾತ್ಮನಾದ ವಿಷ್ಣುವು ನಿಜಾಂಶದಿಂದ ಯದುಕುಲ ದೊಳವತರಿಸಿ ಲೋಕಹಿತಾರ್ಥನಾಗಿ ಆವಾವ ಕೃತ್ಯಗಳನ್ನೆಸಗಿದನು ? ಎಂತು ಲೋಕದೊಳ್ ಪ್ರವರ್ತಿಸಿದನು ? ಅದನ್ನೆಲ್ಲವನ್ನು ಚೆನ್ನಾಗಿ ಕೇಳಬೇಕಾಗಿ ಇದೆ, ವಿಸ್ತರಿಸಿ ಪೇಳತಕ್ಕದ್ದು ಎಂದು ಬೆಸಗೊಂಡ ಮೈತ್ರೇಯನಿಗೆ ಪರಾಶರ ಮುನಿಯು ಇಂತೆಂದನು"—ಇಲ್ಲಿ ನಡುಗನ್ನಡವು ಹೊಸಗನ್ನಡವಾಗಿ ತಿರುಗುವು ದನ್ನು ಗಮನಿಸಬಹುದು.[1]

ಚಿಕುಪಾಧ್ಯಾಯನ ಕವಿತೆಯಲ್ಲಿ ಪ್ರತಿಭಾಪೂರ್ಣವಾದ ನವೀನತೆ ಇರುವುದಿಲ್ಲ; ಪಾಂಡಿತ್ಯಬಲದಿಂದ ಸಂಪ್ರದಾಯ ಮಾರ್ಗವನ್ನೇ ತುಳಿದು ವಿಸ್ತಾರವಾದ ಕ್ಷೇತ್ರವನ್ನು ವಿಹರಿಸಿದ್ದಾನೆ. ಭಕ್ತಿರಸಧಾರೆಯಲ್ಲಿ ಹೆಚ್ಚಾದ ರಮಣೀಯತೆ ಬಂದುದುಂಟು. ಕೆಲವು ಚಿಕುಪಾಧ್ಯಾಯನ ಉತ್ತಮ ರಚನೆಗಳು :

### ಅಕ್ರೂರನು ಮಾಡುವ ಕೃಷ್ಣಸ್ತುತಿ

ನೀನೇ ಬ್ರಹ್ಮನುಮೀಶನುಂ ರವಿ ವಿಧಾತ್ರಂ ಧಾತೃವುಂ ಶಕ್ರನುಂ
ನೀನೇ ವಾಯುವುಮಗ್ನಿಯುಂ ವರುಣನುಂ ವಿತ್ತೇಶನುಂ ಧರ್ಮನುಂ ।
ನೀನೇ ಯಿಂದುವುಮೆಲ್ಲಮುಂ ಬಗೆಯೆ ನೀನೇ ವಿಶ್ವವಿಶ್ವಂಗಳಂ
ನೀನಿಂತಾಗಿ ಪೊದಲ್ದು ರಕ್ಷಿಸುವೆ ತತ್ತಚ್ಛಕ್ತಿಭೇದಂಗಳಿಂ ॥

(ವಿ. ಪು. IV–೧೫)

---

1 ವಿಷ್ಣುಪುರಾಣ, ಮದರಾಸು ವಿಶ್ವವಿದ್ಯಾನಿಲಯ, ಪು. ೧೪.

ಪರಸೇವೆಯೆಂಬುದಾರಯೆ
ಧರೆಯೊಳ್ ಬಹು ಕಷ್ಟಮಾಗಿ ತೋರ್ಕುಂ ಸತತಂ ।
ಪರಸೇವಾಪರಮೆನಿಸುವ
ನರಜನ್ಮಕ್ಕೆ ಸೌಖ್ಯಮೊಳವೆ ಪೇಳೆಲೆ ದೇವಾ ॥ (ಎ. ಫ. IV–೧೫೦)

## ೫. ಶಾಸನ ಸಾಹಿತ್ಯ[1]

ಕನ್ನಡ ನಾಡಿನಲ್ಲಿ ಅನೇಕ ಪ್ರಾಚೀನ ಶಾಸನಗಳಿರುತ್ತವೆ. ಹಿಂದೆ ಸೂಚಿಸಿದ್ದ ಕ್ರಿ. ಶ. ೪೫೦ರ ಹಲ್ಮಿಡಿ ಶಾಸನವೇ ಈವರೆಗೆ ಉಪಲಬ್ಧವಾದ ಕನ್ನಡ ಶಾಸನಗಳಲ್ಲಿ ಅತ್ಯಂತ ಪ್ರಾಚೀನಕಾಲದ್ದು. ಮತ್ತೆ ಸುಮಾರು ಕ್ರಿ. ಶ. ೬೦೦ ರಿಂದ ಮುಂದಕ್ಕೆ ಕನ್ನಡ ಶಾಸನಗಳು ಅಧಿಕ ಸಂಖ್ಯೆಯಲ್ಲಿ ದೊರೆತಿವೆ. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಕಳಚೂರ್ಯ, ಹೊಯ್ಸಳ, ವಿಜಯನಗರ, ಮೈಸೂರು ಮೊದಲಾದ ಅರಸುಮನೆತನಗಳ ಕಾಲಕ್ಕೆ ಅವು ಸಂಬಂಧಿಸಿರುತ್ತವೆ. ರಾಜರೂ, ಸಾಮಂತರೂ, ದಂಡನಾಯಕರೂ ಇತರ ಪ್ರಮುಖರೂ ಅವುಗಳನ್ನು ಬರೆಸಿರುತ್ತಾರೆ. ಕರ್ಣಾಟಕದೇಶದ ಚರಿತ್ರೆಯನ್ನು ಬರೆಯುವವರಿಗೆ ಶಾಸನಗಳು ಅತ್ಯಂತ ಉಪಯುಕ್ತವಾದ ಸಾಮಗ್ರಿಯಾಗಿವೆ.

ಚಾರಿತ್ರಾಂಶಗಳಲ್ಲದೆ ಬೇರೆ ಕೆಲವು ಗುಣಗಳು ಶಾಸನಗಳಲ್ಲಿವೆ. ಅವಲ್ಲಿ ಕೆಲವು ಉತ್ತಮ ಸಾಹಿತ್ಯಕೃತಿಗಳಾಗಿ ಶೋಭಿಸುತ್ತವೆ. ಸಮಾಜ ಚಿತ್ರಗಳನ್ನು ಕಾಣಕೆ ಮಾಡಿವೆ. ವೀರರ ಶೌರ್ಯಧೈರ್ಯಗಳ ವರ್ಣನೆಗಳು, ಸಾರ್ವಜನಿಕ ಸಂಸ್ಥೆಗಳಿಗೆ ಬಿಟ್ಟ ದತ್ತಿಗಳು, ತನ್ಮೂಲಕ ವ್ಯಕ್ತವಾಗುವ ಔದಾರ್ಯ, ಪ್ರಾಮಾಣಿಕತೆ, ಸ್ವಾಮಿನಿಷ್ಠೆ, ಶಿಸ್ತು, ಆದರ, ಗೌರವ, ಕೃತಜ್ಞತೆ, ಸಹಾನುಭೂತಿ, ಸಹಾಯ ಮೊದಲಾದ ಸಂಸ್ಕೃತಿ ವೈಶಿಷ್ಟ್ಯಗಳು ಅವುಗಳಲ್ಲಿ

———

1 ಇದನ್ನು ಬರೆಯುವಲ್ಲಿ ಈ ಗ್ರಂಥಕರ್ತನ 'ಕನ್ನಡ ಸಂಸ್ಕೃತಿ' ಎಂಬ ಲೇಖನದ ಪ್ರಯೋಜನವನ್ನು ಪಡೆಯಲಾಗಿದೆ.

ಆಚಂದ್ರಾರ್ಕವಾಗಿ ಕಂಗೊಳಿಸುವುವು. ಗದ್ಯರೂಪದಲ್ಲಿ ಅಥವಾ ಚಂಪೂ ರೂಪದಲ್ಲಿ ಅವು ರಚಿತವಾಗಿವೆ.

ನಾಗಚಂದ್ರ ಜನ್ನರಂಥ ಶ್ರೇಷ್ಠ ಕವಿಗಳು ಶಾಸನರಚನೆ ಮಾಡಿರುವ ರೆಂದರೆ ಶಾಸನಗಳ ಸಾಹಿತ್ಯಯೋಗ್ಯತೆಯನ್ನು ಬೇರೆ ಹೇಳಬೇಕಾಗಿಲ್ಲ. ಅನೇಕ ಉತ್ತಮ ಶಾಸನಕವಿಗಳ ವಿಚಾರ ತಿಳಿದುಬರಲಿಲ್ಲ. ರಾ॥ ನರಸಿಂಹಾ ಚಾರ್ಯರೂ, ಡಾ॥ ವೆಂಕಟಸುಬ್ಬಯ್ಯನವರೂ, ಗೋವಿಂದ ಪೈಗಳೂ, ತಿರುಮಲೆ ತಾತಾಚಾರ್ಯರೂ ಈ ದಿಸೆಯಲ್ಲಿ ಬಹಳ ಶ್ರಮದಿಂದ ದುಡಿದಿದ್ದಾರೆ ಕವಿಗಳ ಕುಲಗೋತ್ರಗಳ ವಿಚಾರ ಹೇಗೂ ಇರಲಿ, ಅವರು ರಚಿಸಿದ ಕೆಲವು ಶಾಸನಗಳ ಸಾಹಿತ್ಯ ಸೌಂದರ್ಯವನ್ನು ಹೇಳತೀರದು. ರಾ॥ ನರಸಿಂಹಾಚಾರ್ಯರು ಅವುಗಳಿಗೆ ಮನಸೋತು ಶಾಸನಪದ್ಯಮಂಜರಿ ಎಂಬ ರತ್ನಮಾಲೆಯನ್ನು ಕಟ್ಟಿದ್ದಾರೆ.

ಈ ಅನರ್ಘರತ್ನಗಳ ಪ್ರಕಾಶವನ್ನು ಒಂದಿಷ್ಟು ಸಮೀಕ್ಷಿಸೋಣ—

ಶ್ರವಣಬೆಳ್ಗೊಳದ ೨೬, ೨೭, ೮೮ನೆಯ ಶಾಸನಗಳು ಜ್ಞಾನವೈರಾಗ್ಯಗಳ ಅಮರಚಿತ್ರಗಳು. ಸಸಿಮತಿಗಂತಿಯರಂಥ ಸದ್ಧರ್ಮಚರಿತೆಯ ಸ್ತ್ರೀರತ್ನಗಳು ನೋಂಪನ್ನಾಚರಿಸಿ ಮುಕ್ತಿಸಾಮ್ರಾಜ್ಯವನ್ನು ಪಡೆದರು. ನಂದಿಸೇನ ಪ್ರವರ ಮುನಿವರನು ಸನ್ಯಾಸವನ್ನು ಕೈಕೊಂಡು ದೇವಲೋಕಕ್ಕೆ ಸಂದನಂತೆ. ಎಷ್ಟು ಸುಂದರವಾದ ಭಾಷಾಶೈಲಿಗಳಲ್ಲಿ ಈ ಶಾಸನ ರಚಿತವಾಗಿದೆ. ಇದರಿಂದ ಒಂದು ಪದ್ಯ—

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ ತೋಱಿ ಬೇಗಂ
ಪಿರಿಗುಂ ಶ್ರೀರೂಪಲೀಲಾಧನವಿಭವ ಮಹಾರಾಶಿಗಳ್ ನಿಲ್ಲವಾರ್ಗಂ ।
ಪರಮಾರ್ಥಂ ಮೆಚ್ಚಿ ನಾನೀಧರಣಿಯುಳಿರವಾನೆಂದು ಸನ್ಯಾಸನಂ ಗೆ
ಯ್ದುರುಸತ್ವನ್ ನಂದಿಸೇನ ಪ್ರವರ ಮುನಿಪನ್ ದೇವಲೋಕಕ್ಕೆ ಸಂದಾನ್.॥

(ಶ್ರ. ಬೆ. ೮೮, ಕ್ರಿ. ಶ. ೭೦೦)

ಇಲ್ಲಿ 'ಉಳ್', 'ಸಂದಾನ್' ಮೊದಲಾದ ಪೂರ್ವದ ಹಳಗನ್ನಡ ಪ್ರಯೋಗವನ್ನು ಗಮನಿಸಬಹುದು. ಕಾಮನಬಿಲ್ಲು, ಮಿಂಚು, ಮಂಜುಗಳಿಗೆ

'ಶ್ರೀರೂಪಲೀಲಾಧನವಿಭವ'ಗಳನ್ನು ಹೋಲಿಸಿರುವುದು ಎಷ್ಟು ಉಚಿತವಾಗಿದೆ.

ಹೊಯ್ಸಳ ಬಲ್ಲಾಳದೇವನ ಕಡೆಯಿಂದ ಹಾನುಗಲ್ಲ ಕೋಟೆಯ ಕಾಳಗದಲ್ಲಿ ಮಾಚಗೌಂಡನ ಕಲಿರಾಯನು ಕಲಿತನದಿಂದ ಕಾದಿ ಮಡಿದ ಚಿತ್ರವಿದು—

ಸುರಿವ ಸರಲ್ಗೆ ಪಾಯ್ವ ಚದುರಂಗದಳಕ್ಕಣೆವಾರ್ದು ನೂಂಕುವಾ
ಸುರತರಮಪ್ಪ ಸಿಂಧುರಘಟಾವಳಿಗಳ್ಗದೆ ಕಾದಿ ಬೀರರ ।
ಚ್ಚರಿವಡೆ ಮಾಚಗೌಂಡನ ಮಗಂ ಕಲಿರಾಯನೆ ಕೀರ್ತಿಯುಂ ವಸುಂ
ಧರೆ ಪೊಗಟ್ಟನ್ನೆಗಂ ಪಡೆದನಾಹವದೊಳ್ ರಣರಂಗಶೂದ್ರಕಂ ॥

(ಬೇಲೂರು ೨೦೨–ಕ್ರಿ. ಶ. ೧೧೩೮)

ವೀರಗಲ್ಲುಗಳೂ ಮಾಸ್ತಿಕಲ್ಲುಗಳೂ ಮಹಾವ್ಯಕ್ತಿಗಳ ಪಾವನಚರಿತೆಯನ್ನು ಸಾರುತ್ತವೆ. ಸಾವಿಯಬ್ಬೆ ಎಂಬ ಮಹಾಸ್ತ್ರೀಯನ್ನು ಅಭಿವರ್ಣಿಸಿದ ರೀತಿಯಿದು—

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲನೆ ಸಂದ ರೇವತೀ ।
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್ ।
ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ ಜಿನೇಂದ್ರಭಕ್ತಿ ಸ
ದ್ಭಾವದೆ ಸಾವಿಯಬ್ಬೆ ಜಿನಶಾಸನ ದೇವತೆ (ತಾನ) ಕಾಣಿರೇ ॥

(ಶ್ರ. ಬೆ. ೧೩೯–೯೫೦)

ಇನ್ನೊಬ್ಬ ಕವಿ ಚಾಲುಕ್ಯ ಆಹವಮಲ್ಲನ ಶೀಲವನ್ನು ಹೀಗೆ ಕೊಂಡಾಡುತ್ತಾನೆ :

ಪ್ರವಿಮಳ ಕೀರ್ತಿಯೊಳ್ ವಿಭವದೊಳ್ ಸುಚರಿತ್ರದೊಳಾರ್ಪಿನೊಳ್ ಮಹಾ
ಹವಜಯದೊಳ್ ಗುಣೋನ್ನತಿಯೊಳಾಹವಮಲ್ಲನೊಳಾಂ ಸಮಾನಮಂ ।
ಬವನಿಪನೇಂ ಯಯಾತಿಯೊ ಭಗೀರಥನೋ ಪುರುಕುತ್ಸನೋ ಪುರೂ
ರವನೋ ದಿಲೀಪನೋ ಭರತನೋ ನಳನೋ ನಹುಷಾವನೀಶನೋ ॥

(ಶಿಕಾರಿಪುರ ೧೧೮–೯೫೪)

ಕನ್ನಡನಾಡಿನ ವೈಶ್ಯಜನರ ಪ್ರಾಮಾಣಿಕತೆಯನ್ನು ಶಾಸನಗಳು ಹೀಗೆ ಘೋಷಿಸಿವೆ :

ಕಿಡುವೊಡಮೆಯನೊಂದನೆ ಕೊ
ಟ್ಟೆಡೆ ಮಡಗದಿಹಂಪರಂಗಳೆಂಬೆರಡು ಮನಂ ।
ಗಡಿಯೊಳ್ ಕಿಡದೊಡಮೆಯನಡಿ
ಗಡಿಗಾರ್ಜಿಪರಲ್ಲಿ ನೆಗಟ್ದಿ ಪುರದ ಜನಂಗಳ್ ॥

(ಶಿಕಾರಿಪುರ ೧೦೦–೧೧೨೦)

ಲಲಿತವಾದ ಬಂಧ ; ಸರಳವಾದ ಶೈಲಿ.

ಆ ಪುರದ ಜನರು ಅಂಗಡಿಗಳಲ್ಲಲ್ಲಿ 'ಕಿಡುವೊಡವೆಗಳ' ನ್ಯಾಯವಾದ ಮಾರಾಟದಿಂದ "ಇಹಂಪರಂಗಳೆಂಬ" ಕಿಡದೊಡವೆಯನ್ನು ಸಂಪಾದಿಸುತ್ತಿದ್ದರಂತೆ. ಇದರಿಂದ ಮಿಗಿಲಾದ ಲಾಭವಾವುದು ?

ಮನುಮುನಿಮಾರ್ಗರೆಂದು ಸುಜನಾಶ್ರಯರೆಂದು ಮಹಾನುರಾಗರೆಂ
ದನುಪಮರೆಂದು ಧರ್ಮಗುಣರೆಂದು ಸಮಸ್ತ ಸುಗಂಧ ವಸ್ತು ವಾ ।
ಹನ ಕನಕಾದಿ ಲಕ್ಷಣವಿಚಕ್ಷಣರೆಂದು ಮಹಾನುಭಾವರೆಂ
ದನುದಿನಮುರ್ಚ್ವಿಯಿಂ ಪೊಗಟ್ಪುದೀಧರೆಯಿಾ ನಿಡುಗಲ್ಲ ವೈಶ್ಯರಂ ॥

ಧರಣಿಗೆ ಮೇಲೆ ಸರಿತ್ಪತಿ
ಶರಧಿಗೆ ದೆಸೆದೆಸೆಗೆ ದಿಗ್ಗಜಂ ತಾನಾಯ್ತಾ ।
ಧರೆಗೆ ಶರನಿಧಿಗೆ ದಶದಿ
ಕ್ಕರಿಗಂ ಮಿಾಱಿದುದು ವೈಶ್ಯಜನದೊಂದು ಜಸಂ ॥

(ಪಾವಗಡ ೫೦–೧೨೪೮)

ನಿಡುಗಲ್ಲ ವೈಶ್ಯರ ಗುಣಾವಳಿಯನ್ನು ಕೊಂಡು ಕೊನರುವ ಪ್ರಶಸ್ತಿಕಾವ್ಯದಂತಿದೆ ಈ ಶಾಸನ.

ದೇಶಭಕ್ತಿಯಿಂದ ಹಾಡಿದ ಕೆಲವು ಶಾಸನಪದ್ಯಗಳು ಎಷ್ಟು ಹೃದಯಂಗಮವಾಗಿವೆ ! ಮೇಲೆ ಉದ್ಧರಿಸಿರುವ ಶಿಕಾರಿಪುರ ೧೦೦ ನೇ ಶಾಸನದಲ್ಲಿ ಬರುವ ಬಳ್ಳಿಗಾವೆಯ ಚಿತ್ರ :

ಅದು ವಿಬುಧೈಕವಾರಮಮರಾವತಿಯಂತತಿಭೋಗಿ ಸೇವ್ಯಮಂ
ತದುಂ ಪೆಸರ್ವೆತ್ತು ರಂಜಿಸುವ ಭೋಗವತೀಪುರದಂತೆ ಭಾವಿಸ ।

ಲ್ಕದು ಧನದ ಪ್ರಸೇವ್ಯಮಳಕಾಪುರದಂತೆನೆ ಬಳ್ಳಿಗಾವೆಗಾ
ವುದೊ ಪಡಿಪಟ್ಟಣಂ ನೆಗಟ್ದಿ ವಾರ್ಧಿಪರೀತ ಸಮಸ್ತ ಧಾತ್ರಿಯೊಳ್ ॥

ಸೊರಬ ೧೧೮ ನೇ ಶಾಸನದಲ್ಲಿ ಬನವಾಸಿಯನ್ನು ವರ್ಣಿಸಿದ ಕವಿ ನಿಜ ವಾಗಿಯೂ ಉತ್ತಮನು ಕಾವ್ಯರಚನೆಮಾಡಿರುವನು. ಎಂಥ ದೇಶಾಭಿಮಾನ!

ವರ ರತ್ನಾಕರದಿಂದಳಂಕರಿಸಿ ಮೆಯ್ವೆರ್ಚಿರ್ದ ಭೂದೇವಿಗಾ
ದರದಿಂ ಕುಂತಳದಂತೆ ಕುಂತಳ ಸುದೇಶಂ ತೋರ್ಕುಮಾ ದೇಶಕಾ ।
ದರಣೀಯಂ ಬನವಾಸಿದೇಶಮದು ಭೋಗಕ್ಕಾಗರಂ ಸೌಖ್ಯಸಾ
ಗರಮಾಹ್ಲಾದಕರಂ ನಿರಂತರ ವಿಳಾಸಾವಾಸಲಕ್ಷ್ಮೀಕರಂ ॥

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರವಾರಯಲ್ ಸಮ
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ರಜನಿರ್ಪ ತಾಣಮು ।
ನ್ಮದಯುವತೀ ಜನಂಗಳೆಱೆವೆಟ್ಟು ಬುಧಾಳಿಯ ಜನ್ಮಭೂಮಿಯೆಂ
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿಮಂಡಲಂ ॥

ಇವು ಪಂಪನು ದೇಶಭಕ್ತಿಯಿಂದ ಬನವಾಸಿಯನ್ನು ಕುರಿತು ಹಾಡಿದ "ಚಾಗದ ಭೋಗದಕ್ಕರದ ಗೇಯದ ಗೊಟ್ಟಿ" ಇತ್ಯಾದಿ ಮಾತನ್ನು ಸ್ಮರಣೆಗೆ ತರುತ್ತವೆ.

## ೬. ಶತಕ ಸಾಹಿತ್ಯ[1]

ಭಾರತದ ಎಲ್ಲ ಪ್ರಮುಖ ಭಾಷೆಗಳಲ್ಲಿ ಶತಕಸಾಹಿತ್ಯ ರಚನೆಯಾಗಿರು ವಂತೆ ಕಂಡುಬರುತ್ತದೆ. ಕ್ರಿ. ಶ. ೧೦೭೦ರಲ್ಲಿ ನಾಗವರ್ಮಾಚಾರ್ಯನೆಂಬ ಕವಿ ಯಿಂದ ರಚಿತವಾದ ಚಂದ್ರಚೂಡಾಮಣಿಶತಕವನ್ನು ಕನ್ನಡ ಆದ್ಯಶತಕ ಕೃತಿ ಎನ್ನಬಹುದು.

---

1 ಈ ಪ್ರಕರಣವನ್ನು ಶ್ರೀಕ್ಷೇತ್ರ ಧರ್ಮಸ್ಥಳದವರು "ಸರ್ವಧರ್ಮ ಸಮ್ಮೇಳನದ" ರಜತ ಮಹೋತ್ಸವ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿದ ಇದೇ ಲೇಖನ "ಕನ್ನಡ ಶತಕಗಳು" ಎಂಬ ಲೇಖಕನ ಆಧಾರದಿಂದ ಬರೆಯಲಾಗಿದೆ.

ಭಾರತೀಯರು ಪ್ರಾಚೀನಕಾಲದಿಂದಲೂ ೮, ೧೦, ೧೨, ೧೦೦, ೧೦೮, ೧೦೦೦ ಮೊದಲಾದ ಸಂಖ್ಯೆಗಳಿಗೆ ವಿಶೇಷ ಮಹತ್ವಕೊಟ್ಟಂತೆ ತೋರುತ್ತದೆ. ನಿಯತಸಂಖ್ಯೆಯಲ್ಲಿ ಮಂತ್ರೋಚ್ಚಾರಣೆ ಮಾಡಿದರೆ ಫಲಪ್ರಾಪ್ತಿ ಎಂಬ ನಂಬಿಕೆಯಿದ್ದಿತು. ಆದುದರಿಂದ ಅಷ್ಟಕಗಳು, ಶತಕಗಳು, ಅಷ್ಟೋತ್ತರಶತ ನಾಮಾವಳಿ, ಸಹಸ್ರನಾಮಗಳು ಪರಂಪರಾಗತವಾಗಿ ಬಂದಿವೆ. ಈ ಸಂಪ್ರದಾಯವೇ ಶತಕಸಾಹಿತ್ಯನಿರ್ಮಾಣಕ್ಕೆ ಕಾರಣವಾಗಿರಬಹುದು. ಅನೇಕ ಶತಕಗಳಲ್ಲಿ ಜ್ಞಾನಿಕವಿಗಳ ಸ್ವಾನುಭವದೊಂದಿಗೆ ಪುರಾಣಪುರುಷರ ಜೀವನ ಆದರ್ಶಗಳು ಹಾಸುಹೊಕ್ಕಾಗಿ ಬಂದಿರುವುದರಿಂದ ಅವುಗಳಿಗೆ ಪ್ರಮಾಣದ ಯೋಗ್ಯತೆ ಬಂದಿರುತ್ತದೆ.

ಕನ್ನಡ ಶತಕಗಳನ್ನು ವಿವಿಧ ಛಂಧಸ್ಸುಗಳಲ್ಲಿ ರಚಿಸಿರುವರು, 'ಆಱುಂ ಖ್ಯಾತ ಕರ್ಣಾಟಕಂ' ಎಂಬ ಪ್ರಸಿದ್ಧ ವರ್ಣವೃತ್ತಗಳು ಶತಕ ಕವಿಗಳಿಗೆ ಅತ್ಯಂತ ಪ್ರೀತಿಯವು. ಭಾಮಿನೀಷಟ್ಪದಿ, ಸಾಂಗತ್ಯ, ಕಂದಗಳಲ್ಲಿ ಕೆಲವು ಶತಕಗಳು ರಚಿತವಾಗಿವೆ. ಒಂದು ಶತಕದ ಪ್ರತಿಯೊಂದು ಪದ್ಯದಲ್ಲಿ ಒಂದೇ 'ಮಕುಟ' ವಿರುತ್ತದೆ. ಪದ್ಯಗಳು ನೂರಕ್ಕೆ ಮಿಕ್ಕಿದ್ದರೂ ಒಂದೇ 'ಮಕುಟ'ವಿರುವ ರಚನೆಯನ್ನು ತೆಲಗು ಸಾಹಿತ್ಯದಲ್ಲಿ ಶತಕವೆನ್ನುತ್ತಾರೆ. ಈ ದೃಷ್ಟಿಯಿಂದ ನೋಡಿದರೆ, ಸರ್ವಜ್ಞಪದಗಳನ್ನೂ ಡಿ.ವಿ.ಜಿ. ಯವರ ಮಂಕುತಿಮ್ಮನ ಕಗ್ಗವನ್ನೂ ಈ ಪಂಗಡಕ್ಕೆ ಸೇರಿಸಬಹುದು. ಎಲ್ಲ ಪಂಥದವರೂ ಕನ್ನಡ ಸಾಹಿತ್ಯದಲ್ಲಿ ಶತಕ ರಚನೆ ಗೈದಿರುವರು.

ಎಲ್ಲ ಶತಕ ಕವಿಗಳ ರಚನೆಗಳಿಂದ ಉದಾಹರಿಸುವುದು ಸಾಧ್ಯವಿಲ್ಲದಿರುವುದರಿಂದ, ಕೆಲವು ಕವಿಗಳಿಂದ ದಿಗ್ದರ್ಶನಾರ್ಥವಾಗಿ ಕೆಳಗೆ ಉದಾಹರಿಸಿರುತ್ತದೆ :

ಆದಿ ಕನ್ನಡ ಶತಕ ಕವಿಯಾದ ನಾಗವರ್ಮಾಚಾರ್ಯನಿಂದ (೧೦೭೦) ರಚಿತವಾದ ಚಂದ್ರಚೂಡಾಮಣಿಶತಕದಲ್ಲಿ ಉಕ್ತವಾದ ಒಂದು ನೀತಿ—ದುರಾಶೆಗೆ ಮಿತಿಯಿಲ್ಲ. ಒಂದರ ಮೇಲೆ ಮತ್ತೊಂದರ ಆಸೆ. ಈ ತೃಷ್ಣೆ ಎಂಬ ಬೆಂಕಿಯನ್ನು ತತ್ವವೆಂಬ ಅಮೃತದಿಂದ ಆರಿಸಬೇಕು—

ದೆಸೆಯಂ ನುಂಗಿಯುಮರ್ಬಿಯಂ ನೋಣೆದುಮಂಭೋರಾಸಿಯಂ ಪೀರ್ದುಮಾ
ಗಸಮಂ ತಳ್ತಡರ್ದೇಱಿಯುಂ ದಣಿಗುಮೇ ಮತ್ತೆಯ್ದುದಿರ್ಪಲ್ಲಿಗೆ ।
ಯ್ದಿಸುತಿರ್ಕುಂ ಚಲದಿಂದ ತೃಷ್ಣೆನೆಗಟ್ಟಿದ್ದಾತೃಷ್ಣಾಗ್ನಿಯಂ ಕೂಡೆಮು
ಟ್ಟಿಗಿಸಲಕ್ಕುಂ ನಿಜತತ್ವಮೆಂಬಮೃತದಿಂ ಶ್ರೀಚಂದ್ರಚೂಡಾಮಣೀ ॥

ಶ್ರೇಷ್ಠ ಶತಕಕವಿಗಳಲ್ಲಿ ಹರಿಹರನಿಗೆ ಅಗ್ರಸ್ಥಾನ. ಆತನ 'ಪಂಪಾಶತಕ', 'ರಕ್ಷಾಶತಕ'ಗಳು (೧೧೮೦) ನಿರ್ಮಲತತ್ವಭಕ್ತಿ ಪಶ್ಚಾತ್ತಾಪ ವೈರಾಗ್ಯಗಳ ತವನಿಧಿಗಳು. ಹರಿಹರನ ವಾಣಿ—ಪರಸೇವೆಯ ಕಷ್ಟವನ್ನೂ ಅದನ್ನು ಹಂಪೆ ಯಾಳ್ದನ ದಯೆಯಿಂದ ನೀಗಿದುದನ್ನೂ ಘೋಷಿಸುತ್ತಿದೆ.

ಪೋಗೆನೆ ಪೋಪ ಬಾರೆಲವೊ ಬಾರನೆ ಜೀಯ ಹಸಾದಮೆಂದು ಬೆ
ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ ।
ತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ ಸೇವಿಪ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೇ ॥

ತನ್ನ ವ್ಯಾಮೋಹಕ್ಕಾಗಿ ಮರುಗುತ್ತಾ ಪಶ್ಚಾತ್ತಾಪದಿಂದ ವಿರೂಪಾಕ್ಷನನ್ನು ಶರಣುಹೋಗುವವನು :

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನೆಮೆಂಬಿಂತಿವಂ ನಿತ್ಯಮೆಂದು
ಚ್ಚತರ ವ್ಯಾಸಂಗದಿಂ ಮೆಯ್ಮರಿಯೆದೆ ಮರುಳಾಗಿರ್ದೆನ್ನೆನಂ ದುರಾಶಾ ।
ವೃತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ ದುರ್ಧರೈನೋ
ಹತನಂ ದುರ್ಬೋಧನಂ ರಕ್ಷಿಪುದೆಳೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ॥

ಸೋಮೇಶ್ವರಶತಕ, ಅಪರಾಜಿತೇಶ್ವರ ಶತಕ (೧೫೫೭), ರತ್ನಾಕರಾಧೀಶ್ವರ ಶತಕ (೧೬೦೦), ಭರ್ತೃಹರಿಯ ನೀತಿಶತಕ (ಅನುವಾದ) (೧೮೮೦), ಶ್ರೀಚೆಲ್ವನಾರಾಯಣಶತಕ (೧೯೨೦) ಮೊದಲಾದುವು ವಿಶೇಷ ಜನಾದರಣೆಗೆ ಪಾತ್ರವಾದುವು. ಅವುಗಳಿಂದ ಕೆಲವು ಉದಾಹರಣೆಗಳು :

೧) ಸ್ವಕುಲೋದ್ಧಾರಕನಾಗಿ ಭಾಗ್ಯಯುತನಾಗಾಯುಷ್ಯಮುಳ್ಳಾತನಾ
ಗಕಳಂಕಾಸ್ಪದಳಾಗಿ ಬಾಳ್ವ ಸತಿಯಿರ್ದಾನಂದಮಂ ಮಾಳ್ಪ ಬಾ ।
ಲಕನಿರ್ದೀಶ್ವರಭಕ್ತನಾಗಿ ತನುವೊಳ್ ದಾರ್ಢ್ಯಂ ಸಮಂತೊಪ್ಪುವಾ
ಸುಖ ಪೂರ್ವಾರ್ಜಿತ ಪುಣ್ಯವಯ್ ಹರಹರಾ ಶ್ರೀಚೆನ್ನಸೋಮೇಶ್ವರಾ ॥

೨) ಶಾಸ್ತ್ರಂಬಂದೊಡೆ ಶಾಂತಿ ಸ್ವೈರಣೆ ನಿಗರ್ವಂ ನೀತಿ ಮೆಲ್ಪಾತು ಮು
ಕ್ತಿ ಸ್ತ್ರೀಚಿಂತೆ ನಿಜಾತ್ಮಚಿಂತೆ ನಿಲವೇಟಿಕ್ಕಿಂತಲ್ಲದಾ ಶಾಸ್ತ್ರದಿಂ ।
ದುಸ್ತ್ರೀಚಿಂತನೆ ದುರ್ಮುಖಂ ಕಲಹಮುದ್ಗರ್ವಂ ಮನಂಗೊಂಡೊಡಾ
ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ ॥

೩) ಕುಲದೊಳ್ ಪುಟ್ಟಿದ ಬಾಲನೊರ್ವನಡಿಯಿಂ ಸೋಂಕುತ್ತೆ ಪೆಣ್ಮಾಡಿದಂ
ಶಿಲೆಯೊಂದಂ ಕುಲನಾಥನಾದ ದಿನಪಂ ಸರ್ವಾತ್ಮಸಂಜಾತಮಂ ।
ತುಳಿವಂ ಪಾದಸಹಸ್ರದಿಂದನುದಿನಂ ಪೆಣ್ಗೈದನಿಲ್ಲಾವುದಂ
ಕುಲದಿಂದೇಂ ನಿಜಶಕ್ತಿಯಿಂದೆ ನೆಗಳ್ವರ್ ಶ್ರೀಚೆಲ್ವನಾರಾಯಣಾ ॥

## ೭. ಲಕ್ಷಣಶಾಸ್ತ್ರಗಳು

ಭಾಷೆಗೆ ಸಂಬಂಧಿಸಿದ ಶಾಸ್ತ್ರಗಳಾದ ವ್ಯಾಕರಣ, ಛಂದಸ್ಸು, ಅಲಂಕಾರ, ರಸ, ಕವಿಸಮಯ ಮೊದಲಾದುವನ್ನು ಪ್ರತಿಪಾದಿಸುವ ಗ್ರಂಥಗಳು ಕನ್ನಡದಲ್ಲಿ ಸಾಕಷ್ಟು ರಚನೆಯಾಗಿವೆ. ಕೆಲವು ನಿಘಂಟುಗಳೂ ಉಂಟು. ಅವುಗಳಲ್ಲಿ ಮುಖ್ಯವಾದುವನ್ನು ಪರಿಚಯಮಾಡಿಕೊಡುವುದು ಪ್ರಸ್ತುತದ ಉದ್ದೇಶ.

ಈಗ ಉಪಲಬ್ಧವಾಗಿರುವ ಕನ್ನಡ ಸಾಹಿತ್ಯರಾಶಿಯಲ್ಲಿ ಕವಿರಾಜಮಾರ್ಗವೇ ಆದ್ಯಗ್ರಂಥವೆಂಬುದನ್ನು ಹಿಂದೆ ಸೂಚಿಸಿರುತ್ತದೆ. ಇದರ ಕಾಲ ಕ್ರಿ. ಶ. ೯ನೆಯ ಶತಮಾನದ ಮಧ್ಯವೆನ್ನಬಹುದು. ಇದಕ್ಕಿಂತ ಸ್ವಲ್ಪ ಹಿಂದೆ ಮುಂದೆ 'ಗುಣಗಾಂಕಿಯಂ' ಅಥವಾ 'ಗುಣಗಾಂಗೀಯು' ಎಂಬೊಂದು ಛಂದೋಗ್ರಂಥವು ಕನ್ನಡದಲ್ಲಿದ್ದಿರಬೇಕೆಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥವು ದೊರೆತಿಲ್ಲ. ಕವಿಯು ತನ್ನ ಛಂದೋಗ್ರಂಥವನ್ನು ಗುಣಗ, ಗುಣಾಗಾಂಕ ಇತ್ಯಾದಿ ಬಿರುದುಗಳುಳ್ಳ ಮೂರನೆಯ ವಿಜಯಾದಿತ್ಯನೆಂಬ (೮೪೪) ಮೂಡಣ ಚಾಲುಕ್ಯ ರಾಜನಿಗೆ ಅಂಕಿತ ಮಾಡಿರಬಹುದೆಂಬುದಾಗಿ ಹೇಳುತ್ತಾರೆ.[1] ಈ ಛಂದೋಗ್ರಂಥದಲ್ಲಿ ಪ್ರತಿಪಾದ್ಯವಾಗಿರುವ ಛಂದೋ

---

[1] ಕ. ಕ. ಚ., ಸಂ. I, ಪು. ೧೨.

ವಿಷಯವನ್ನು ಗ್ರಂಥಕರ್ತೃವು ಇನಿಯಳೊಬ್ಬಳನ್ನು ಕುರಿತು ಹೇಳಿದಂತೆಯೂ, ಸಭಾವಿನಯವು ಅದರಲ್ಲಿ ನಿಬದ್ಧವಾಗಿರುವಂತೆಯೂ ತಮಿಳು ಭಾಷೆಯಲ್ಲಿ ಪ್ರಸಿದ್ಧವಾಗಿರುವ 'ಯಾಪ್ಪಾರುಂಕಲಕ್ಕಾರಿಕ್ಕೈ'[1] ಎಂಬ ಹತ್ತನೆಯ ಶತಮಾನದ ಛಂದೋಗ್ರಂಥದ ಪೀಠಿಕೆಯಲ್ಲಿ ಹೇಳಿದೆ. ಇದುವರೆಗೆ ದೊರಕಿರುವ ಛಂದಶ್ಶಾಸ್ತ್ರ ಗಳಲ್ಲಿ ಮೊದಲನೆಯ ನಾಗವರ್ಮ (೯೯೦) ವಿರಚಿತ ಛಂದೋಂಬುಧಿಯೇ ಮೊತ್ತ ಮೊದಲನೆಯದು. ಇವೆರಡಲ್ಲದೆ ೧೧೪೫ ರಲ್ಲಿದ್ದ ಪ್ರಸಿದ್ಧ ಲಾಕ್ಷಣಿಕನಾದ ಎರಡನೆಯ ನಾಗವರ್ಮನು 'ಛಂದೋವಿಚಿತಿ' ಎಂಬ ಛಂದೋಗ್ರಂಥವೊಂದನ್ನು ಬರೆದಿರಬಹುದೆನ್ನುವುದಕ್ಕೆ ಕಾರಣಗಳುಂಟು, ಆದರೆ ಅದು ದೊರೆತಿಲ್ಲ. 'ಈ ಗ್ರಂಥಕರ್ತನ ಹೆಸರೂ ನಾಗವರ್ಮನೆಂದೇ ಇರುವುದರಿಂದ, ಪ್ರಾಯಶಃ ಮುಂದಿನವರ ಭ್ರಮೆಯಿಂದ ಈ ಗ್ರಂಥಭಾಗವೂ ಈಗ ಮುದ್ರಿತವಾಗಿರುವ ಛಂದೋಂಬುಧಿಯಲ್ಲಿ ಐಕ್ಯವಾಗಿರಬಹುದು'[2] ಹೀಗೆ ಹೇಳುವುದಕ್ಕೆ ಕಾರಣಗಳುಂಟು. ಏಕೆಂದರೆ ೧೭ನೆಯ ಶತಮಾನದಲ್ಲಿ ಹುಟ್ಟಿದ ಕವಿಜಿಹ್ವಾಬಂಧನದ ಕೆಲವು ಭಾಗಗಳೂ ಇತರ ಆಧುನಿಕಗಳಾದ ಲಕ್ಷ್ಯಲಕ್ಷಣ ಪದ್ಯಗಳೂ ಈಗ ಮುದ್ರಿತವಾಗಿರುವ ಛಂದೋಂಬುಧಿಯಲ್ಲಿರುತ್ತವೆ. ತದನಂತರ ಗುಣಚಂದ್ರನ ಛಂದಸ್ಸಾರ, ಈಶ್ವರ ಕವಿಯ ಕವಿಜಿಹ್ವಾಬಂಧನ. ನಂದಿಛಂದಸ್ಸು ಇತ್ಯಾದಿ ಛಂದೋಗ್ರಂಥಗಳು ಹುಟ್ಟಿರುತ್ತವೆ.

### ೧. ನಾಗವರ್ಮ (೯೯೦)

ಕರ್ಣಾಟಕ ಕಾದಂಬರಿಯನ್ನು ರಚಿಸಿದ ಮೊದಲನೆಯ ನಾಗವರ್ಮನು 'ಛಂದೋಂಬುಧಿ'ಯೆಂಬ ಛಂದಶ್ಶಾಸ್ತ್ರ ಗ್ರಂಥವನ್ನು ರಚಿಸಿರುವನು. ಇದು ಕನ್ನಡದ ಆದ್ಯ ಛಂದೋಗ್ರಂಥವಾಗಿದೆ. ಈಶ್ವರನು ಉಮೆಗೆ ಹೇಳಿದ ಛಂದಸ್ಸನ್ನು ಪಿಂಗಳನು ಭೂಲೋಕದಲ್ಲಿ ಪ್ರಚಾರಪಡಿಸಿದಂತೆಯೂ ಅದನ್ನು ತಾನು ತನ್ನ ಮಡದಿಗೆ ಹೇಳಿದಂತೆಯೂ ಸೂಚಿಸಿದ್ದಾನೆ. ಆದುದರಿಂದ ಇವನು ಪಿಂಗಳ ಛಂದಸ್ಸನ್ನು ಅನುಸರಿಸಿದಂತೆ ತೋರುತ್ತದೆ. ಪಿಂಗಳನು ೮ ಅಧ್ಯಾಯಗಳಲ್ಲಿ ಸೂತ್ರರೂಪವಾಗಿ ಛಂದಶ್ಶಾಸ್ತ್ರವನ್ನು ಹೇಳಿರುವನು. ಇದುವರೆಗೂ

---

[1] ಎನ್ಪುದು ಕಾರಿಕ್ಕೈ.

[2] *Annals O. R.*, Vol. VII, Part I, ಛಂದಸ್ಸಾರ, ಪು. iii.

ಉಪಲಬ್ಧವಾದ ಸಂಸ್ಕೃತ ಛಂದೋಗ್ರಂಥಗಳಲ್ಲಿ ಪಿಂಗಳಛಂದಸ್ಸೇ ಅತ್ಯಂತ ಪ್ರಾಚೀನವಾದುದು. ಇವನನ್ನು ಮತ್ತಿನವರಾದ ಕೇದಾರಭಟ್ಟ ಮೊದಲಾದವರು ಅನುಸರಿಸಿರುವರು.

ಛಂದೋಂಬುಧಿಯಲ್ಲಿ ನಾಗವರ್ಮನು ಮಾತ್ರೆ, ಗುರು, ವೃತ್ತ, ಅಕ್ಷರ, ಗಣ, ಪ್ರಸ್ತಾರ, ಪ್ರಾಸ, ವಿಷಯ, ಜಾತಿ ಇತ್ಯಾದಿ ಸಂಸ್ಕೃತ ಪಾರಿಭಾಷಿಕ ಶಬ್ದಗಳನ್ನೇ ಉಪಯೋಗಿಸಿರುತ್ತಾನೆ. (ತಮಿಳಿನಲ್ಲಾದರೆ ಲಾಕ್ಷಣಿಕರು ಸ್ವತಂತ್ರವಾದ ತಮಿಳು ಸಂಜ್ಞೆಗಳನ್ನು ಮೊದಲಿನಿಂದಲೂ ಪ್ರಯೋಗಿಸುತ್ತಿದ್ದರು.) ಛಂದೋಂಬುಧಿಯಲ್ಲಿ ೬ ಅಧಿಕಾರಗಳಿವೆ. ೧ನೆಯ ಅಧಿಕಾರದಲ್ಲಿ ವಿಷ್ಣು ಮೊದಲಾದ ಪಂಚಾಯತನ ಸ್ತುತಿಯಿಂದ ಗ್ರಂಥಾರಂಭವಾಗಿ ಕವಿಯ ವಂಶಾನುವರ್ಣನೆ, ಪೋಷಕ, ಪ್ರಶಂಸೆ ಇತ್ಯಾದಿಯನ್ನು ನಿರೂಪಿಸಿ, ಪಾರಿಭಾಷಿಕ ಸಂಜ್ಞೆಗಳನ್ನು ತಿಳಿಸುತ್ತಾನೆ.

೨ನೆಯ ಅಧಿಕಾರದಲ್ಲಿ ೨೬ ವರ್ಣವೃತ್ತಗಳಲ್ಲಿ ಹುಟ್ಟುವ ಮುಖ್ಯ ಛಂದಸ್ಸುಗಳನ್ನು ನಿರ್ವಚಿಸಿರುವನು. ಲಕ್ಷಣಸೂತ್ರಗಳೇ ಲಕ್ಷ್ಯವೂ ಆಗಿರುತ್ತವೆ.

೩ನೆಯ ಅಧಿಕಾರದಲ್ಲಿ ಮಾಲಾವೃತ್ತ, ಅರ್ಧಸಮವಿಷಮವೃತ್ತ, ಉದ್ಗತಾವೃತ್ತ, ಪದ, ಚತುರೂರ್ಧ್ವ, ಅನುಷ್ಟುಪ್, ವೈತಾಳೀಯ, ಜಾತಿ, ಗಾಥೆ, ರಗಳೆ, ದಂಡಕ (ಪಾದನಿಯಮವಿಲ್ಲದುವು) ಗಳು ಪ್ರತಿಪಾದಿತವಾಗಿವೆ.

೪ನೆಯ ಅಧಿಕಾರದಲ್ಲಿ ಕಂದ ಮತ್ತು ಆರ್ಯೆಗಳಲ್ಲಿ ಬರುವ ನಾಲ್ಕು ಮಾತ್ರೆಗಳ ವಿಚಾರವನ್ನು ತಿಳಿಸಿ, ಕಂದ, ಆರ್ಯೆ, ಗೀತಿಕೆ, ಸಂಕೀರ್ಣಕ, ದುವಯಿ ಎಂಬ ಛಂದಸ್ಸುಗಳನ್ನು ನಿರ್ವಚಿಸಿದೆ.

೫ನೆಯ ಅಧಿಕಾರದಲ್ಲಿ ಕನ್ನಡ ಛಂದಸ್ಸಿನ ಜೀವಾಳವೆನಿಸಿದ ಬ್ರಹ್ಮ, ವಿಷ್ಣು, ರುದ್ರಗಣಗಳ ವಿವರಗಳನ್ನು ಹೇಳಿ, ಕನ್ನಡದ ೫ ಅಕ್ಕರಗಳು, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ, ಷಟ್ಪದಿ ಇವುಗಳನ್ನು ವಿವರಿಸಿದ್ದಾನೆ.

೬ನೆಯ ಅಧಿಕಾರದಲ್ಲಿ ಆರು ಪ್ರತ್ಯಯಗಳು ನಿರೂಪಿಸಲ್ಪಟ್ಟಿವೆ.

ನಾಗವರ್ಮನು ಹೇಳಿದ ಕೆಲವು ವಿಶೇಷಾಂಶಗಳು :

"ಸಂಸ್ಕೃತಂ, ಪ್ರಾಕೃತಂ, ಅಪಭ್ರಂಶಿಕಂ, ಪೈಶಾಚಿಕಂ ಎಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುವೆಲ್ಲಂ ಧ್ರಮಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯಭಾಷಾಜಾತಿಗಳಕ್ಕುಂ (I-೫೫ರ ಮುಂದಿನ ವಚನ).

ಇಲ್ಲಿ ತಮಿಳು, ತೆಲಗು, ಕನ್ನಡಗಳೇ ಮೊದಲಾದ ೫೬ ಭಾಷೆಗಳು ಹಿಂದೆ ಹೇಳಿದ ಮೂರುವರೆ ಭಾಷೆಗಳಿಂದ ಹುಟ್ಟಿವೆ ಎನ್ನುವುದು ಸ್ವಾರಸ್ಯವಾಗಿದೆ. ಅವನು ಹೇಳಿದುದನ್ನು ನಾವು ಇಂದಿಗೆ ಒಪ್ಪದಿದ್ದರೂ, ಆತನ ದೃಷ್ಟಿ ಅಂದು ಭಾಷಾಶಾಸ್ತ್ರದತ್ತ ಹೊರಳಿತ್ತೆಂಬುದು ಹೆಮ್ಮೆಯ ಸಂಗತಿ.

ನಾಗವರ್ಮನು ಯತಿಯ ವಿಚಾರದಲ್ಲಿ ಗೊಂದಲಕ್ಕೆ ಸಿಲುಕಿ ಹೇಗೋ ಕೊನೆಯಲ್ಲಿ ಯತಿನಿಯಮವನ್ನು ಪಾಲಿಸಬೇಕೆನ್ನುವನು.

ಯತಿಯೆಂಬುದು ಗಣನಿಯಮ
ಪ್ರತತಿಗುಸಿರ್ದಾಣಮಪ್ಪುದದು ದಾಂಟಲ್ಕಾ ।
ಯತಿ ಕಿಡುಗುಂ ದಾಂಟಿದೊಡಾ
ಯತಿಕಿಡೆ ಕವಿತಾಭಿಮಾನಮೇನೆಸೆದಪುದೋ ॥ (I-೪೪)

ಛಂದೋಲಕ್ಷಣನಿರೂಪಣೆಗೊಂದು ಉದಾಹರಣೆ :

ದಿನಾಧಿಪಂ ವ್ಯೋಮರವೀಶಯುಗ್ಮ
ಘನಂ ನಿಲಲ್ಕೆಂಟಱೊಳಾ ವಿರಾಮಂ ।
ಪಿನಾಕಿಯುಂ ನಾಕಿಯುಮೆಂದ ಪಾಂಗಿಂ
ಘನಸ್ತನೇ ಕೇಳಿದುಪೇಂದ್ರವಜ್ರಂ ॥

ತ್ರಿಪದಿಯ ಲಕ್ಷಣಂ :

ಬಿಸರುಹೋದ್ಭವಗಣಂ ರಸದಶಸ್ಥಾನದೊಳ್
ಬಿಸುರುವ ನೇತ್ರಗಣಮೆ ಬರ್ಕುಟಿದುವು
ಬಿಸರುಹ ನೇತ್ರೇ ತ್ರಿಪದಿಗೆ ॥

(ಲಕ್ಷ್ಯವೂ ಇದೇ ಆಗಿದೆ.)

## ೨. ಎರಡನೆಯ ನಾಗವರ್ಮ (ಸು. ೧೧೪೫)

ಕಾವ್ಯಾವಲೋಕನ, ಕರ್ಣಾಟಕಭಾಷಾಭೂಷಣ, ವಸ್ತುಕೋಶ, ಅಭಿದಾನ ರತ್ನಮಾಲೆ ಎಂಬೀ ವಿದ್ವತ್ಪೂರ್ಣವೂ ಕನ್ನಡಭಾಷಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವೂ ಆದ ಲಕ್ಷಣಗ್ರಂಥಗಳನ್ನು ಬರೆದ ಎರಡನೆಯ ನಾಗ ವರ್ಮನು ಕ್ರಿ. ಶ. (ಸು.) ೧೧೪೫ರಲ್ಲಿ ಇದ್ದಿರಬೇಕು.[1] ಕನ್ನಡದ ಲಕ್ಷಣ ಶಾಸ್ತ್ರರಚಕರಲ್ಲಿ ಇವನು ನಾಯಕಮಣಿಯಂತಿರುವನು. ಇವನು ಭಾಷೆಗೆ ಸಂಬಂಧಿಸಿದ ಎಲ್ಲ ಶಾಸ್ತ್ರಕ್ಷೇತ್ರಗಳಲ್ಲಿಯೂ ಅನುಪಮ ಸೇವೆಸಲ್ಲಿಸಿರುವನು.

(i) ಈತನ ಕಾವ್ಯಾವಲೋಕನವು ಅಲಂಕಾರಶಾಸ್ತ್ರಪ್ರತಿಪಾದನ ಗ್ರಂಥವಾಗಿದೆ. ಕವಿರಾಜಮಾರ್ಗಕ್ಕಿಂತ ಹೆಚ್ಚು ಪರಿಪೂರ್ಣವಾಗಿದೆ. ಇದರಲ್ಲಿ ಸೂತ್ರಗಳು ಕಂದಪದ್ಯಗಳಲ್ಲಿದ್ದು ಉದಾಹರಣೆಗಳನ್ನು ಪೂರ್ವಕವಿಗಳಿಂದ ಉದ್ಧರಿಸಲಾಗಿದೆ. ಗ್ರಂಥವು ಐದು ಅಧಿಕರಣಗಳಾಗಿ ಬರೆಯಲ್ಪಟ್ಟಿದೆ.

(೧) ಶಬ್ದಸ್ಮೃತಿ ಎಂಬ ಮೊದಲನೆಯ ಅಧಿಕರಣದ ಸಂಧಿಪ್ರಕರಣಂ, ನಾಮಪ್ರಕರಣಂ, ಸಮಾಸಪ್ರಕರಣಂ, ತದ್ಧಿತಪ್ರಕರಣಂ, ಆಖ್ಯಾತ ಪ್ರಕರಣಂ ಎಂಬ ೫ ಪ್ರಕರಣಗಳಲ್ಲಿ ವ್ಯಾಕರಣಾಂಶಗಳು ಬಹಳ ಸಂಗ್ರಹವಾಗಿಯಾದರೂ ಶಾಸ್ತ್ರೀಯವಾಗಿಯೂ ಸುಲಲಿತವಾಗಿಯೂ ನಿರೂಪಿಸಲ್ಪಟ್ಟಿವೆ. ಕನ್ನಡ ವ್ಯಾಕರಣಕ್ಕೆ ಶಬ್ದಸ್ಮೃತಿಯು ಆದ್ಯಗ್ರಂಥ ಎಂಬುದು ಗಮನೀಯಾಂಶ.

ಸೂತ್ರ ೧ ಹೀಗುಂಟು :

ಸ್ವರಮೆಂದು ವ್ಯಂಜನಮೆಂ
ದೆರಡಕ್ಕುಂ ವರ್ಣಭೇದಮಾದ್ಯಕ್ಷರದಿಂ ।
ಬರೆ ಪದಿನಾಲ್ಕುಂ ಸ್ವರಮಿಂ
ಪರಿಶೇಷಂ ವ್ಯಂಜನಂಗಳರೆ ಮಾತ್ರಿಕೆಗಳ್ ॥

ಮತ್ತೆ ಉದಾಹರಣೆ.

---

[1] ಕ. ಕ., ಸಂ. I, ಪು. ೧೪೫.

(೨) ಕಾವ್ಯಾಮಲವ್ಯಾಪೃತ್ತಿ ಎಂಬ ಎರಡನೆಯ ಅಧಿಕರಣದಲ್ಲಿ ಪದ ಪದಾರ್ಥಸಂಧಿದೋಷವಿನಿಶ್ಚಯಪ್ರಕರಣಂ, ವಾಕ್ಯವಾಕ್ಯಾರ್ಥದೋಷಾನು ಕೀರ್ತನಪ್ರಕರಣಂ ಎಂಬೆರಡು ಪ್ರಕರಣಗಳಲ್ಲಿ ಪದವಾಕ್ಯಗಳಲ್ಲಿ ಕಂಡು ಬರುವ ದೋಷಗಳನ್ನು ಸೋದಾಹರಣವಾಗಿ ಕೊಟ್ಟಿದ್ದಾನೆ.

(೩) ಗುಣವಿವೇಕಾಧಿಕರಣದಲ್ಲಿ ಮಾರ್ಗವಿಭಾಗದರ್ಶನಪ್ರಕರಣಂ, ಶಬ್ದಾಲಂಕಾರನಿರ್ಣಯಪ್ರಕರಣಂ, ಅರ್ಥಾಲಂಕಾರಪ್ರಕರಣಂ ಎಂಬ ಮೂರು ಪ್ರಕರಣಗಳುಂಟು. ಶಬ್ದಾರ್ಥಗಳ ಸಮಸಂಶ್ಲಿಷ್ಟ ಇತ್ಯಾದಿ ಹತ್ತು ಗುಣ ಗಳನ್ನೂ, ಶಬ್ದಾಲಂಕಾರಗಳನ್ನೂ ಅನುಕ್ರಮವಾಗಿ ಪ್ರತಿಪಾದಿಸಿದ್ದಾನೆ.

(೪) ನಾಲ್ಕನೆಯದು ರೀತಿಕ್ರಮರಸನಿರೂಪಣಾಧಿಕರಣಂ. ಇದರಲ್ಲಿ ರೀತಿಪ್ರಕರಣಂ ಮತ್ತು ರಸಪ್ರಕರಣಂ ಎಂಬೆರಡು ಪ್ರಕರಣಗಳಿವೆ.

(೫) ಕವಿಸಮಯಾಧಿಕರಣಂ ಎಂಬ ಐದನೆಯ ಅಧಿಕರಣದಲ್ಲಿ ಅಸದಾ ಖ್ಯಾತಿ, ಸದಕೀರ್ತನ, ನಿಯಾಮಾರ್ಥ, ಐಕ್ಯ ಎಂಬ ಐದು ಪ್ರಕರಣಗಳಿರು ತ್ತವೆ. ಎಲ್ಲವನ್ನು ಇಲ್ಲಿ ವಿವರಿಸುವುದು ಸಾಧ್ಯವಿಲ್ಲ. ಕವಿಸಮಯವೆಂದ ರೇನೆಂಬುದನ್ನು ನಾಗವರ್ಮನು ಹೇಗೆ ನಿರ್ವಚಿಸಿದ್ದಾನೆಂಬುದನ್ನು ಮಾತ್ರ ಗಮನಿಸೋಣ.

ಆವುದಶೇಷ ಲೋಕವಿಷಯ ಸ್ಥಿತಿಯಲ್ತಖಿಳಾಗಮಾರ್ಥಮಂ
ಭಾವಿಪೊಡಲ್ತು ಸತ್ಕವಿಪರಂಪರೆಯಿಂ ಪರಿಗೀತವಪ್ಪಗಿ ನಿ।
ಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದಿದಲ್ತೆ ಶಿಷ್ಟಸಂ
ಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ ॥

(ಪದ್ಯ ೮೪೪)

ಗ್ರಂಥದ ಕೊನೆಯಲ್ಲಿ ೯೪೯-೯೫೫ ಪದ್ಯಗಳಲ್ಲಿ ನಾಗವರ್ಮನು ಸಾಮಾನ್ಯ ಕೃತಿಭೇದಗಳನ್ನೂ ಕನ್ನಡಕ್ಕೆ ವಿಶಿಷ್ಟವಾದುದನ್ನೂ ಹೇಳಿರುತ್ತಾನೆ: ಪದ್ಯ ಮಯ, ಗದ್ಯಮಯ, ವಿಮಿಶ್ರ ಎಂಬುದಾಗಿ ಮೂರು ತೆರನಾದ ಕೃತಿ, ಗದ್ಯ ಮಯವಾದರೆ ಕಥೆ ಅಥವಾ ಆಖ್ಯಾಯಿಕೆ, ಪದ್ಯಮಯವಾಗಿ ಸರ್ಗಬಂಧವಾಗಿ ದ್ದರೆ ಕಾವ್ಯ, ಗದ್ಯಪದ್ಯ ಮಿಶ್ರವಾಗಿದ್ದರೆ ಚಂಪೂ ಇತ್ಯಾದಿ. ಕನ್ನಡಕ್ಕೆ ವಿಶಿಷ್ಟ

ವಾದ ಇಡುಕುಂಗಬ್ಬ (ಒಂದೇ ಪದ್ಯದಲ್ಲಿ ಅರ್ಥ ಸಂಪೂರ್ಣತೆ ಇರುವುದು), ಮೆಲ್ವಾಡು, ಪಾಡುಗಬ್ಬ, ಬೆದಂಡೆಗಬ್ಬ, ಬಾಜನೆಗಬ್ಬ ಇವನ್ನು ವಿವರಿಸಿದ್ದಾನೆ. ದಾಮೋದರತನಯನಾದ ನಾಗವರ್ಮನು ತನ್ನ ಕಾವ್ಯಾವಲೋಕನವನ್ನು ಬರೆಯುವಲ್ಲಿ ವಾಮನ, ರುದ್ರಟ, ಭಾಮಹ ಮತ್ತು ದಂಡಿ ಎಂಬ ಪ್ರಸಿದ್ಧ ಸಂಸ್ಕೃತ ಲಾಕ್ಷಣಿಕರನ್ನು (ಪದ್ಯ ೯೬೧) ಅನುಸರಿಸಿದಂತೆ ಹೇಳಿರುತ್ತಾನೆ. 'ಭರತಶಾಸ್ತ್ರಕ್ರಮದಿಂ' (ಪದ್ಯ ೭೯೮) ಎಂಬುದಾಗಿ ರಸಪ್ರಕರಣದಲ್ಲಿ ನಾಟ್ಯಶಾಸ್ತ್ರಕಾರನಾದ ಭರತಮುನಿಯನ್ನನುಸರಿಸಿರುವನು.

ಒಟ್ಟಿನಲ್ಲಿ ಈ ಗ್ರಂಥದ ಮಹತ್ವವನ್ನು ಹಾಗೂ ಉಪಯುಕ್ತತೆಯನ್ನು ಕವಿಯ ಮಾತಿನಲ್ಲೇ ಹೇಳುವುದು ಸರಿಯೆಂದೇ ತೋರುತ್ತದೆ.

ಕವಿಗಳ್ಗಿದು ಕೆಯ್ಗನ್ನಡಿ
ಕವಿತೆಗೆ ಬಾಟ್ಮೊದಲುದಾತ್ತವಾಗ್ದೇವತೆಗು ।
ದ್ಧವಹೇತು ಕೋಶಗೃಹಮೆನೆ
ಭುವನದೊಳಿದು ಪರೆದು ನಿಲ್ದುದೊಂದಚ್ಚರಿಯೋ ॥ (ಪದ್ಯ ೪)

## (ii) ಕರ್ಣಾಟಕ ಭಾಷಾಭೂಷಣ

ಇದು ಸಂಸ್ಕೃತ ಭಾಷೆಯಲ್ಲಿ ಬರೆದ ಕನ್ನಡ ವ್ಯಾಕರಣ ಗ್ರಂಥ. ಪ್ರಾಯಶಃ ಸಂಸ್ಕೃತ ವಿದ್ವಾಂಸರಿಗೆ—ಕನ್ನಡ ತಿಳಿಯದವರಿಗೆ—ಕನ್ನಡದ ಭಾಷಾಶಕ್ತಿಯನ್ನೂ ಸೌಂದರ್ಯವನ್ನೂ ತೋರಿಸುವುದರ ಸಲುವಾಗಿ ನಾಗವರ್ಮನು ಹೀಗೆ ಮಾಡಿರಬಹುದು. ಉದಾಹರಣೆಗಳನ್ನು ಪ್ರಸಿದ್ಧ ಪೂರ್ವ ಕವಿಗಳಿಂದ ಕೊಟ್ಟಿರುತ್ತಾನೆ. ಇದೇ ತೆರನಾಗಿ ಮುಂದೆ ಭಟ್ಟಾಕಲಂಕದೇವನು (೧೬೦೪) ಶಬ್ದಾನುಶಾಸನವೆಂಬ ವ್ಯಾಕರಣಗ್ರಂಥವನ್ನು ಬರೆದನು. ಭಾಷಾಭೂಷಣದ ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತನಿಯಮ, ಅವ್ಯಯನಿರೂಪಣ, ನಿಪಾತನಿರೂಪಣ ಎಂಬ ೧೦ ಪರಿಚ್ಛೇದಗಳಿವೆ. ಈ ಗ್ರಂಥದಿಂದ ಒಂದು ಉದಾಹರಣೆ :

ಸೂ॥ ಸ್ವರೇ ಸ್ವರಸ್ಯ ಲೋಪಃ ॥ ೧೯ ॥
ವೃ॥ ಸ್ವರೇ ಪರತೋಽವಸ್ಥಿತೇ ಪೂರ್ವಸ್ವರಸ್ಯ ಲೋಪೋ ಭವತಿ ॥

ಉದಾಹರಣೆ ; ಎನ್ನ ಅರಸಂ, ಎನ್ನರಸಂ ; ಕೂರ್ತು ಇರವಂ, ಕೂರ್ತಿರವಂ.

## (iii) ಅಭಿಧಾನವಸ್ತುಕೋಶ

ಈ ಸಂಸ್ಕೃತ—ಕನ್ನಡ ನಿಘಂಟು ಕಂದವೃತ್ತಗಳಲ್ಲಿ ಬರೆಯಲ್ಪಟ್ಟಿದೆ. ಕನ್ನಡದಲ್ಲಿ ಉಪಲಬ್ಧವಾಗುವ ದೊಡ್ಡ ನಿಘಂಟುಗಳಲ್ಲಿ ಇದೇ ಮೊದಲನೆಯದು.[1] ಏಕಾರ್ಥಕಾಂಡ, (ಅವಿಭಿನ್ನಾರ್ಥಕಾಂಡ), ನಾನಾರ್ಥಕಾಂಡ, ಸಾಮಾನ್ಯಕಾಂಡ ಎಂಬ ಮೂರು ವಿಭಾಗಗಳಾಗಿ ರಚಿಸಲ್ಪಟ್ಟಿದೆ. ಪ್ರಾಚೀನ ಕನ್ನಡ ಕವಿಗಳು ಹೆಚ್ಚಾಗಿ ಪ್ರಯೋಗಿಸಿರುವ ಸಂಸ್ಕೃತ ಪದಗಳಿಗೆ ಕನ್ನಡದಲ್ಲಿ ಅರ್ಥವನ್ನು ಕೊಟ್ಟಿರುತ್ತದೆ. ವರರುಚಿ, ಹಲಾಯುಧ ಮೊದಲಾದವರು ಹೇಳಿದುದನ್ನು 'ಸಂಗ್ರಹಿಸಿ ಮನಂಗೊಳೆ ನಿಘಂಟುವನ್ನು' ರಚಿಸಿರುವುದಾಗಿ ಕವಿ ಹೇಳುತ್ತಾನೆ (೧–೨). ಅಭಿಧಾನಕೋಶದ ಪ್ರಯೋಜನವನ್ನು ಹೀಗೆ ಸಾರುತ್ತಾನೆ :

ಪ್ರದಿದ ಮನಸ್ತಮಂ ಬಿಡೆ
ಬೆದಱಿಸಿದರ್ಥ ಪ್ರಕಾಶಮಂ ಮಾಡುಗುಮಾ ।
ಪ್ಪುದಱಿಂ ಸಮಸ್ತ ವಿದ್ಯಾ
ಪ್ರದೀಪಮಭಿಧಾನಕೋಶಮಲ್ಲದೆ ಪೆಱತೇಂ ॥ (I–೩)

ಉದಾಹರಣೆಗಳು :

೧. ಅವಿಭಿನ್ನಾರ್ಥ

ಭುವನಂ ಲೋಕಂ ವಿಷ್ಟಪ
ಮಿವು ಜನದೊಳಭಿನ್ನವೃತ್ತಿಯಿಂದಂ ನೆಗೆಗುಂ ।

---

[1] 'ರನ್ನಕಂದ'ವೆಂಬೊಂದು ಕಂದಪದ್ಯಗಳನ್ನೊಳಗೊಂಡ ಪುಟ್ಟ ನಿಘಂಟುವೊಂದು ಕವಿರನ್ನನಿಂದ (೯೯೩) ರಚಿತವಾದಂತೆ ಹೇಳುತ್ತಾರೆ. ಹಾಗಿದ್ದರೆ ಅದು ಕನ್ನಡದಲ್ಲಿ ದೊರಕಿರುವ ಮೊದಲಿನ ಕನ್ನಡ–ಕನ್ನಡ ನಿಘಂಟು. ಉದಾಹರಣೆ–ಸಣ್ಣದೆನಲ್ ಕಿಱಿದಕ್ಕುಂ । ಪೆಣ್ಣೆನೆ ಮಾಡೆಂಬ ವಾಚಿ ಬಟಿಯೆನೆ ವಂಶಂ ಎಣ್ಣೆನೆ ಲೆಕ್ಕಿಪುದುಂ ಬಿಸು । ಗಣ್ಣನೆನಲ್ ಗೊರವನಪ್ಪುದೆಲೆ ಕವಿರತ್ನಾ ॥

ಭವಸಂಸೃತಿಸಂಸರಣಂ
ಜವಂ ಜವಂ ಜನ್ಮಮೆಂಬುದದು ಸಂಸಾರಂ ॥ (I–೩–I)

೨. ಸಾಮಾನ್ಯ

ವಿಸ್ತೀರ್ಣತೆ ತಾನಪ್ಪುದು
ವಿಸ್ತಾರಂಶಬ್ದ ವಿಷಯಮಾದಂದಕ್ಕುಂ ।
ವಿಸ್ತರಮೆಂಬೀ ಶಬ್ದಂ
ವಾಸ್ತವಮೆಂದಱಿಗೆ ವಸ್ತು ತತ್ವಸ್ಥಿತಿಯಿಂ ॥ (II–೨–೨೬)

೩. ನಾನಾರ್ಥ

ಕರಮೆಂಬುದು ಸಿದ್ಧಾಯಂ
ಕರಮೆಂಬುದುದಗ್ರದೀಪ್ತಿ ಕರಮೆಂಬುದು ಕೆಯ್ ।
ಕರಮೆಂಬುದು ದ್ವಿರದಕರಂ
ಪರಿಭಾವಿಪುದಿಂತಿದಂ ಪ್ರಯೋಗಾಂತರದಿಂ ॥ (III–೧–೧೦೨)

## (iv) ಅಭಿಧಾನರತ್ನಮಾಲಾ ಟೀಕೆ

ಹಲಾಯುಧನ 'ಅಭಿಧಾನರತ್ನಮಾಲೆ' ಎಂಬ ಸಂಸ್ಕೃತ ಶಬ್ದಕೋಶದೊಳಗಿನ ಸಂಸ್ಕೃತ ಶಬ್ದಗಳಿಗೆ ಸಮಾನಾರ್ಥಕವಾದ ಕನ್ನಡ ಪದಗಳನ್ನು ಈ ಟೀಕೆಯಲ್ಲಿ ಕೊಟ್ಟಿರುತ್ತದೆ. ಈ ಟೀಕೆ ಅಥವಾ ನಿಘಂಟು ಎರಡನೆಯ ನಾಗವರ್ಮನಿಂದ ಬರೆಯಲ್ಪಟ್ಟಿತೆಂಬ ಅಭಿಪ್ರಾಯವುಂಟು. (ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ : ಮದ್ರಾಸು ವಿಶ್ವವಿದ್ಯಾನಿಲಯ, ಪು. ೨೭–೩೦) ಇದರಲ್ಲಿ ಹಲಾಯುಧನ ವಿಭಾಗಕ್ರಮವನ್ನೇ ಟೀಕಾಕಾರನು ಅನುಸರಿಸಿದ್ದಾನೆ. ಒಟ್ಟಿನಲ್ಲಿ ೮೮೪ ಶ್ಲೋಕಗಳಿವೆ. ಕೊನೆಯ ೫೭ ಶ್ಲೋಕಗಳನ್ನುಳಿದು ಎಲ್ಲವಕ್ಕೂ ಉಪಯುಕ್ತವಾದ ಕನ್ನಡ ಟೀಕೆಯನ್ನು ಕೊಡಲಾಗಿದೆ. ಕನ್ನಡ ಕಾವ್ಯಗಳಲ್ಲಿ ಬರುವ ಸಂಸ್ಕೃತ ಪದಗಳ ಅರ್ಥವನ್ನು ತಿಳಿದುಕೊಳ್ಳಲು ಇದು ತುಂಬ ಅನುಕೂಲ. ಕೆಲವು ಉದಾಹರಣೆಗಳು :

(೧) ಅಹಂಯುಃ, ಅಹಂಕಾರೀ—ಈ ೨ ತಾನೇ ಮೇಲೆಂಬುವಂ. ಶುಭಂಯುಃ, ಶುಭಸಂಯುತಃ–ಈ ೨ ಒಳ್ಳಿತಂಗೆಯ್ವವಂ. ಯಥಾಕಾಮೀ,

ಸ್ವರುಚಿಃ, ಸ್ವಚ್ಛಂದಃ, ನಿರವಗ್ರಹಃ—ಈ ೪ ತನ್ನಿಚ್ಛೆಕಾರಂ.—ಭೂಮಿ ಕಾಂಡ || ೨೨೪ ||

(೨) ನೃತ್ಯ, ಗೀತ, ವಾದ್ಯ—ಈ ೩ ಸಂಗೀತವೆಂಬುದು. ಮೊದಲ ನಾಟ್ಯವಂ ಪೂರ್ವರಂಗಮೆಂಬುದು—ಸ್ವರ್ಗಕಾಂಡ || ೯೫ ||

(೩) ಘೋಷವತೀ, ವೀಣಾ—ಈ ೨ ವೀಣೆ.

ವಿಪಂಚೀ, ಪರಿವಾದಿನಿ, ವಲ್ಲಕೀ—ಈ ೩ ತಂತ್ರಿಯ ಭೇದದಿಂದ ಆದ ವೀಣೆಯ ಭೇದಂಗಳ್ || ೯೬ ||

(೪) ಶುಕ್ಲ, ವೀಯತಂ, ಬಲಂ, ಬೀಜಂ, ಇಂದ್ರಿಯಂ, ರೇತಃ—ಈ ೬ ಇಂದ್ರಿಯ. ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು—ಪಾತಾಳ ಕಾಂಡ || ೧೬ ||

## ೩. ಉದಯಾದಿತ್ಯ (೧೧೫೦)

"ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ" ಎಂಬುದಾಗಿ ಹೇಳಿಕೊಂಡಿರುವುದರಿಂದ ಉದಯಾದಿತ್ಯನು ಸೋಮನಾಥನೆಂಬ ಚೋಳರಾಜನ ಮಗನೆಂಬ ಅಭಿಪ್ರಾಯಕ್ಕೆ ನರಸಿಂಹಾಚಾರ್ಯರು ಬಂದಿರುತ್ತಾರೆ.[1] ಇವನಿಗೆ 'ಸಾಹಿತ್ಯವಿದ್ಯಾಧರ'ನೆಂಬ ಬಿರುದಿತ್ತು. ಇವನು ಉದಯಾದಿತ್ಯಾಲಂಕಾರವೆಂಬ ೭೨ ಪದ್ಯಗಳುಳ್ಳ ಪುಟ್ಟದಾದರೂ ಅಚ್ಚುಕಟ್ಟಾದ ಅಲಂಕಾರಗ್ರಂಥವನ್ನು ಬರೆದಿರುವನು. ರೀತಿ, ಕಾವ್ಯಗುಣಗಳು ಮತ್ತು ಅರ್ಥಾಲಂಕಾರಗಳು—ಇವನ್ನು ಸಂಕ್ಷೇಪವಾಗಿ ಪ್ರತಿಪಾದಿಸಿದ್ದಾನೆ. ಹೆಚ್ಚಾಗಿ ಲಕ್ಷಣ ಲಕ್ಷ್ಯಗಳು ಒಂದೇ ಪದ್ಯದಲ್ಲಿ ಹೇಳಲ್ಪಟ್ಟಿವೆ. ಪೂರ್ವಾರ್ಧದಲ್ಲಿ (ಸುಮಾರಿಗೆ) ಲಕ್ಷಣ ಬಂದು ಮತ್ತೆ ಲಕ್ಷ್ಯಬರುವುದು.

### ಉತ್ಪ್ರೇಕ್ಷೆ

ಇರೆ ವಸ್ತುವೊಂದು ತನ್ನಯ
ಪರಿಯಿಂ ಬೇಱೊಂದನದಱೊಳುತ್ಪ್ರೇಕ್ಷಿಸುವಾ ।

---

[1] ಕ. ಕ. ಚ., ಸಂ. I. ಪು. ೧೫೫.

ಪರಿಯುತ್ಪ್ರೇಕ್ಷಾಲಂಕೃತಿ
ಬಿರಿದುವು ನಗುವಂತೆ ಬಿರಯಿಯಂ ಮಲ್ಲಿಗೆಗಳ್ ॥

ಸೂಕ್ತಿಸುಧಾರ್ಣವದಲ್ಲಿ ಹೇಳಿದ 1–78ನೆಯ ಪದ್ಯ ಉದಯಾದಿತ್ಯಾಲಂಕಾರದಿಂದ ಆಯ್ದುಕೊಂಡುದು—

ಉದಧಿಪುರಾಧಿಪಸುತ ಮಂ
ತ್ರದೂತಗಮನಾಜಿ ವಿರಹ ಪರಿಣಯ ಸುರತ ।
ರ್ತುದಿನೇಶ ಚಂದ್ರಮಧು ಕುಭೃ
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ॥ (I–೧೩)

## ೪. ಕವಿಕಾಮ (ಸು. ೧೨೮೦)

ಕನ್ನಡದಲ್ಲಿ ರಸವಿವರಣೆಗೆ ಮೀಸಲಾಗಿರುವ ಮೊದಲನೆಯ ಗ್ರಂಥವೆಂಬುದಾಗಿ ಹೊಗಳಿಸಿಕೊಂಡ 'ಶೃಂಗಾರರತ್ನಾಕರ'ವನ್ನು ರಚಿಸಿದ ಕವಿಕಾಮನು ಸುಮಾರು ೧೨೦೦ರಲ್ಲಿದ್ದಿರಬಹುದು. ಮಲ್ಲಿಕಾರ್ಜುನನು (೧೨೪೫) ಸೂಕ್ತಿಸುಧಾರ್ಣವದಲ್ಲಿ ಶೃಂಗಾರರತ್ನಾಕರದಿಂದ ಆಯ್ದುಕೊಂಡಿದ್ದಾನೆ.

ಕವಿಕಾಮನು ಲಾಕ್ಷಣಿಕನು ಮಾತ್ರವಲ್ಲ, ಉದ್ದಾಮಕವಿಯೂ ಆಗಿದ್ದನೆಂಬುದು ಆತನ ರಚನೆಯಿಂದ ಕಂಡುಬರುತ್ತದೆ. ಅವನು ತನ್ನ ವಿಷಯವಾಗಿ ಹೇಳಿಕೊಂಡುದು ಆತ್ಮಸ್ತುತಿಯಲ್ಲವೆಂಬುದು ಆ ಹೊಗಳಿಕೆಯ ಪದ್ಯ ರಚನೆಯೇ ಸಾರುವುದು.

ಜಗಳದೊಳ್ ಸನ್ನಿದಮಾದ ನಾಟ್ಟುಡಿಗಳಂ ಛಂದಕ್ಕೆ ಒರ್ಪಂತು ನೆ
ಟ್ಟಗೆ ಮಾತಾಡುವ ಬಲ್ಮೆ ಚಿತ್ತದೊಳೊಱಲ್ದಿರ್ದರ್ಥಮಂ ಕೊಡೆ ನಾ ।
ಲಗೆಯಿಂ ರಂಜಿಸುವೊಂದು ಬಿನ್ನಣಮದಿನ್ನಾವಂಗೆ ಪುಣ್ಯೈಕಭಾ
ಗಿಗೆ ಸೈಪಿಂ ದೊರೆಕೊಳ್ಳುಮಾತನೆ ವಲಂ ಶೃಂಗಾರರತ್ನಾಕರಂ ॥

ಮೃದುಮಧುರವಚನರಚನೆಯಿ
ನುದಾತ್ತ ಕವಿವೃಷಭ ಕವಿಕದಂಬ ವಿಪಶ್ಚಿ ।
ದ್ಧೃದಯಮತಿರ್ಕುಟಿಗೊಳುತಿ
ರ್ಪುದಱಿಂ ಕವಿಕಾಮನಿಂತು ದೆಸೆದೆಸೆಗೆಸೆದಂ ॥

ಶ್ರೀನಿಧಿ ವಿವೇಕನಿಧಿ ಕವಿ
ತಾನಿಧಿ ಸೌಭಾಗ್ಯನಿಧಿ ಯಶೋನಿಧಿ ವರ ವಿ।
ದ್ಯಾನಿಧಿ ವಿಳಾಸನಿಧಿ ಮಹಿ
ಮಾನಿಧಿ ಮಾನನಿಧಿ ದಾನನಿಧಿ ಕವಿಕಾಮಂ ॥

ಶೃಂಗಾರರತ್ನಾಕರದಲ್ಲಿ ನವರಸವ್ಯಾವರ್ಣನ, ಭಾವಭೇದನಿರ್ಣಯ, ನಾಯಕನಾಯಿಕಾವಿಕಲ್ಪವಿಸ್ತರ, ಸಖಸಖೀಸಂಭೋಗ ವಿಪ್ರಲಂಭ ವಿಸ್ತರ ಎಂಬೀ ನಾಲ್ಕು ಪರಿಚ್ಛೇದಗಳು ಇರುತ್ತವೆ.

## ೫. ಕೇಶಿರಾಜ (ಸು. ೧೨೬೦)

ಕನ್ನಡಕ್ಕೆ ಅತ್ಯಂತ ಪ್ರಮಾಣಾರ್ಹವೂ ಉಪಯುಕ್ತವೂ ಆದ ಶಬ್ದಮಣಿ ದರ್ಪಣವೆಂಬ ಕನ್ನಡ ವ್ಯಾಕರಣವನ್ನು ಕಾಣಿಕೆ ಕೊಟ್ಟ ಕವಿಕೇಶವನು (ಕೇಶಿ ರಾಜ) ಸೂಕ್ತಿಸುಧಾರ್ಣವರಚಕನಾದ ಮಲ್ಲಿಕಾರ್ಜುನ (೧೨೪೫) ಪ್ರಿಯಸುತನು. ಕರ್ಣಾಟಕ ಕೃತಿಗೆ 'ಸೀಮಾಪುರುಷ'ನೆಂಬುದಾಗಿ ಹೊಗಳಿಸಿಕೊಂಡ ಜನ್ನನ ಸೋದರಳಿಯನು. ಈ ಪ್ರಸಿದ್ಧ ವ್ಯಾಕರಣಗ್ರಂಥವಲ್ಲದೆ 'ಚೋಳಪಾಲಕಚರಿತೆ', 'ಸುಭದ್ರಾಹರಣ', 'ಪ್ರಬೋಧಚಂದ್ರ', 'ಕಿರಾತ', 'ಶ್ರೀಚಿತ್ರಮಾಲೆ' ಎಂಬ ಐದು ಗ್ರಂಥಗಳನ್ನು ಬರೆದಿರುವಂತೆ ಹೇಳಿಕೊಂಡಿದ್ದಾನೆ. ಇವು ಈಗ ನಷ್ಟ ವಾಗಿವೆ.

### ಶಬ್ದಮಣಿದರ್ಪಣ

ನಾಗವರ್ಮನ ಶಬ್ದಸ್ಮೃತಿಯನ್ನು ಅನುಸರಿಸಿ ಬರೆದ ಗ್ರಂಥವಿದು. ಆದರೆ ಇದು ಬರಿಯ ಅನುಕೃತಿಯಲ್ಲ. ವ್ಯಾಕರಣಕ್ಕೆ ಸಂಬಂಧಿಸಿದ ವಿಷಯ ಗಳನ್ನು ನಾಗವರ್ಮನಿಗಿಂತ ಹೆಚ್ಚು ವಿಸ್ತಾರವಾಗಿ ಮತ್ತು ಸಮಗ್ರವಾಗಿ ಪ್ರತಿಪಾದಿಸಿದ್ದಾನೆ. ಸೂತ್ರವೃತ್ತಿಗಳೆಲ್ಲವನ್ನು ಈತನೇ ಸ್ವತಂತ್ರವಾಗಿ ರಚಿಸಿ ದ್ದಾನೆ; ಬಹಳ ಲಲಿತವಾಗಿಯೂ ಸಂದೇಹರಹಿತವಾಗಿಯೂ ಸುಂದರವಾದ ಕಂದವೃತ್ತಗಳಲ್ಲಿ ಸೂತ್ರಗಳನ್ನು ಕಟ್ಟಿದ್ದಾನೆ. ಪೂರ್ವಕವಿಗಳಿಂದ ಉತ್ತಮ ಉದಾಹರಣೆಗಳನ್ನು ಉದ್ಧರಿಸಿಕೊಂಡಿದ್ದಾನೆ. ತನ್ನ ಗ್ರಂಥದ ಶ್ರೇಷ್ಠತೆಯನ್ನು ಹೀಗೆ ಹೇಳಿಕೊಂಡುದರಲ್ಲಿ ತಥ್ಯವುಂಟು.

ಸಿರಿಗೀಕ್ಷಿಪ ರಸಚಿತ್ರಂ
ಸರಸತಿಗೆರಡನೆಯ ಬೀಣೆಯೆನೆ ಸೌಬಾಗ್ಯಂ ।
ಕರಮಾದುದೆಂದು ಬುಧರಾ
ದರಿಪರ್ ಮೆಚ್ಚಿಂದೆ ಶಬ್ದಮಣಿದರ್ಪಣಮಂ ॥ (೩೪೦)

ಯಾವುದನ್ನೂ ಚತುರ್ವಿಧಪುರುಷಾರ್ಥಗಳ ದೃಷ್ಟಿಯಿಂದಲೇ ಕವಿಗಳು ಹೇಳು ತ್ತಿದ್ದರು ; ವ್ಯಾಕರಣಾಭ್ಯಾಸದಿಂದ ನಾಲ್ಕನೆಯ ಪುರುಷಾರ್ಥವಾದ ಮುಕ್ತಿಯೇ ಲಭಿಸುವುದೆಂಬುದನ್ನು ಯುಕ್ತಿಯುಕ್ತವಾಗಿ ಸಾರಿದ್ದಾನೆ—

ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ ।
ಲೋಕಂ ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥
(ಸಂಜ್ಞಾಪ್ರ. ೧೦)

ಕೇಶಿರಾಜನ ಕಾಲಕ್ಕೆ ನಡುಗನ್ನಡವು ಭದ್ರಸ್ಥಾನವನ್ನು ಕನ್ನಡರಚನೆ ಗಳಲ್ಲಿ ಪಡೆದುಕೊಂಡಿತು. ಹಳಗನ್ನಡದ ಅಧಿಕಾರಕ್ಕೆ ಧಕ್ಕೆ ಸಂಭವಿಸು ವಂತಿದ್ದಿತು. ಹಿಂದೆ ಅಸಾಧು ಎಂಬುದಾಗಿ ಪರಿಗಣಿಸಲ್ಪಡಬಹುದಾದ ಶಬ್ದ ರೂಪಗಳೂ ಪ್ರಯೋಗಗಳೂ ಕನ್ನಡದಲ್ಲಿ ನುಸುಳಿಕೊಂಡಿದ್ದುವು. ಇದನ್ನು ನೋಡಿ ಕೇಶಿರಾಜ ಬಹಳ ನೊಂದಿರಬೇಕು. ಆದುದರಿಂದಲೇ ಆತನು 'ಇವು ಅಸಾಧು' ಎಂಬುದಾಗಿ ಅಲ್ಲಲ್ಲಿ ಉದ್ಗಾರವೆತ್ತಿರುವನು ; ಅಂಥ ಪ್ರಯೋಗ ಗಳಿಲ್ಲದಿರುತ್ತಿದ್ದರೆ, 'ಅಸಾಧು'ವಿಗೆ ಉದಾಹರಣೆಗಳನ್ನು ಕೊಡುತ್ತಿರಲಿಲ್ಲ ; ಅವುಗಳಲ್ಲಿ ಕೆಲವು :

(೧) ಕನ್ನಡ 'ಲ' ಕಾರಕ್ಕೆ ಸಂಸ್ಕೃತದ (ಕ್ಷಳ) 'ಲ' ಕಾರವನ್ನು ಪ್ರಾಸ ವಾಗಿ ಹೇಳಬಾರದು. ಲನೆಯ ಸೂತ್ರದ ಕೆಳಗೆ—

ಓಲಗದೊಳೊರ್ಮೆ ನತನರ
ಪಾಲಕಚೂಡಾಮಣಿದ್ಯುತಿಪ್ಲುತಚರಣಂ ॥

ಎಂಬ ವೃತ್ತಭಾಗವನ್ನು 'ಲಕಾರಕ್ಕೆ ಕ್ಷಳನನಿರಿಸಲ್ಬಾರದುದರ್ಕಂ ಪ್ರಯೋಗಂ' ಎಂದು ಕೊಟ್ಟಿರುತ್ತಾನೆ.

(೨) 'ಱ'ಕಾರ 'ೞ'ಕಾರಗಳ ಪ್ರಯೋಗದಲ್ಲಿ ಅಂದು ಬಲವಾದ ಸಂದೇಹ ತಲೆದೋರಿತ್ತು. ಅವನ್ನು ಇದಮಿತ್ಥಂ ಎಂಬುದಾಗಿ ಮಾಡಲು ಅರ್ಥವಿವರಗಳ ನ್ನೊಳಗೊಂಡ ಪಟ್ಟಿಕೆಗಳನ್ನು ೧೯ ರಿಂದ ೨೮ರ ವರೆಗಿನ ಸೂತ್ರಗಳ ಕೆಳಗೆ ಕೊಟ್ಟಿದ್ದಾನೆ.

(೩) ಕೊರಲ್, ಬೆರಲ್, ನರಲ್ ಮುಂತಾದ ಶಬ್ದಗಳನ್ನು ಕೊರಳ್, ಬೆರಳ್, ನರಳ್ ಎಂಬುದಾಗಿ ಹೇಳುವುದು ತಪ್ಪೆಂದನು. ಕ್ರಮೇಣ ಇವು ಳಾಂತವಾದುದು ಮಾತ್ರವಲ್ಲ, ಸ್ವರಾಂತಗಳೂ ಆಗಿಬಿಟ್ಟವು.

(೪) ಇನ್ನು ನಿತ್ಯಬಿಂದು, ವಿಕಲ್ಪಬಿಂದು, ವಿಚಾರವಾಗಿ ಅನೇಕ ಉದಾಹರಣೆಗಳನ್ನು ಕೊಟ್ಟು, ಸಾಧುರೂಪಗಳನ್ನು ವಿಧಿಸಿರುವನು.

ಇಂಥ ಅಂಶಗಳು ಇನ್ನೂ ಕೆಲವನ್ನು ಸೂಚಿಸಿರುತ್ತಾನೆ. ಆದರೇನು ? ಕಾಲಾಯ ತಸ್ಮೈ ನಮಃ ; ಕೇಶಿರಾಜನು ಕಟ್ಟಿದ ಕಟ್ಟೆ ನಿಲ್ಲಲಿಲ್ಲ ; ಹುಚ್ಚು ಹೊಳೆ ಕೊಚ್ಚಿಕೊಂಡು ಹೋಯಿತು. ಆತನು ಹೇಳಿದ ಅಸಾಧುಗಳಲ್ಲಿ ಹೆಚ್ಚಿನವು ಇಂದಿಗೆ ಸಾಧುಗಳಾಗಿವೆ.

ಕೇಶಿರಾಜನ ದೊಡ್ಡ ವೈಶಿಷ್ಟ್ಯವೆಂದರೆ, ಆತನು ಹೇಳಿರುವ ವರ್ಣನಾತ್ಮಕ ವ್ಯಾಕರಣಾಂಶಗಳು. ಕೆಲವು ಇಂಥ ಹೇಳಿಕೆಗಳು ಶಾಸ್ತ್ರದ ಮೋಡಗಳ ನಡುವಿನಿಂದ ಒಮ್ಮೊಮ್ಮೆ ಮಿಂಚಿನಂತೆ ಹೊಳೆಯುತ್ತವೆ: ಶ್ರಾವಣಂ ಚಾಕ್ಷುಷಂಗಳೆಂಬುದಾಗಿ ಎರಡು ರೂಪಿಂದೆ ಅಕ್ಕರಂ ವ್ಯವಹರಿಪುವು (೧೩) ; ಯ, ವ, ಲಂ ಅನುನಾಸಿಕಮುಂ ಅನನುನಾಸಿಕಮುಂ (೨೬) ; ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱಕಾರಂ ಪುಟ್ಟುಗುಂ ; ಡಕಾರ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱೞಂ ಪುಟ್ಟುಗುಂ ಇತ್ಯಾದಿ (೨೮). ಇಂಥ ಕೆಲವು ವರ್ಣನಾತ್ಮಕ ಭಾಷಾಶಾಸ್ತ್ರಾಂಶಗಳನ್ನು ಹೇಳಿರುವನು.

## ೬. ಸಾಳ್ವ (೧೫೫೦)

ತೌಳವ ದೇಶವನ್ನಾಳುತ್ತಿದ್ದ (ವಸುದಾನಮೇರು) ಸಾಳ್ವಮಲ್ಲನೆಂಬ ರಾಜನ (೧೫೬೦) ಆಸ್ಥಾನ ಕವಿಯಾಗಿದ್ದ ಕವಿಸಾಳ್ವನು ಭಾರತ, ರಸರತ್ನಾಕರ,

ವೈದ್ಯಸಾಂಗತ್ಯ, ಶಾರದಾವಿಲಾಸ ಎಂಬ ಗ್ರಂಥಗಳನ್ನು ಬರೆದಿರುವಂತೆ ತಿಳಿದು ಬಂದಿದೆ. ಶಾರದಾವಿಲಾಸವೆಂಬ ಧ್ವನಿಪ್ರತಿಪಾದನ ಗ್ರಂಥವು ಸಮಗ್ರವಾಗಿ ದೊರೆತಿಲ್ಲ. ಇಲ್ಲಿ ಆತನು ಬರೆದ ರಸರತ್ನಾಕರವನ್ನು ಕುರಿತು ಸ್ವಲ್ಪ ಪರಿಚಯ ಮಾಡಲು ಯತ್ನಿಸಿದೆ.

ಕವಿಕಾಮನ ಶೃಂಗಾರರತ್ನಾಕರದಂತೆ (೧೨೦೦) ರಸರತ್ನಾಕರವೂ ರಸ ಪ್ರತಿಪಾದನ ಗ್ರಂಥವಾಗಿರುತ್ತದೆ. ಇದರಲ್ಲಿ ಶೃಂಗಾರಪ್ರಪಂಚ, ರಸವಿವರಣ, ನಾಯಕನಾಯಿಕಾ ವಿವರಣ, ಭಾವಾಧಿಕರಣ ಎಂಬ ನಾಲ್ಕು ಆಶ್ವಾಸ ಗಳುಂಟು. ಕನ್ನಡದಲ್ಲಿ ದೊರೆತಿರುವ ಅಲಂಕಾರಗ್ರಂಥಗಳಲ್ಲಿ ರಸವಿಷಯವನ್ನು ಸವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥವು ಇದೊಂದೇ ಎನ್ನಬಹುದು. ಸಾಳ್ವನಿ ಗಿಂತ ಹಿಂದಿನವರಾದ ನಾಗವರ್ಮ ಕವಿಕಾಮರು ಮಾಡಿದ ಪ್ರತಿಪಾದನೆಗಳು ಬಹಳ ಸಂಗ್ರಹವಾಗಿರುವುವು. ಈ ಕುರಿತು ಕವಿಯ ಮಾತಿದು :

ಇಂದುವರಮಾರುಮೀ ತೆಱ
ದಿಂದಂ ಕನ್ನಡದೊಳಾರ್ಕರಾ ಎಂಬಿನಮೊ ।
ಳ್ಪಿಂದೆ ವಿವರಿಸಿದುದಿಲ್ಲನೆ
ಚಂದದೆ ಬಿಚ್ಚಳಿಸಿ ರಚಿಸಿದಂ ಕವಿಸಾಳ್ವಂ ॥ (IV–೫೮)

ಈ ಗ್ರಂಥವು ಸೂತ್ರವೃತ್ತಿಗಳಿಂದ ಕೂಡಿರುತ್ತದೆ. ಅಮೃತಾನಂದಿ, ರುದ್ರಭಟ್ಟ, ವಿದ್ಯಾನಾಥ, ಹೇಮಚಂದ್ರರ ಭೂನುತಮಾರ್ಗವನ್ನನುಸರಿಸಿ ತನ್ನ ಕೃತಿಯನ್ನು ರಚಿಸಿದಂತೆ ಹೇಳಿರುತ್ತಾನೆ (I–೮) ; ಮಾತ್ರವಲ್ಲ 'ನಾಗವರ್ಮ ಕವಿಕಾಮಾದಿಗಳ ಮಾರ್ಗದಲ್ಲಿ ರಸಭಾವಾಭಾಸಗಳನ್ನೆಲ್ಲಾ ವಿದ್ವತ್ಸಭೆಗಮು ಭಯಭಾಷೆಗವಿಷ್ಟಮಪ್ಪಂತು ಕನ್ನಡಿಸಿದೆನ್' ಎಂಬುದಾಗಿ ಹೇಳಿದ್ದಾನೆ. ಇವನು ಕೆಲವು ಸೂತ್ರಗಳನ್ನು ಕಾವ್ಯಾವಲೋಕನದಿಂದ ಮತ್ತು ಶಂಗಾರರತ್ನಾ ಕರದಿಂದ ಹಾಗೆಯೇ ತೆಗೆದುಕೊಂಡು, ಉಳಿದುವನ್ನು ಸ್ವತಂತ್ರವಾಗಿ ರಚಿಸಿರು ವನು : ಲಕ್ಷ್ಯಪದ್ಯಗಳನ್ನು ಆದಿಪುರಾಣ, ಶಾಂತಿಪುರಾಣ, ಗದಾಯುದ್ಧ, ಪಂಪರಾಮಾಯಣ, ಮಲ್ಲಿನಾಥಪುರಾಣ, ಜಗನ್ನಾಥವಿಜಯ ಚಂದ್ರಪ್ರಭ ಪುರಾಣ, ಲೀಲಾವತಿ, ಅರ್ಧನೇಮಿಪುರಾಣ ಮೊದಲಾದ ಮಹಾಕಾವ್ಯ

ಗಳಿಂದಲೂ ಕಾವ್ಯಾವಲೋಕನ ಶೃಂಗಾರ ರತ್ನಾಕರಗಳಿಂದಲೂ ಉದ್ಧರಿಸಿ ಕೊಂಡಿರುವನು.

ಕೆಳಗೆ ಕೊಟ್ಟಿರುವ ಈ ಗ್ರಂಥದ ಮೊದಲನೆಯ ಸೂತ್ರ ಕಾವ್ಯಾವ ಲೋಕನದ ೨೦೦ನೆಯ ಸೂತ್ರವಾಗಿದೆ :

ಭಾವಂ ವಿಭಾವಮೆಸೆವನು
ಭಾವಂ ಸಂಚಾರಿಭಾವಮೆಂಬಿಂತಿವಱಿಂ ।
ದಾವಿಷ್ಕೃತಮಕ್ಕುಂ ರಸ
ಮಾವುದುಮೆಂದಱಿಗೆ ಭರತಶಾಸ್ತ್ರಕ್ರಮದಿಂ (I–ಸೂ. ೧)

ಇದಕ್ಕೆ ಗದ್ಯರೂಪವಾಗಿ ವೃತ್ತಿ ಕೊಡಲ್ಪಟ್ಟಿದೆ.

ಸಾಳ್ವನ ಪ್ರತಿಪಾದನ ಪ್ರಕಾರಕ್ಕೆ ಒಂದು ಉದಾಹರಣೆ :

ರೌದ್ರರಸೋತ್ಪತ್ತಿ : ಸೂತ್ರ ೫೫—

ಪೊರೆಗುಂ ಕ್ರೋಧದೆ ರೌದ್ರಂ
ಸ್ಫುರದಾಲಂಬನಮೆ ಮತ್ಸರದ್ವೇಷಂ ೧ ।
ಷ್ಠುರವಚನ ಚೇಷ್ಟೆಗಳ್ ತಾ
ಮಿರದುದ್ದೀಪನ ವಿಭಾವಮಾರಸಕಕ್ಕುಂ ॥

ಸೂತ್ರ : ೫೬—

ಭ್ರುಕುಟಿ ನಯನಾರುಣಾದಿ
ಪ್ರಕಟನಮನುಭಾವಮಾವಿವರ್ಣಸ್ವೇದಾ ।
ದಿಕಮಕ್ಕುಂ ಸಾತ್ವಿಕವಿಾ
ರ್ಷ್ಯಕೋಪಮುಗ್ರಾದಿ ನೆಗಟ್ಟಿ ಸಂಚಾರಿವಲಂ ॥

ವೃತ್ತಿ : ಮಾತ್ಸರ್ಯದ್ವೇಷಮೆಂದಿರ್ತೆಱಮಾಲಂಬನ ವಿಭಾವಂ, ದಾರಾ ಪಹಾರ ದೇಶಚೌರ್ಯಾಭಿಜನಕರ್ಮನಿಂದಾಸತ್ಯವಚನ ಸತ್ಯಾಧಿಕ್ಷೇಪೋಪ ಹಾಸಸತ್ಪಾರ್ಶ್ವದ್ರೋಹಂಗಳ್ ಉದ್ದೀಪನ ವಿಭಾವಂಗಳ್, ಭ್ರುಕುಟಿ ನಯನರಾಗಹಂತೌಷ್ಠ ಪೀಡನ ಗಂಡಸ್ಫುರಣ ಹಸ್ತಾಗ್ರನಿಷ್ಪೇಷಣ ತಾಡನ

ಪಾತನಪೀಡನ ಪ್ರಹರಣಾಪಹರಣ ಶಸ್ತ್ರಸಂಪಾತ ರುದಿತಾಕರ್ಷಣಚ್ಛೇದನಾದಿಯನುಭಾವಂ, ಉಗ್ರಾವೇಗೋನ್ಮಾದವಿಬೋಧಾಮರ್ಷಚಾಪಲ್ಯಾದಿ ವ್ಯಭಿಚಾರಿಭಾವಂ, ಇವಱಿಂ ಕ್ರೋಧಂ ಚರ್ವ್ಯಮಾಣಮಾಗೆ ರೌದ್ರರಸಂ.

## ಲಕ್ಷ್ಯಂ

ಕುಡಿವೆಂ ದುಶ್ಶಾಸನೋರಸ್ಸ್ಥಳಮನಗಲೆ ಪೋೞ್ದುರ್ದುರ್ ಕೆನ್ನೆತ್ತರಂ ಪೋ
ಗುಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂಱಾ ।
ಗೊಡವೆಂ ತದ್ರತ್ನರಶ್ಮಿ ಪ್ರಕಟಮಕುಟಮಂ ನಂಬು ನಂಬೆನ್ನ ಕಣ್ಣಿಂ
ಕಿಡಿಯುಂ ಕೆಂಡಂಗಳುಂ ಸೂಸಿದಪುವನಿತುಮಂ ನಂಬು ಪಂಕೇಜವಕ್ತ್ರೇ (೧೦೮)
(ಇದು ಮಾತ್ಸರ್ಯರೌದ್ರಂ)

ಮದಗಜವೆರಡಱ ಬಾಲದ
ಮೊದಲಂ ಪಿಡಿದೆತ್ತಿ ಪೊಯ್ದು ನುರ್ಗೊತ್ತಿದೊಡಾ ।
ಸ್ಮದಿನುಗುವ ರಕ್ತಮುಱಿಯೊನೆ
ತಿದಿಯೊತ್ತುವ ಕಮ್ಮಱಂಬೋಲಿರ್ದಂ ಭೀಮಂ ॥ (೧೧೦)

## ೭. ಭಟ್ಟಾಕಳಂಕದೇವ (೧೬೦೪)

೧೬ನೆಯ ಶತಮಾನದ ಕೊನೆಗೆ ೧೭ನೆಯ ಶತಮಾನದ ಆದಿಯಲ್ಲಿ ಉಭಯ ಭಾಷಾಪಂಡಿತಪ್ರಪಂಚವನ್ನು ಬೆರಗುಗೊಳಿಸುವಂತಹ ವೈಯಾಕರಣ ಭಟ್ಟಾಕಳಂಕದೇವನು ಉದಯಿಸಿದನು. ಶ್ರೀಮತ್ ಚಾರುಕೀರ್ತಿ ಪಂಡಿತ ದೇವಾಚಾರ್ಯ ಶಿಷ್ಯಪರಂಪರಾಯಾತ 'ಶ್ರೀ ಸಂಗೀತಪುರಸಿಂಹಾಸನ ಪಟ್ಟಾಚಾರಶಿ ಶ್ರೀಮದಕಲಂಕದೇವರ' ಶಿಷ್ಯನು. ಇವನನ್ನು ದೇವಚಂದ್ರನು ತನ್ನ ರಾಜಾವಳೀ ಕಥೆಯಲ್ಲಿ (೧೬೩೭) ಹೀಗೆ ಸ್ತುತಿಸಿದ್ದಾನೆ :

"ಸುಧಾಪುರದೊಳ್ ಭಟ್ಟಾಕಳಂಕಸ್ವಾಮಿಗಳ್ ಶಾಸ್ತ್ರಂಗಳೆಲ್ಲಮಂ ಕಲ್ತು ಮಹಾವಿದ್ವಾಂಸರೆನಿಸಿ ಪ್ರಾಕೃತ, ಸಂಸ್ಕೃತ, ಮಾಗಧಿ ಮೊದಲಾದ ಷಡ್ಭಾಷಾ ಕವಿಗಳಾಗಿ ಕರ್ಣಾಟಕ ವ್ಯಾಕರಣಮಂ ರಚಿಸಿ ಕೀರ್ತಿಯಂ ಪಡೆದರ್.[1]

---

[1] ಕ. ಕ. ಚ. ಸಂ. II, ಪು. ೩೪೯.

ಇದರಿಂದ ಭಟ್ಟಾಕಳಂಕನು ಮಹಾವಿದ್ವಾಂಸನು ಮಾತ್ರವಲ್ಲ 'ಸ್ವಾಮಿಗಳ್' ಎಂಬುದಾಗಿ ಗುರುಸ್ಥಾನಮಾನಗಳನ್ನು ಪಡೆದ ಗಣ್ಯವ್ಯಕ್ತಿ ಎಂದು ಹೇಳಬಹುದು. ಕರ್ಣಾಟಕ ಶಬ್ದಾನುಶಾಸನವನ್ನು ಬರೆದನು.

ಶಬ್ದಾನುಶಾಸನವೆಂಬ ಬೃಹತ್-ವ್ಯಾಕರಣಗ್ರಂಥವನ್ನು ಶಕ ೧೫೨೬= ಕ್ರಿ. ಶ. ೧೬೦೪ಕ್ಕೆ ಸರಿಯಾದ ಶೋಭಕೃತು ಸಂವತ್ಸರದಲ್ಲಿ ರಚಿಸಿದಂತೆ ಗ್ರಂಥದಲ್ಲಿ ಉಲ್ಲೇಖವಾಗಿದೆ. ಸಂಸ್ಕೃತವ್ಯಾಕರಣಶಾಸ್ತ್ರಗಳ ಆನುಪೂರ್ವಿಯಲ್ಲಿ ಸೂತ್ರವೃತ್ತಿವ್ಯಾಖ್ಯಾನಗಳನ್ನು ಸಂಸ್ಕೃತ ಭಾಷೆಯಲ್ಲಿ ವಿದ್ವತ್ಪೂರ್ಣವಾಗಿ ಬರೆದ ವಿಸ್ತಾರವಾದ ಕನ್ನಡ ವ್ಯಾಕರಣಗ್ರಂಥವಿದು. ೫೯೨ ಸೂತ್ರಗಳನ್ನೊಳಗೊಂಡ ೪ ಪಾದಗಳಿವೆ. ಪಂಪ, ಪೊನ್ನ, ರನ್ನ, ನಾಗಚಂದ್ರ, ನೇಮಿಚಂದ್ರ, ರುದ್ರಭಟ್ಟ, ಮೊದಲಾದ ಕವಿವೃಷಭರ ಪ್ರಯೋಗಗಳನ್ನು ಲಕ್ಷ್ಯವಾಗಿ ಉದಾಹರಿಸಿದ್ದಾನೆ.

ಗ್ರಂಥದ ಪ್ರಾರಂಭದಲ್ಲಿ ವರ್ಧಮಾನನನ್ನು ವಂದಿಸುತ್ತಾನೆ :

ನಮಃ ಶ್ರೀವರ್ಧಮಾನಾಯ ವಿಶ್ವವಿದ್ಯಾವಭಾಸಿನೇ ।
ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಮ್ಬುಜಾತ್ ॥

ಕರ್ಣಾಟಕವು ಪಂಡಿತರ ಭಾಷೆಯಲ್ಲ, ಅದು ಪಾಮರರ ಭಾಷೆ, ಆದುದರಿಂದ ಅದಕ್ಕೊಂದು 'ಅನುಶಾಸನ' ಏಕೆ ಎಂಬುದಾಗಿ ಹಳಿಯುವ ಅಜ್ಞಾನಿಗಳಿದ್ದಾರೆ, ಅವರಿಗೆ ಸರಿಯಾದ ಉತ್ತರವಿದು ಎನ್ನುತ್ತಾನೆ : ಕೆಲವರು 'ಸಂಸ್ಕೃತಾಗ್ರಹಗ್ರಸ್ತರು' ಸಂಸ್ಕೃತವನ್ನು ಕೊಂಡು ಕೊನೆಯುವರು. ಕರ್ಣಾಟಕವನ್ನು ಏಕೆ ಕಡೆಗಣಿಸುವರು ಎನ್ನುತ್ತಾನೆ.[1]

ಸಂಸ್ಕೃತದಲ್ಲಿ ಸಾಧು— ಅಸಾಧು ವಿವೇಚನೆ ಎಷ್ಟು ಅನುಶಾಸನಾರ್ಹವೊ ಅದು ಅಷ್ಟೇ ಅರ್ಹ 'ಭಾಷೆ'ಯಲ್ಲಿ (ಕನ್ನಡದಲ್ಲಿ), ಇಲ್ಲವಾದರೆ ಅದು ಹೇಗೆ ಭಗವದ್ಭಾಷಾಮಯದಲ್ಲಿ ತನ್ಮಯತೆಯನ್ನು ಪಡೆದೀತು ? ಆದುದರಿಂದ

---

[1] ಕರ್ಣಾಟಕ ಶಬ್ದಾನುಶಾಸನ, ಪು. ೧೧.

ಇಲ್ಲಿಯೂ ಸುಶಬ್ದ-ಅಪಶಬ್ದಗಳ ವಿವೇಚನೆ ನಡೆಯತಕ್ಕದ್ದು. 'ಅನುಶಾಸನ' ಆಗತಕ್ಕದ್ದು....ಮಾತ್ರವಲ್ಲ, ಈ ಭಾಷೆ ಸಶಕ್ತವಾಗಿ ಶಾಸ್ತ್ರಾನುಪಯೋಗಿನಿಯಾಗಿದೆ. ಇದರಲ್ಲಿ ತತ್ತ್ವಾರ್ಥಮಹಾಶಾಸ್ತ್ರಕ್ಕೆ ವ್ಯಾಖ್ಯಾರೂಪವಾಗಿ ೯೬,೦೦೦ ಗ್ರಂಥಗಾತ್ರದ ಚೂಡಾಮಣಿ ಎಂಬ ಕೃತಿಯೂ ಶಬ್ದಾಗಮ, ಯುಕ್ತ್ಯಾಗಮ, ಪರಮಾಗಮ ವಿಷಯಗಳನ್ನೊಳಗೊಂಡ ಕೃತಿಗಳೂ, ಕಾವ್ಯ ನಾಟಕಾಲಂಕಾರ ಕಲಾಶಾಸ್ತ್ರ ಪ್ರತಿಪಾದನ ಗ್ರಂಥಗಳೂ ಇತರ ವಿವಿಧ ಗ್ರಂಥಗಳೂ ಉಪಲಬ್ಧವಾಗುಂಟು. ಆದುದರಿಂದ ಕರ್ಣಾಟಕವು ಮಹಾಜನ ಪರಿಗ್ರಾಹ್ಯ ಎಂಬುದಾಗಿ ಕನ್ನಡದ ಕೀರ್ತಿಯನ್ನು ಸಂಸ್ಕೃತದವರಿಗೆ ಸಾರಿದುದು ಈ ಗ್ರಂಥದ ಒಂದು ವೈಶಿಷ್ಟ್ಯ.

ಮುಂದೆ ಪ್ರತಿಪಾದನೆಯಲ್ಲಿ ಆ ಮಾತು ಸತ್ಯವೆಂಬುದನ್ನು ಸಮರ್ಪಕವಾಗಿ ತೋರಿಸಿಕೊಟ್ಟಿದ್ದಾನೆ.

## ೮. ಗುಣಚಂದ್ರ (೧೬೫೦)

ಸುಮಾರು ೧೬೫೦ರ ಸಮಯದಲ್ಲಿದ್ದಿರಬಹುದಾದ ಗುಣಚಂದ್ರನೆಂಬ ಜೈನ ಲಾಕ್ಷಣಿಕನು 'ಛಂದಸ್ಸಾರ' ಎಂಬ ಅತಿ ಸಂಗ್ರಹವಾದ ಛಂದೋಗ್ರಂಥವನ್ನು ಬರೆದನು. ಒಂದು ಮಂಗಳಪದ್ಯವನ್ನೂ ಇನ್ನೊಂದು ಪ್ರತಿಜ್ಞಾಪದ್ಯವನ್ನೂ ಹೇಳಿ, ಮೂರನೆಯ ಪದ್ಯದಲ್ಲಿ ವಿಷಯಪ್ರವೇಶ ಮಾಡುತ್ತಾನೆ.

### ಕವಿಪ್ರತಿಜ್ಞೆ

ಛಂದೋವಿದ್ಯಾವನಿತಾ
ನಂದಂ ಬುಧತತಿಗಮರೆಯೆನ್ನಂ ಬಯಸಲ್ ।
ಸುಂದರಮೃದುಪದತತಿಯಿಂ
ಸಂದೇಹಂ ಬಾರದಂತೆ ಪೇಟಿಲ್ ಬಗೆವೆಂ ॥

ಇದರಲ್ಲಿ ಐದು ಅಧ್ಯಾಯಗಳುಂಟು. ಮೊದಲಿನ ೪ ಅಧ್ಯಾಯಗಳಲ್ಲಿ ಸಂಸ್ಕೃತ ಛಂದಸ್ಸುಗಳ ವಿಷಯವೇ ಹೆಚ್ಚಾಗಿ ಹೇಳಿದೆ. ಇದರಲ್ಲಿ ಕೇದಾರ ಭಟ್ಟನ ವೃತ್ತರತ್ನಾಕರವನ್ನು ಅನುಸರಿಸಿದಂತಿದೆ. ಆದರೆ ಕೊನೆಯ ಅಧ್ಯಾಯವು

ಬಹಳ ವೈಶಿಷ್ಟ್ಯಪೂರ್ವಕವಾಗಿದೆ. ಬೇರಾವ ಕನ್ನಡ ಛಂದೋಗ್ರಂಥಗಳಲ್ಲಿ ಹಿಂದೆ ಹೇಳಲ್ಪಡದ ಕನ್ನಡ ಛಂದಸ್ಸಿಗೆ ಪ್ರಾಣಭೂತವಾಗಿರುವ 'ತಾಳ'ಗಳನ್ನು ಕುರಿತು ಹೇಳಿದೆ. ಧ್ರುವ, ಮಟ್ಟ, ತ್ರಿಪುಟ, ರೂಪಕ, ಜಂಪಕ, ಅಷ್ಟ, ಏಕ, ಆದಿ ಎಂಬ ಎಂಟು ತಾಳಗಳನ್ನು ನಿರ್ವಹಿಸಿದ್ದಾನೆ.[1]

ಆದಿಯತಾಳಂ । ವಾರ್ಧಿಸುರಸವನು ।
ಸಾಧಿತ ಯತಿಯುಂ । ಬುಧಜನಹೃದ್ಯಂ ॥ ೧೦ ॥

ಅಲ್ಲದೆ ದ್ವಿಪದಿ, ತ್ರಿಪದಿ, ರಗಳೆಗಳು ಲಾವಣಿ, ಸೀಸಪದ್ಯ ಇತ್ಯಾದಿಗೆ ಲಕ್ಷಣಲಕ್ಷ್ಯಗಳನ್ನು ಕೊಟ್ಟಿರುವುದು ಮತ್ತೊಂದು ವೈಶಿಷ್ಟ್ಯ. "ಸೀಸ ಪದ್ಯಗಳೂ ಛಂದೋಂಬುಧಿಕಾರನ ಕಾಲದಲ್ಲಿ ಪ್ರಚಾರದಲ್ಲಿಲ್ಲದೆ ಮತ್ತೆ ತೆಲುಗಿನ ಸಂಪರ್ಕದಿಂದ ಗುಣಚಂದ್ರನ ಕಾಲದ ಕವಿಗಳ ಆದರಕ್ಕೆ ಪಾತ್ರ ವಾಗಿರಬಹುದು."[2]

ಒಟ್ಟಿನಲ್ಲಿ ಈ ಪುಟ್ಟ ಛಂದೋಗ್ರಂಥವು ಛಂದಶ್ಶಾಸ್ತ್ರಪ್ರವೇಶ ಮಾಡು ವವರಿಗೆ ಸುಖಬೋಧವಾಗುವುದರಲ್ಲಿ ಸಂದೇಹವಿಲ್ಲ.

## ೯. ತಿರುಮಲಾರ್ಯ (೧೬೪೫-೧೭೦೬)

ಚಿಕದೇವರಾಜನ ಆಸ್ಥಾನಕವಿಯಾದ ತಿರುಮಲಾರ್ಯನು 'ಅಪ್ರತಿಮವೀರ ಚರಿತ'ವೆಂಬ ಅಲಂಕಾರ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ನಾಲ್ಕು ಪ್ರಕರಣ ಗಳಿವೆ. ಕಾವ್ಯಲಕ್ಷಣ, ಕಾವ್ಯಗುಣ, ಅಲಂಕಾರಗಳು—ಇದರಲ್ಲಿ ಪ್ರತಿಪಾದ್ಯ ವಾದ ವಿಷಯಗಳು. ಇಲ್ಲಿ ಹೇಳಿರುವಷ್ಟು ಅಲಂಕಾರಗಳು ಬೇರಾವ ಕನ್ನಡ ಲಕ್ಷಣಗ್ರಂಥದಲ್ಲಿಯೂ ಹಿಂದೆ ಹೇಳಿರುವುದಿಲ್ಲ. ಚಂದ್ರಾಲೋಕ, ವಾಮನ ವೃತ್ತಿ, ಕಾವ್ಯಪ್ರಕಾಶ ಮೊದಲಾದ ಸಂಸ್ಕೃತ ಲಕ್ಷಣಶಾಸ್ತ್ರಗಳಿಂದ ಲಕ್ಷಣಗಳನ್ನು ಆಯ್ದುಕೊಂಡು ಅವಕ್ಕೆ ಕನ್ನಡದಲ್ಲಿ ವೃತ್ತಿಯನ್ನು ಬರೆದಿದ್ದಾನೆ. ಲಕ್ಷಣ

———

[1] *Annals O. R.* Vol. VI, Pt. II, p. 35.

[2] Ibid. Vol. VII, Pt. I, p. vii.

ಗಳಿಗೆ ಬೇಕಾದ ಉದಾಹರಣೆಗಳೆಲ್ಲವೂ 'ಅಪ್ರತಿಮವೀರ'ನೆಂಬ ಬಿರುದಾಂಕಿತನಾದ ಚಿಕದೇವರಾಜನನ್ನೇ ಕುರಿತಾಗಿ ಕವಿಯು ತಾನೇ ರಚಿಸಿದ ಸ್ತುತಿಗಳಾಗಿರುತ್ತವೆ.

### ಉದಾಹರಣೆಗಳು

ಸೌಕುಮಾರ್ಯಮೆನೆ—

ಸೂ|| "ಅಪಾರುಷ್ಯಂ ಸೌಕುಮಾರ್ಯಂ".

ವೃತ್ತಿ—ಬೆಟ್ಟಿತ್ತಾದ ಪುರುಳಂ ಮೆಲ್ನುಡಿಯಿಂದೊರೆಯೆ ಸೌಕುಮಾರಮೆನಿಪುದು.

ಒಂದೊಂದು ದೊರೆತನದೊಳ್
ನಿಂದಿರೆ ಚಿಕದೇವರಾಯನೂಟಿಗದವರೇಂ ।
ಕುಂದಿದರೇ ಪಗೆದೊರೆಗಳು
ಮೊಂದಿದರಾ ಬರ್ದಿಲ ನಾಡ ಬಾಚ್ಚಿಯ ಸಿರಿಯಂತೆ ॥ (I—೪೪)

### ಉಲ್ಲೇಖಾಲಂಕಾರಂ

ಸೂ|| "ಬಹುಭಿರ್ಬಹುಧೋಲ್ಲೇಖಾದೇಕಸ್ಯೋಲ್ಲೇಖ ಇಷ್ಯತೇ"

ವೃತ್ತಿ—ಒಂದು ವಸ್ತು ಓರೋರ್ವರ್ಗೆ ಬೇಟಿವೇಟಿ ತಿಳಿಯೆ ಅದು ಉಲ್ಲೇಖಂ.

ಎಂತೆನೆ—

ಕಾಮಂ ಕಾನ್ತಾಬೃಂದಕೆ
ರಾಮಂ ಪ್ರಜೆಗಹಿತಭೂಪರರ್ದೆಗೆ ನೃಸಿಂಹ ।
ಭೂಮಂಡಲಮನಿತರ್ಕಂ
ಕ್ಷೇಮಂಕರನೆನಿಸಿ ನೆಗಟಿ ಚಿಕದೇವೇಂದ್ರಂ ॥ (III—೨೪)

## ೮. ಶಾಸ್ತ್ರೀಯ ಸಾಹಿತ್ಯ

ಕನ್ನಡದಲ್ಲಿ ಗಣನೀಯವಾದ ಶಾಸ್ತ್ರಸಾಹಿತ್ಯ ಹಿಂದಿನಿಂದ ಬೆಳೆದುಬಂದಿರುತ್ತದೆ. ಭಟ್ಟಾಕಳಂಕನು ತನ್ನ ಶಬ್ದಾನುಶಾಸನದಲ್ಲಿ 'ಶಬ್ದಾಗಮ ಯುಕ್ತ್ಯಾಗಮ

ಪರಮಾಗಮ ವಿಷಯಾಣಾಂ, ತಥಾ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರವಿಷಯಾಣಾಂ, ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಂ ಉಪಲಭ್ಯಮಾನತ್ವಾತ್' ಎಂಬುದಾಗಿ ಕನ್ನಡ ಭಾಷೆಯ ಗ್ರಂಥವೈವಿಧ್ಯಸಮೃದ್ಧಿಗಳನ್ನು ಸೂಚಿಸಿರುವುದು ಬರಿಯ ಜಂಬದ ಮಾತಲ್ಲ. ವೈದ್ಯ, ಜ್ಯೋತಿಷ, ಪಾಕ, ಗಣಿತ ಇತ್ಯಾದಿಗೆ ಸಂಬಂಧಿಸಿದ ಸ್ವತಂತ್ರ ಗ್ರಂಥಗಳೂ ಅನುವಾದಗಳೂ ರಚನೆಯಾಗಿವೆ. ಅವುಗಳಲ್ಲಿ ಮುಖ್ಯವಾದುವುಗಳನ್ನೂ ಪ್ರಾತಿನಿಧಿಕವಾದುವುಗಳನ್ನೂ ಕೆಲವನ್ನು ಕಾಲಾನುಕ್ರಮವಾಗಿ ಪರಿಶೀಲಿಸುವುದಕ್ಕೆ ಈ ಪ್ರಕರಣದಲ್ಲಿ ಪ್ರಯತ್ನಿಸಲಾಗಿದೆ.

## ೧. ಸೈಗೊಟ್ಟ ಶಿವಮಾರ (ಸು. ೮೦೦)

ಎಂಬ ಗಂಗರಾಜನು ಶಿವಮಾರಮತವೆಂಬ ಗಜಶಾಸ್ತ್ರವನ್ನೂ ಗಜಾಷ್ಟಕವನ್ನೂ ರಚಿಸಿದಂತೆ ನಗರದ ೩೫ನೆಯ ಶಾಸನದಿಂದ ತಿಳಿದುಬರುತ್ತದೆ.[1] ಶಿವಮಾರದೇವಂ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮುಂ ಮಾಡಿ ಮತ್ತಂ—

ಏವೇೞ್ವುದೊ ಶಿವಮಾರಮ
ಹೀವಳಯಾಧಿಪನ ಸುಭಗಕವಿತಾಗುಣಮಂ ।
ಭೂವಳಯದೊಳ್ ಗಜಾಷ್ಟಕ
ಮೋವನಿಗೆಯುಮೊನಕೆವಾಡುಮಾದುದೆ ಪೇೞ್ಗುಂ ॥

ಶಿವಮಾರಮತವೆಂಬ ಹೆಸರಿನಲ್ಲಿ ಬರೆದ ಗಜಶಾಸ್ತ್ರವು ಗದ್ಯಗ್ರಂಥವಿರಬಹುದು. ಮತ್ತೆ ಆತನ ಸುಭಗಕವಿತಾಗುಣವನ್ನು 'ಏವೇೞ್ವುದೊ' ಎಂಬುದಾಗಿ ಗಜಾಷ್ಟಕವನ್ನು ಹೆಸರಿಸಿರುದವುರಿಂದ ಅದು ಪದ್ಯರೂಪದಲ್ಲಿ ಬರೆದುದಾಗಿರಬೇಕು. ಮಾತ್ರವಲ್ಲ ಅದು ಬಹಳ ಸುಲಭ ಶೈಲಿಯಲ್ಲಿ ಲಲಿತವಾಗಿದ್ದುದರಿಂದ ಓವನಿಗೆ–ಒನಕೆ ಹಾಡಾಗಿ ನಾಡಿನಲ್ಲಿ ಪ್ರಸಿದ್ಧವಾಗಿದ್ದಿರಬೇಕು. ಇದು ಕವಿರಾಜಮಾರ್ಗ ರಚನೆಯ ಕಾಲಕ್ಕಿಂತ ಹಿಂದಿನದು. ಆನೆಗಳನ್ನು ಪಳಗಿಸುವುದು, ಮತ್ತು

---

[1] ಕ. ಕ. ಚ., ಸಂ. I, ಪು. ೧೭.

ಅವನ್ನು ಉಪಯೋಗಿಸುವುದು ಅಂದು ಕನ್ನಡನಾಡಿನಲ್ಲಿ ಬಹಳ ರೂಢಿಯಲ್ಲಿದ್ದಿರಬೇಕೆಂಬುದನ್ನು ಇದರಿಂದ ಅನುಮಾನಿಸಬಹುದು.

## ೨. ಎರಡನೆಯ ಚಾವುಂಡರಾಯ (೧೦೨೫)

'ಲೋಕೋಪಕಾರ'ವೆಂಬ ಅತ್ಯುಪಯುಕ್ತವಾದ ಶಾಸ್ತ್ರೀಯ ಗ್ರಂಥವನ್ನು ಬರೆದ ಚಾವುಂಡರಾಯ ಕವಿಯು ಬ್ರಾಹ್ಮಣನೆಂಬುದಾಗಿಯೂ ಈತನ ಕಾಲ ಶಕ ೯೪೭ = ಕ್ರಿ. ಶ. ೧೦೨೫ ಎಂಬುದಾಗಿಯೂ ಗ್ರಂಥದಿಂದಲೇ ತಿಳಿದು ಬರುತ್ತದೆ. ಜಯಸಿಂಹನೆಂಬ ಚಾಲುಕ್ಯ ಚಕ್ರವರ್ತಿಯ (೧೦೨೦-೧೦೪೫) ಆಶ್ರಯದಲ್ಲಿದ್ದು ವಿಶೇಷವಾದ ರಾಜಮನ್ನಣೆ ಪಡೆದಿದ್ದನು. ಇವನಿಗಿಂತ ಮೊದಲೆ ಹಳಗನ್ನಡ ಗದ್ಯರೂಪದಲ್ಲಿ ಚಾವುಂಡರಾಯಪುರಾಣವನ್ನು ಬರೆದ ಚಾವುಂಡರಾಯನು ಆಗಿಹೋದುದರಿಂದ, ಅವನನ್ನು ಒಂದನೆಯ ಚಾವುಂಡರಾಯನೆಂದೂ ಇವನನ್ನು ಎರಡನೆಯ ಚಾವುಂಡರಾಯನೆಂದೂ ಕರೆಯುವರು.

ಹಳೆಯ ಶಾಸ್ತ್ರೀಯ ಗ್ರಂಥಗಳಲ್ಲಿ 'ಲೋಕೋಪಕಾರ'ಕ್ಕೆ ಅಗ್ರಸ್ಥಾನ ಸಲ್ಲಬೇಕು. ಒಂದು ದೃಷ್ಟಿಯಿಂದ ಅದನ್ನು ಪುಟ್ಟ 'ವಿಶ್ವಕೋಶ'ವೆಂದರೂ ಒಪ್ಪುವುದು. ಅದು ೧೨ ಅಧಿಕಾರಗಳಾಗಿ ವಿಭಾಗಿಸಲ್ಪಟ್ಟಿದೆ ; ಒಟ್ಟಿನಲ್ಲಿ ೯೩೮ ವೃತ್ತಗಳಿವೆ (ಅವುಗಳಲ್ಲಿ ಶಾಸ್ತ್ರನಿರ್ವಚನಕ್ಕೆ ಅನುಕೂಲವಾದ ಕಂದ ವೃತ್ತಗಳು ೬೩೭; ಮತ್ತೇಭ ೯೨; ಚಂಪಕ ೮೫ ಮತ್ತೆ ಬೇರೆ ೨೦ ವಿವಿಧ ವೃತ್ತಗಳಲ್ಲಿ ೧೨೪). ಈ ಗ್ರಂಥದ ಪ್ರಯೋಜನವನ್ನರಿತವರು ಇದಕ್ಕೆ ಟೀಕೆಯೊಂದನ್ನು ಬರೆದಿರುವರು.

ಪಂಚಾಂಗ ಫಲವರ್ಣನಂ, ನವಪಟಲಂ, ವಾಸ್ತು ಪ್ರಕರಣಂ, ಉತ್ಪಾತಾಧ್ಯಾಯಂ, ಉದಕಾರ್ಗಳಂ, ವೃಕ್ಷಾಯುರ್ವೇದಂ, ಗಂಧಯುಕ್ತಿಕ್ರಮಂ, ಸೂಪಶಾಸ್ತ್ರಂ, ನರಾದಿವೈದ್ಯಪ್ರಕರಣಂ, ವಿಷವೈದ್ಯಂ, ಸರ್ವಲಕ್ಷಣ ಪರಿಜ್ಞಾನ ಪ್ರಕರಣಂ, ಶಕುನಾದಿಪ್ರಕರಣಂ ಎಂಬವು ಆ ೧೨ ಅಧಿಕಾರಗಳ ಹೆಸರುಗಳು. ಇವುಗಳಲ್ಲಿ ಪ್ರತಿಪಾದಿತವಾದ ಶಾಸ್ತ್ರೀಯಾಂಶಗಳನ್ನು ಇಲ್ಲಿ ನಿರ್ದೇಶಿಸುವುದು ಕಷ್ಟ ; ಸ್ಥಾಲೀಪುಲಕನ್ಯಾಯದಿಂದ ಇದರ ಯೋಗ್ಯತೆಯನ್ನರಿಯುವಂತೆ ಉದಾಹರಣೆಗಳನ್ನು ಕೊಡಲಾಗಿದೆ :

ಕವಿ ತನ್ನ ವಿನಯಾದಿ ಗುಣಗಳನ್ನು ಹೇಳಿಕೊಂಡಿದ್ದಾನೆ :

ವಿನಯದ ಕಣಿ ದಯೆಯ ತವ
ರ್ಮನೆ ಸತ್ಯದ ಬಿಟ್ಟಿ ಧರ್ಮದೊಂದಾಣ್ಮನೆ ಮಾಂ ।
ತನದೆಱೆವೆಟ್ಟಟ್ಟುವಿನ ಕಣ
ಯೆನೆ ಪೆಂಪಂ ತಳೆದನಿಳೆಯೊಳಚಳಿತವಚನಂ ॥ (I–೧೫)

ತನ್ನ ಗ್ರಂಥವು ಹೇಗೆ ಅನ್ವರ್ಥವಾಗಿದೆ ಎನ್ನುವನು :

ಮೇದಿನಿಯುಪಕಾರಂ ಕಲಿ
ವೋದುಗಳೆನಿತೊಳವವಿಲ್ಲಿ ನೆಲಸಿರ್ದು ಬುಧೋ ।
ಪಾದೇಯಮಾದ ದೂಸಱೆ
ನಾದುದೊ ಲೋಕೋಪಕಾರಮೇನನ್ವರ್ಥಂ ॥ (I–೨೩)

ಅನೇಕ ಲೌಕಿಕಶಾಸ್ತ್ರಮುಳ್ಳುದರಿಂದ ಈ ಗ್ರಂಥವು ಜಗತ್ತಿಲಕವಾಗಿ ರಾಜಸಮಾಜಪೂಜಿತವಾಯಿತಂತೆ ; ಇದರ ಸಾರವೆಂದರೆ 'ಬಂಗಾರಕ್ಕೆ ಪರಿಮಳ ಬಂದ ಹಾಗಂತೆ'.

ಪಲವುಂ ಲೌಕಿಕಶಾಸ್ತ್ರಮುಳ್ಳುದಱಿನೀ ಲೋಕೋಪಕಾರಂ ಜಗ
ತ್ತಿಲಕಂ ರಾಜಸಮಾಜಪೂಜಿತಮಿದಂ ತಾತ್ಪರ್ಯದಿಂದಂ ಸ್ವಗೋ ।
ತ್ರಲಲಾಮಂ ಕವಿತಾವಿಳಾಸತನುಜಾತಂ ಪೇಟ್ದನೆಂದಂದು ಕೇ
ವಲಮಲ್ತಲ್ತಿದು 'ಪೊನ್ಗೆ ಕಂಪು ದೊರೆಕೊಂಡು'ತಾದುದೇಂ ಸಾರಮೋ ॥
(I–೨೪)

ಭಾವಿ ತೋಡುವುದಕ್ಕೆ ಶುಭನಕ್ಷತ್ರಗಳು

ಅನುರಾಧೆ ಭಾನು ಪುಷ್ಯಂ
ಧನಿಷ್ಠೆಮಘೆಶತವಿಶಾಖೆ ಮೂಱುತ್ತರೆಯಿಂ ।
ಬನಿಱೊಳಂ ವಿಧಿಯಿಂ ವರು
ಣನನರ್ಚಿಸಿ ಭಾವಿ ತೋಡೆ ಶುಭಮಂ ಮಾಟ್ಕುಂ ॥ (V–೨)

(ಟೀಕೆ : ಅನುರಾಧೆ, ಹಸ್ತಂ, ಪುಷ್ಯಂ, ಧನಿಷ್ಠೆ, ಮಘೆ, ಶತವಿಶಾಖೆ, ಉತ್ತರೆ, ಉತ್ತರಾಷಾಢ, ಉತ್ತರಾಭಾದ್ರಪದೆ, ಈ ನಕ್ಷತ್ರಂಗಳಲ್ಲಿ ಜಲಾಧಿಪತಿ

ಯಪ್ಪ ವರುಣನಂ ಶಾಸ್ತ್ರೋಕ್ತಿಯಿಂದೆ ಪೂಜಿಸಿ ಭಾವಿಗಳಂ ತೋಡಲ್ ಜಲಸಿದ್ಧಿ ಯಪ್ಪುದು.)

ಬಂಡೆಕಲ್ಲನ್ನು ಒಡೆಯುವ ಕ್ರಮ :

ಶಿಲೆಯೊಡೆಯದಂದು ತುಂಬುರ
ಪಲಾಶದಿಂಧನಮನೊಟ್ಟಿ ಸುಟ್ಟಂತದರೊಳ್ ।
ಜಲಮಂ ದುಗ್ಧಮುಮಂ ಸಲೆ
ತಳಿಯಲೊಡಂ ಸಿಡಿದೊಡೆದು ಪಾಱಗುಂ ತತ್‌ಕ್ಷಣದೊಳ್ ॥

(V–೩೭)

ಯಾವ ಹಣ್ಣಿನಲ್ಲೂ ಬೀಜವಿಲ್ಲದಂತೆ ಮಾಡುವ ಸಂಸ್ಕಾರ :

ಮಧುಕಂ ಮಧೂಕಪುಷ್ಪಂ
ಮಧುಶರ್ಕರ ಕೋಷ್ಠಮೆಂಬಿವಂ ಮೊದಲೊಳ್ ಪೂ
ಟ್ಟಿಧಿಕಫಲವಾಗಿ ಪಡೆಗುಂ
ಮಧುರತೆಯಿಂ ಬೀಜವಾಗದಾವಫಲಂಗಳ್ ॥ (VI–೪೦)

ಇಡ್ನಲಿಗೆ

ಆರೆದುರ್ದಿನ ಬೇಳೆಯನೊಂ
ದಿರೆ ಮೊಸರಡಿ ನೀರೊಳಿಂಗು ಜೀರಿಗೆ ಕೊತ್ತುಂ ।
ಬರಿ ಮೆಣಸಲ್ಲಮಿವಿನುತಂ
ಬೆರಸಿಡ್ನಲಿಗೆಯನಡಲ್ಕೆ ಕಂಪಂ ಕುಡುಗುಂ ॥ (VIII–೧೧)

ಕೆಯ್ಮಸಕಕ್ಕೆ

ನವನೀತಮುಮಂ ಶುಕತುಂ
ಡುವುಮಂ ಮೇಣ್ ಬಿಸಿಯನೀರುಮಂ ಕೋಳದ ಮೂ ।
ಳವುಮಂ ಮರವಸಲೆಯ ಪ
ತ್ರೆ ತೊಳಸಿ ಸೇವಿಸುಗೆ ಪಿಂಗುಗುಂ ಕೆಯ್ಮಸಕಂ ॥ (IX–೩೭)

ಕ್ಷಯಕ್ಕೆ

ನಾಗಬಲಾ ಘೃತಮಧುಗಳ
ನಾಗಳುಮುಪಯೋಗಿಸುತ್ತುಮಿರ್ದಂದು ಮಹೋ ।

ದ್ಯೋಗಿಗೆಡಱಱ್ ಪಿಂಗುವವೋಲ್
ಬೇಗಂ ಪಱಿಪಟ್ಟು ಪಿಂಗುಗುಂ ಕ್ಷಯರೋಗಂ ॥ (IX–೩೭)

ಸಕಲವಿಷಕ್ಕೆ

ಸಿರಿಸದ ಬೀಜಮನಿಂಬಾ
ಗಿರೆ ಕಳ್ಳಿಯ ಪಾಲೊಳೂಡಿ ಕುಡೆ ಮಾಣ್ಗುಂ ದು ।
ರ್ಧರವಿಷಮದು ಮಧುಘೃತವೆಂ
ಬೆರಡನೆ ಕುಡೆ ಶೀರ್ಗುಮೆಯ್ದೆ ಪದಿನಯ್ದು ವಿಷಂ ॥ (X–೨೩)

ಹುಚ್ಚುನಾಯ ವಿಷಕ್ಕೆ

ದಿನಪತಿದುಗ್ಧಮಂ ಗುಡಮರಣ್ಣೆಯುಮಂ ಸವನಾಗಿ ಕೊಂಡು ಮೇಣ್
ಕನಕರಸಾಜ್ಯದುಗ್ಧಗುಡವೆಂಬವನಿಪ್ಪಲವಾಗಿ ಕೊಡಿ ಮೇಣ್ ।
ಕನಕನ ಮೂಟು ಬೀಜಮನೆ ಮೇಣ್ ಕುಡುಗಲ್ಲದೊಡಂ ಶಿರೀಷಮೊಂ
ದನೆ ಜಲದಿಂದೆ ಪೂಸುಗದು ಪೆಂಕುಳಿನಾಯ ವಿಷಾಪಹಾರಕಂ ॥ (X–೨೪)

ಬುದ್ಧಿವರ್ಧನಕ್ಕೆ

ಘೃತಮಧುಸಹಿತಂ ಬಜೆಯುಂ
ಸಿತಮುಂ ನೆಲ್ಲಿಯುಮನಿರ್ಪತೊಂದುದಿನಂ ।
ಸತತಮುಪಯೋಗಿಸುತಿರ್ದೊ
ಡತಿಶಯ ಮೇಧಾವಿಯಕ್ಕುಮಚಳಿತವಚನಾ ॥ (IX–೪೧)

ಗ್ರಂಥವು ಈ ಭರತವಾಕ್ಯದಿಂದ ಅಂತ್ಯವಾಗುವುದು :

ಜನನಾಥಂ ಜಯಕೇಶಿ ದೇವನೊಸೆದೇಕಚ್ಛತ್ರದಿಂದಾಳ್ಗೆ ಮೇ
ದಿನಿಯಂ ನೀರ್ಮಱಿಕೊಳ್ಗೆ ಪೆರ್ಚುಗಿಳೆಗಾಯುಂ ಶ್ರೀಯುಮಾರೋಗ್ಯಮುಂ ॥
ಧನಮುಂ ಧಾನ್ಯಮುಮಕ್ಕೆ ಸರ್ವಜಗಕೇ ಲೋಕೋಪಕಾರಂ ಚತು
ರ್ವನಧಿಪ್ರಾವೃತಧಾತ್ರಿಯೊಳ್ ಪರೆಗಿಳಾಚಂದ್ರಾರ್ಕತಾರಂಬರಂ ॥
(XII–೬೭)

## ೩. ಜಗದ್ದಳ ಸೋಮನಾಥ (೧೧೫೦)

ಈ ಪಂಡಿತನು 'ಕಲ್ಯಾಣಕಾರ'ವೆಂಬ ವೈದ್ಯಗ್ರಂಥವನ್ನು ಬರೆದಿರುವನು. ಪ್ರಾಯಃ ಕನ್ನಡದಲ್ಲಿ ದೊರಕುವ ವೈದ್ಯಗ್ರಂಥಗಳಲ್ಲಿ ಇದು ಮೊದಲನೆಯದು.

ಪೂಜ್ಯಪಾದನಿಂದ ಸಂಸ್ಕೃತದಲ್ಲಿ ರಚಿತವಾದ 'ಕಲ್ಯಾಣಕಾರಕ'ದ ಕನ್ನಡ ಭಾಷಾಂತರವಿದು. ಇದರಲ್ಲಿ ೮ ಅಧ್ಯಾಯಗಳಿವೆ. ಕವಿಚರಿತೆಯಲ್ಲಿ ಉದ್ಧೃತವಾದ ಕೆಲವು ಉದಾಹರಣೆಗಳು :[1]

ಸನ್ನಿಪಾತಜ್ವರದಿಂದ ನಾಲಗೆ ಬಿದ್ದಲ್ಲಿ ನಡೆಸಬೇಕಾದ ಚಿಕಿತ್ಸೆ :

ಪಲಕಾಲದ ಪುಣಿಸೆಯಪ
ಣ್ಣಲೇಹ್ಯಮಂ ಮಾಡೆ ಸನ್ನಿಪಾತಜ್ವರದಿಂ ।
ಸಲೆಪೊರಳದಿರ್ದ ನಾಲಗೆ
ಗೆ ಲೇಸನೀಗುಂ ಜ್ವರಂಗಳಂ ಪಿಂಗಿಸುಗುಂ ॥

ರಕ್ತಪಿತ್ತ ಪರಿಹಾರಕ್ಕೆ

ಬೆರಸುವುದುೞ್ತೆ ಘೃತಮಂ ಶ
ರ್ಕರೆಯಂ ನೆಲ್ಲಿಯುಮನಮರ್ದುವಳ್ಳಿಯ ಪುಡಿಯಂ ।
ಪಿರಿದೆನಿಪ ರಕ್ತಪಿತ್ತದ
ಭರಮಂ ಪರಿಹರಿಕ್ಕು ಮಱಿಗಿದಮೃತಾಮಳಕಂ ॥
(ಈ ಔಷಧಿಯ ಹೆಸರು ಅಮೃತಾಮಳಕವಂತೆ.)

ಇಲ್ಲಿ ಜ್ವರಕ್ಕೆ ಹೇಳಿದ ಚಿಕಿತ್ಸೆ ಎಲ್ಲರೂ ಸಾಮಾನ್ಯವಾಗಿ ಹೇಳುವುದಾಗಿದೆ :

ಜ್ವರದಾದಿಯೊಳುಪವಾಸಂ
ಜ್ವರಮಧ್ಯದಲ್ಲಿ ಗಂಜಿ ಪೇೞ್ವ ಕಷಾಯಂ ।
ಜ್ವರಪಾಕದೊಳಸ್ತಮಿತ
ಜ್ವರದೊಳ್ ಮಲಹರಣಮಿನಿತಿವಾರೋಗ್ಯಕರಂ ॥

## ೪. ಚಂದ್ರರಾಜ (ಸು. ೧೦೪೦)

ಚಾಲುಕ್ಯಚಕ್ರವರ್ತಿ ಜಯಸಿಂಹ (೧೦೧೪–೧೦೪೨) ರಾಜನ ಮಾಂಡಲಿಕನಾದ ರೇಚನೃಪನ ಆಸ್ಥಾನದಲ್ಲಿದ್ದ ಚಂದ್ರರಾಜನೆಂಬ ಕವಿಯು ಕನ್ನಡದಲ್ಲಿ

---

[1] ಕ. ಕ. ಚ., ಸಂ. ೨, ಪು. ೧೬–೧೭.

ಚಂಪೂರೂಪದಲ್ಲಿ ಮದನತಿಲಕವೆಂಬ ಕಾಮಶಾಸ್ತ್ರ ಗ್ರಂಥವನ್ನು ಬರೆದನು. ಇವನು ತನ್ನ ಗ್ರಂಥದ ಮೂಲವು ವಾತ್ಸ್ಯಾಯನ ಕಾಮಶಾಸ್ತ್ರವೆಂಬುದನ್ನು ತಿಳಿಸಿರುವನು. "ಪಲಂಬರುಮಾಚಾರ್ಯರಿಂದಂ ವ್ಯಿರಚ್ಛಿನ್ನಮಾದ ಮದನಾಗಮನ ಮನೊಂದು ಮಾಡಿ ವಾತ್ಸ್ಯಾಯನಂ ಮೂವತ್ತಾರಧ್ಯಾಯಮೇೞಧಿಕರಣ ದೊಳ್ ನಾಲ್ವತ್ತೆಂಟಕ್ಕರದ ಸಮಪಾದ ಸಹಸ್ರ ಗ್ರಂಥದಿಂ ಪೇೞ್ದನಲ್ಲಿ ಚಂದ್ರರಾಜನಾಗಮಲೌಕಿಕವಿರೋಧಮುಂ ಕಳೆದು ಸಾರಾಂಶಮುಂ ಕೊಂಡು ಪಲವುಂ ಮತಂಗಳನೊಂದು ಮಾಡಿ ಪದಿನೆಂಟಧಿಕರಣಂಗಳಿಂದಳಂಕಾರಕೃತ ಮಾಗೆ ನಾನಾಛಂದದಿನೈನೂಱು ಗದ್ಯಪದ್ಯಂಗಳಿಂ ವಿಶ್ರುತಂ ಮಾಡಿ ಪೇೞ್ದಿಂ . . . ." ಈ ಗ್ರಂಥವು ಸಮಗ್ರವಾಗಿ ದೊರೆತಿಲ್ಲ. ಹನ್ನೊಂದು ಅಧಿಕರಣಗಳು ಮಾತ್ರ ದೊರೆತಿವೆ; ದೊರೆತ ಭಾಗದಲ್ಲಿ ಕೂಡ ಅನೇಕ ಕಡೆಗಳಲ್ಲಿ ಗ್ರಂಥಪಾತಗಳೂ ಅಶುದ್ಧಪಾಠಗಳೂ ಇವೆ.

ಕವಿಯು ಬ್ರಾಹ್ಮಣನು; ಶಿವಭಕ್ತನು. ಅನೇಕ ಶಾಸ್ತ್ರಗಳಲ್ಲಿ ಘನ ಪಾಂಡಿತ್ಯವಿದ್ದವನು :

ಶಿವಶೀಲಂ ಪುಣ್ಯಶೀಲಂ ವಿಬುಧವಿಬುಧಶಾಲಂ ಗುಣಾನೀಕಶಾಳಂ
ಸುವಿನೀತಂ ಬಂಧು........................ಸುವಿಸ್ತಾರಿಜಾತಂ ।
ಕವಿಭಾವಂ ಸುಪ್ರಭಾವಂ ವಿಶದವಿಶದಭಾವಂ ಮಹಾಭಾವಂ
ಭವತೇಜಂ ಚಂದ್ರರಾಜಂ ಕರಣಕರಣರಾಜಂ ದ್ವಿಜಾಂಬೋಧಿರಾಜಂ ॥

ಸಕಲ ವ್ಯಾಕರಣಾರ್ಥ ಶಾಸ್ತ್ರಗಣಿತಾಲಂಕಾರ ಸತ್ಕಾವ್ಯ ನಾ
ಟಕ ವಾತ್ಸ್ಯಾಯನ ನೃತ್ಯಗೀತಹಯಶಾಸ್ತ್ರಾದ್ವೈತ ಗಾಂಧರ್ವ ತಾ।
ರ್ಕಿಕವಿಂದ್ರಾಗಮ (?) ವೈದ್ಯ ವಾದ್ಯ ಶಕುನೋದ್ಯತ್ ಹೃದ್ಯ ವಿದ್ಯಾಕದಂ
ಬಕಮುಂ ಚಂದ್ರಕವೀಂದ್ರನೊರ್ವನೆ ವಲಂ ಬಲ್ಲಂ ಪೆಱರ್ಬಲ್ಲರೇ ॥
(೧–೫೨, ೫೧)

ಕಾಮಶಾಸ್ತ್ರಾಭ್ಯಾಸದ ಆವಶ್ಯಕತೆಯನ್ನು ಹೇಳುತ್ತಾನೆ :

. . . . "ದುರ್ಲಭಂ ಧರ್ಮಾರ್ಥಕಾಮವರ್ಗಂ" (I–೬೧)

ಅವರೊಳಗೆ ಧರ್ಮಮಂ ದ್ರ
ವ್ಯವುಮೆರಡುಂ ಹೇತುವಲ್ತೆ ಕಾಮಕ್ಕದಱಿಂ ।

ತ್ರಿವಿಧದೊಳಂ ಕಾಮಮೆ ಮು
ಖ್ಯವೆಂದು ಮುನಿಮುಖ್ಯರಱಿಯದೇಂ ಮಾಡಿದರೇ ॥ (I–೬೨)

ಜಗತೀತಳದೊಳಪುತ್ರ
ಸ್ಯ ಗತಿರ್ನಾಸ್ತಿಯುಮೆನಿಪ್ಪ ಮುನಿವಾಕ್ಯಂ ನೆ ।
ಟ್ಟಗೆ ಕಾಮಸುಖದಿನಲ್ಲದೆ
ನೆಗಟ್ಟಿಗ್ಗಮೆ ಪೇೞಿ್ ಶಾತಕುಂಭಘಟಕುಚಯುಗಳೇ ॥ (I–೬೫)

ವಂಶದ ಉತ್ತರೋತ್ತರಾಭಿವೃದ್ಧಿಯನ್ನು ಬಯಸುವವನು ಮಾನಿನಿಗೆ ವಿರಾಗ ಮಾಗದಂತೆ ಅವಳನ್ನು ಒಲಿಸಿ ಅನುಭವಿಸಬೇಕೆಂಬುದನ್ನು ಸುಂದರವಾಗಿ ತಿಳಿಸುತ್ತಾನೆ :

ಏನಂ ಪೇೞ್ವುದೊ ಪಲವಂ
ಮಾನಿನಿಗೆ ವಿರಾಗಮಾಗದಂತನುಭವಿಸಂ ।
ತ್ತಾನಾರಿಯನೊಲ್ದೊಲಿಸುಗೆ
ಮಾನ ಯಶೋ ಧರ್ಮ ವಂಶಮಂ ಬಯಸುವವಂ ॥ (I–೯೧)

ಗ್ರಂಥದಲ್ಲಿ ಕಾಮಶಾಸ್ತ್ರಕ್ಕೆ ಸೇರಿದ ಅನೇಕ ವಿಷಯಗಳು ವಿವರಿಸಲ್ಪಟ್ಟಿವೆ. ಕವಿಯ ಶೈಲಿಯು ಸುಲಭವೂ ಸುಂದರವೂ ಆಗಿರುತ್ತದೆ. ವಿವಿಧ ಛಂದಸ್ಸುಗಳ ಪ್ರಯೋಗವನ್ನು ಮಾಡಿರುವುದರಿಂದ, ಚಂದ್ರರಾಜನು ಛಂದಶ್ಶಾಸ್ತ್ರಕಾರರಿಗೆ ವಿಶೇಷ ಉಪಕಾರಮಾಡಿದಂತೆಯೂ ಆಗಿದೆ. ಚಕ್ರವೃತ್ತ, ಮುರಜಬಂಧ, ಗೋಮೂತ್ರಿಕೆ, ಪಣವಬಂಧು, ಪ್ರತ್ಯಾಗತ್ಯ, ಜತ್ತರಟ್ಟ, ಏಕಾಕ್ಷರಿ, ದ್ವ್ಯಕ್ಷರಿ, ನಿರೋಷ್ಠವೃತ್ತ ಇತ್ಯಾದಿಗೆ ಇಲ್ಲಿ ಅನೇಕ ಲಕ್ಷ್ಯಗಳುಂಟು.

ಏಕಾಕ್ಷರಿ

ನಿನ್ನನ್ನೆಂ ನಿನ್ನನ್ನೆಂ
ನಿನ್ನಾಂನುನನನ್ನ ನಿನ್ನನನ್ನೆಂ ನಿನ್ನಂ ।
ನಿನ್ನನ್ನಾಂ ನಾಂನೀನನೆ
ನಿನ್ನೆನು ನನ್ನಿಂ ನಿನ್ನನಾ ನಿನನೇನೇಂ ॥ (VI–೯)

ಇದುವೆ ಗೋಮೂತ್ರಿಕೆಯುಂ, ಮುರಜಬಂಧಮುಂ, ಚಕ್ರಾಷ್ಟ ಯಮುಂ, ಮಕರವ್ಯೂಹಮುಂ, ಶಂಖಾವರ್ತಮುಮಕ್ಕುಂ—

ಮಾರಾಮಮಾನಿನಿ ಮಾರಾಮಮಾರಾಜ ಮಾತೃಕ್ರಮಾ ಜರಾ ।
ಮಾಮಾ ಮಾಶತೆ ಮಾಮಾ ಮಾಸತ್ವ ಸತ್ವತ್ವಸತ್ವನೀಂ ॥ (X–೨೫)

ಮದನತಿಲಕದಿಂದ ಬೇರೆ ಕೆಲವು ಉದಾಹರಣೆಗಳು :

ಲತೆ ಮೊದಲಾಗಿ ಸಮೀಪ
ಸ್ಥಿತ ವೃಕ್ಷಮದೆಂತುಟಾದೊಡಂ ಪತ್ತುಗುಮಾ ।
ಸ್ಥಿತಿಯಂ ಸತಿಸಂಗತ್ಯದ
ಕತದಿಂ ಕೆಟ್ಟಾರೊಳಾದೊಡಂ ಮಱಿವಾಟ್ಟುಗಂ ॥ (VIII–೧೭)

ಚೆನ್ನಿಗನಂ ಯೌವನನಂ
ಕೊನ್ನಿಗನಂ ಪೊಂಬನಂ ಕರಂ ತೊಂಬನುಮಂ ।
ತನ್ನಯ ಸುದತಿಗೆ ಕಾಪಿ
ಟ್ಟನ್ನಲ್ಲವೆ ತನ್ನ ಮನೆಯೊಳಿಟ್ಟಂ ಕಿಚ್ಚಂ ॥ (VII–೩೭)

ಪರವಧುಮಂ ನಪುಂಸಕಿಯರಂ ಗುರುಭಾರ್ಯೆಯರಂ ಮುನೀಂದ್ರ, ಸೌಂ
ದರಿಯರನಂತ್ಯಜಾತಿಯವಳಂ ವ್ರತಮುಳ್ಳಳನಂಗಹೀನೆಯಂ ।
ತಿರಿವವಳಂ ಕುಲಕ್ಷಯೆಯನಾ ಕೊಡಗೂಸುಗಳಂ ವಿದಗ್ಧನಾ
ದರದೊಳೆ ಕೂಡಲುಂ ಬಯಸಿ ನೋಡಲುಮಾಗದು ಕೂರ್ತು ಬಂದೊಡಂ ॥
(IX–೨)

ಪಿರಿಯಕ್ಕರ

ತನ್ನತವಕಕ್ಕೆ ನೆರವಾತನತಿಷ್ಟನೊತ್ತಂಬದಿಂ ಕೂಡುವಾತಂ ಮೂರ್ಖಂ
ಮುನ್ನಮೆವಿಕ್ಕಿ ನೆರೆವಾತಂ ಕಾತರಂ ಮನಮನಱಿದೊಡಗೂಡುವಂ ಭಾವಕಂ ।
ಸನ್ನುತಂದ್ರವಂಬಡೆವಡಾತಂ ರಸಿಕಂ ರತೋತ್ಸಾಹದೊಳ್‌ರಂಜಿಪಾತಂ ರಂಜಕಂ
ಮುನ್ನರಾಗಂ ಪಡೆದು ಸಂಭೋಗದಲ್ಲಿ ತಣಿವಂ ಮಾಡುವಾತನೆ ಕಾಮದೇವಂ ॥
(X–೭೯)

## ೫. ಶ್ರೀಧರಾಚಾರ್ಯ (೧೦೪೯)

ಜಾತಕತಿಲಕವೆಂಬ ಜ್ಯೋತಿಷಗ್ರಂಥವನ್ನು ರಚಿಸಿದ ಶ್ರೀಧರಾಚಾರ್ಯನು ಜೈನನೆಂಬುದಾಗಿಯೂ ಬೆಳುವಲ ನಾಡಿಗೆ ತಿಲಕಪ್ರಾಯವಾದ ನಱಿಗುಂದವೆಂಬ

ಪ್ರದೇಶದವನೆಂಬುದಾಗಿಯೂ ಶಕವರ್ಷ ೯೭೦ರಲ್ಲಿ ಗ್ರಂಥರಚನೆಯಾಯಿತೆಂಬುದಾಗಿಯೂ ಆ ಗ್ರಂಥದಿಂದಲೇ ತಿಳಿದುಬರುತ್ತದೆ. ಈತನಿಗೆ 'ವಾಕ್ಶ್ರೀವರ', 'ಗದ್ಯಪದ್ಯವಿದ್ಯಾಧರ', 'ಬಂಧುಮಿತ್ರ', 'ಸಮ್ಯಕ್ತ್ವರತ್ನಾಕರ' ಇತ್ಯಾದಿ ಬಿರುದುಗಳಿವೆ. ಸಂದಿಗ್ಧತೆಯಿಲ್ಲದೆ ಲಲಿತವಾಗಿ ಶಾಸ್ತ್ರವಿಷಯವನ್ನು ಪ್ರತಿಪಾದಿಸುವ ಕವಿತಾಸಾಮರ್ಥ್ಯ ಶ್ರೀಧರನಿಗಿದ್ದಿತು :

ಬರೆಪಂ ಚಿತ್ರಿತ ಚಿತ್ರದಂತೆ ಮೃದುರೇಖಾಮಂಡನಾಡಂಬರ
ಸ್ಫುರಿತಂ ಭಾಜನೆ ಪನ್ನಗಧ್ವಜ ಮಹೀಭೃತ್ಸೇನೆವೋಲ್ ಕರ್ಣಸೌಂ ।
ದರಮುದ್ಯತ್ಕವಿತಾಗುಣಂ ಕಣಿಕವೋಲ್ ಭಾವಾದ್ಯಳಂಕಾರಬಂ
ಧುರಮೆಂಬುನ್ನತಿಯಂ ಜಗಕ್ಕೆ ನೆಗಳ್ದಿಂ ವಾಕ್ ಶ್ರೀಧರಂ ಶ್ರೀಧರಂ ॥ (೭)

ತನ್ನ ಕೃತಿಯನ್ನು ಜೋಯಿಸಗಬ್ಬವೆಂದು ತಿರಸ್ಕರಿಸಬಾರದು ಎಂದು ವಿನಯದಿಂದ ಹೇಳುತ್ತಾನೆ :

ಜೋಯಿಸಗಬ್ಬಮಿದೆನ್ನದೆ
ಚೀಯೆನ್ನದೆ ಸಾರಮೆನ್ನದನ್ನರುಮದಱಿಂ
ಜೀಯೆನೆ ತಜ್ಞರ್ ವಿಬುಧಾ
ದೇಯಮಿದೆನೆ ಪೇೞ್ದು ಮೆಱೆವುದಱೆವಂ ಮೆಱೆವಂ ॥ (೧೩)

ಮುನ್ನಾರುಂ ಜಾತಕಮಂ
ಕನ್ನಡದಿಂ ವ್ಯಕ್ತಮಾಗೆ ಪೇೞ್ದುನ್ನತರಿ ।
ಲ್ಲೆನ್ನಂ ಪೇೞ್ದು ಪರಿಲ್ಲು
ತ್ಪನ್ನಂ ಶ್ರೀಧರನೆ ಪೇೞ್ಗುಮೇದಾದರದಿಂ ॥

ಈ ಹೇಳಿಕೆ ಪ್ರಾಯಶಃ ಸರಿಯಾದುದು. ಕನ್ನಡದಲ್ಲಿ 'ಜಾತಕತಿಲಕ'ವೇ ಮೊದಲನೆಯ ಜ್ಯೋತಿಷಗ್ರಂಥವೆಂಬಂತೆ ತೋರುತ್ತದೆ.

ಬಹಳಮಟ್ಟಿಗೆ ವರಾಹಮಿಹಿರನ ಬೃಹಜ್ಜಾತಕವನ್ನನುಸರಿಸಿ ಈ ಗ್ರಂಥ ರಚನೆಯಾಗಿರಬೇಕು. ಇದರಲ್ಲಿ ೨೪ ಅಧಿಕಾರಗಳಿರುತ್ತವೆ. 'ಅದಿದೆನ್ನದೆ ಜಾತಕ ತಿಳಕದೊಳಱೆವುದು ಗಣಿತ ಘರ್ಣಮಂ' (೨೪-೪೦) ಎಂಬುದಾಗಿ ತನ್ನ ಗ್ರಂಥಪ್ರತಿಪಾದ್ಯ ವಿಷಯವನ್ನೂ ಸೂಚಿಸಿರುವನು.

ಗ್ರಂಥದಲ್ಲಿ ಹೇಳಲ್ಪಟ್ಟ ಪ್ರಸಿದ್ಧವಾದ ೨೪ ಅಧಿಕಾರಗಳು ಯಾವುವು ಎಂಬುದನ್ನು ಹೀಗೆ ಹೇಳಿರುವನು.

ಪಿರಿಯಕ್ಕರ

ತರದಿಂ ಸಂಜ್ಞೆ ಬಳಾಬಳಾವಧಾನಂ ಜನ್ಮತಿರ್ಯಗ್ಜನ್ಮರಿಷ್ಟಾರಿಷ್ಟ
ಹರಣಂ ಆಯುರ್ದಾಯಂ ದಶಾಂತರ್ದಶೆಯಷ್ಟಕ ವರ್ಗ ಕರ್ಮಾಜೀವನಂ ।
ಧರಣೀನಾಥನಾಭಸಂ ಚಂದ್ರದ್ವಿತ್ರಿಗ್ರಹಾದಿ ದೀಕ್ಷಾ ಯೋಗಂ ರಾಶಿಫಳೋ
ತ್ಕರಂ ವಿಲ್ಲಗ್ನಭಾವತ್ರ್ಯಂಶತಿಲಕ್ಷಣದೃಷ್ಟಿಫಳಾನಿಷ್ಟಂ ಸ್ತ್ರೀಜಾತಕಂ ॥

ಮನುಜರ ನಿರ್ಯಾಣ ಪ್ರಾ
ಪ್ತಿನಷ್ಟಜಾತಕಮೆನಿಪ್ಪ ಭೇದದಿನಖಿಳಾ ।
ವನಿಯೊಳ್ ನೆಗಟ್ದಿಪ್ಪ
ತ್ತನಾಲ್ಕುಮಧಿಕಾರನಿಂದೆ ಜಾತಕತಿಳಕಂ ॥

(XXIV–೩೪, ೩೫)

ಶಬ್ದಸೌಂದರ್ಯ ಪ್ರಸಾದಗುಣಗಳಿಂದ ಶ್ರೀಧರಾಚಾರ್ಯನು ಶಾಸ್ತ್ರವನ್ನು ಕಾವ್ಯದಂತೆ ಹೇಳಿದುದಕ್ಕೆ ಉದಾಹರಣೆಗಳು :

ಗ್ರಹಗಳ ಬಲಾಬಲ ವಿಚಾರ

ಶನಿಯಿಂದಂ ಮಹಿಜಾತನಾ ಮಹಿಜನಿಂದು ಸೌಮ್ಯನಾಸೋಮನಂ
ದನನಿಂದಂ ಗುರುವಾ ಸುರೇಂದ್ರಗುರುವಿಂದಾ ಶುಕ್ರನಾಶುಕ್ರನಿಂ ।
ವನಜಾತಾಹಿತನಾವನೇಜರಿಪುವಿಂ ಪಂಕೇಜಮಿತ್ರಂ ಬಳಾ
ಢ್ಯ ನೆನಿಕ್ಕುಂ ಕ್ರಮದಿಂದಮಾ ಗ್ರಹಬಲಂ ನೈಸರ್ಗಿಕಂ ನಾಮದಿಂ ॥ (II–೨)

ಪ್ರಸವಕಾಲವನ್ನು ನಿರ್ಣಯಿಸುವ ಸೂತ್ರ

ವಿದಿತಂ ಕಾಂತೆಗೆ ಪೊಟ್ಟೆ ತೀವಿದುದು ಪೇಟೆನ್ನಾವುದಕ್ಕುಂ ಪ್ರಸೂ
ತದಿನಂ ತಾನೆನೆ ಚಂದ್ರನಾವಗೃಹದೊಳ್ ತತ್ಕಾಲದೊಳ್ ನಿಂದನಾ ।
ಸದನದ್ವಾದಶಭಾಗಮಂತೆನಿತುಮಂ ಸಲ್ಗುಂ ಮಂತೆ ತತ್ಸಾಲ್ಯೆಗೇ
ಹದಿನಪ್ಪಲ್ ನಿಲೆ ಚಂದ್ರಮಂ ಪ್ರಸವಕಾಲಂ ಕಾಂತೆಗಂತಾ ದಿನಂ ॥

(III–೧೮)

ಚಂದ್ರಯೋಗಕರಣದಲ್ಲಿ ಅವಧಿಯೋಗವನ್ನು ಕುರಿತು —

ಉಡುಪಂ ನೀದೆವೆಡೆಯಿಂದಮೋಟಿಱಿ‌ಡೆಯೊಳ್ ಸೌಮ್ಯಗ್ರಹಂ ಕೂಡಿ ನಿಂ
ದೊಡೆ ಸೇನಾಪತಿಯಕ್ಕುಮಾ ಹಿಮಗುವಿಂದಾಱೀಱಱೊಳ್ ಸೌಮ್ಯರಿ।
ರ್ದೊಡರ್ವ ಪೆರ್ಗಡೆಯಕ್ಕು ಮಾ ಶಶಿಯಿನಾಱೀಱೆಂಟಱೊಳ್ ಸೌಮ್ಯರಿ
ರ್ದೊಡೆ ಧಾತ್ರೀಪತಿಯಕ್ಕುಮಿಂತವಧಿಯೋಗಂ ಪದ್ಮವಿದ್ಯಾಧರಾ ॥

(XIV–೯)

೨೩ನೆಯ ಪ್ರಕರಣದಲ್ಲಿ ಗ್ರಹಫಲಾನುಸಾರವಾಗಿ ಮಾನವನು ಯಾವ ಯಾವ ವ್ಯಾಧಿಗಳಿಂದ ಮರಣಹೊಂದುವನೆಂಬುದನ್ನು ಹೇಳಿದೆ :

ಜಳಜಾತಪ್ರಿಯನೆಂಟಱೊಳ್ ನಿಲೆ ಮನುಷ್ಯಂ ಕಿಚ್ಚಿನಿಂ ಚಂದ್ರಮಂ
ನಿಲೆ ನೀರಿಂ ಮಹಿಜಾತನಲ್ಲಿ ನಿಲೆ ಶಸ್ತ್ರಾಘಾತದಿಂ ಸೋಮಜಂ ।
ನಿಲೆ ಘೋರಜ್ವರದಿಂದ ಮಂತ್ರಿ ನಿಲೆ ನಾನಾರೋಗದಿಂ ಭಾರ್ಗವಂ
ನಿಲೆ ರಕ್ತಾಮಯದಿಂದೆ ಸೌರಿ ನಿಲೆ ಕ್ಷುದ್ರವ್ಯಾಧಿಯಿಂ ಪೊಂದುಗುಂ ॥

(XXIII–೨)

## ೬. ರಾಜಾದಿತ್ಯ (೧೧೨೦)

"ಕೂಂಡಿ ಮಂಡಲಕ್ಕನುಪಮರತ್ನಮಂಡಲಮೆನಿಪ್ಪ ಪೂವಿನ ಬಾಗೆ"ಯಲ್ಲಿ ಜನಿಸಿದ ರಾಜಾದಿತ್ಯನು ಕನ್ನಡದಲ್ಲಿ ವ್ಯವಹಾರಗಣಿತ ಕ್ಷೇತ್ರಗಣಿತ ಮೊದಲಾದ ಗಣಿತಗ್ರಂಥಗಳನ್ನು ರಚಿಸಿ ೧೨ನೆಯ ಶತಮಾನದ ಕರ್ನಾಟಕದಲ್ಲಿನ ಗಣಿತ ಜ್ಞಾನದ ಸ್ವರೂಪವನ್ನು ತಿಳಿಯಪಡಿಸುತ್ತಾನೆ. ಎಲ್ಲ ಶಾಸ್ತ್ರಗಳ ಬೆನ್ನೆಲುಬು ಎಂಬುದಾಗಿ ಕರೆಯಲ್ಪಡುವ ಗಣಿತವನ್ನು ಕನ್ನಡಿಗರು ಕಡೆಗಣಿಸಿರಲಿಲ್ಲವೆಂಬುದು ಅಭಿಮಾನದ ವಿಷಯ.

ಸಾಮಾನ್ಯಜ್ಞಾನವಲ್ಲದೆ, 'ಶ್ರೇಣಿಸೂತ್ರ'[1] ಇತ್ಯಾದಿಯನ್ನು ಅವರು ತಿಳಿದಿದ್ದರೆಂಬುದನ್ನು ಗಮನಿಸಬಹುದು. ಅದಕ್ಕೊಂದು ಉದಾಹರಣೆ :

---

[1] Formula : summation of the first n natural numbers. $S = \frac{n(n+1)}{2}$ ಇತ್ಯಾದಿ ಅವರಿಗೆ ತಿಳಿದಿತ್ತು.

ಕರಿ ನೂಱೆಂಟುಮನೆಯ್ಗ ಕಾವ ದಿವಸಕ್ಕೋರೊಂದು ಗದ್ಯಾಣಮಂ
ಸ್ಥಿರಮೀವೆಂ ನಿನಗೆಂದೊಡೊಂದು ದಿವಸಕ್ಕೊಂದಾನೆಯಂ ಮಾಱಲಾ ।
ಕರಿಯಾರೋಹಕರಿರ್ಪತಯ್ದುದಿವಸಂ ಕಾದೊಲ್ಲೆವೆಂದಾಗಳಿ
ರ್ಬರ ಸಂವಾದದ ಲೆಕ್ಕಮಂ ತಿಳಿಯೆ ಪೇೞ್ ನಿರ್ವ್ಯಾಜದಿಂ ಭಾಸ್ಕರಾ ॥

ಕರಿ ೧೦೮, ದಿನ ೧ಕ್ಕೆ ಕೂಲಿ ಗದ್ಯಾಣ ೧, ದಿನ ೧, ಮಾಱಿದಾನೆ ೧ ಈ ಲೆಕ್ಕದಲ್ಲಿ ದಿನ ೨೫ಕ್ಕೆ ಲಬ್ಧ ಗದ್ಯಾಣ ೨೨-೨ ವಿ. ೪.

ಟೀಕು-ಮೊದಲ ಪ್ರಮಾಣಿನ ೧೦೮ನ್ನೂ ಗದ್ಯಾಣ ೧ನ್ನೂ ಕೂಡಲು ೧೦೯ ದಿನ ೨೫ಱಿಂ ಗುಣಿಸಲು ೨೭೨೫ ಇದಂ ಪ್ರತಿಯನ್ನಿಟ್ಟು ಆ ಕಡೆಯ ದಿನ ೨೫ನು ವರ್ಗಂಗೊಂಡು ಅದಱೊಳಗೆ ಆ ದಿನ ೨೫ನು ಕೂಡಿ ಅರ್ಧಿಸಲು ೩೨೫ ಇದಂ ಮುನ್ನ ಪ್ರತಿಯಿದ್ದ ೨೭೨೫ಱಲ್ಲಿ ಕಳೆಯಲು ೨೪೦೦ ಇದಂ ಆ ದಂತಿ ೧೦೮ಱಿಂ ಭಾಗಿಸಲು ತಪ್ಪದು—ಇತ್ಯಾದಿ.

## ೭. ಭಟ್ಟಕವಿ (ಸು. ೧೩೦೦)

ಸು. ೧೩೦೦ರಲ್ಲಿದ್ದಿರಬಹುದಾದ ಈ ಜೈನ ವಿದ್ವಾಂಸನು ೮೧೬ ವಿವಿಧ ಛಂದೋಬಂಧಗಳನ್ನೊಳಗೊಂಡ ೧೨ ಅಧ್ಯಾಯಗಳಲ್ಲಿ 'ಭಟ್ಟಮತ'ವೆಂಬ ಜ್ಯೋತಿಷಗ್ರಂಥವನ್ನು ರಚಿಸಿರುವನು. ಈಗ ಮದ್ರಾಸು ಓರಿಯಂಟಲ್ ಲೈಬ್ರೆರಿಯವರು ಅಚ್ಚುಹಾಕಿಸಿರುವ ಪ್ರತಿಯನ್ನು ನೋಡಿದರೆ ಈ ಗ್ರಂಥವು ಸಮಗ್ರವಾಗಿಯೂ ಶುದ್ಧ ಪಾಠವುಳ್ಳುದಾಗಿಯೂ ದೊರೆತಿಲ್ಲವೆಂದೂ ಹೇಳಬಹುದು.

ಕವಿಯು 'ಭಟ್ಟವೆಡಂಗಂ' ಮೊದಲಾದ ಬಿರುದಿನ ಹೆಸರುಗಳನ್ನು ಮಾತ್ರ ಹೇಳಿಕೊಂಡಿರುವುದರಿಂದ ಆತನ ನಿಜವಾದ ಹೆಸರೇನೆಂಬುದು ತಿಳಿಯುವುದಿಲ್ಲ. 'ಭಟ್ಟಮತ' ಅಥವಾ 'ಭಟ್ಟಶಾಸ್ತ್ರ' ಎಂಬೀ ಗ್ರಂಥದಲ್ಲಿ ಜ್ಯೋತಿಷಶಾಸ್ತ್ರದ ಒಂದು ಪುಟ್ಟ ಅಂಶವಾದ 'ಮಱೆಯ ಕುಱುಹು', 'ಮೇಘಮಾಲೆ', 'ಮೇಘಾಡಂಬರ' ಇದನ್ನು ಕುರಿತು ಬಹಳ ವಿವರವಾಗಿ ಹೇಳಿರುವನು. ಮಳೆ ಬೀಳುವ ವಿಷಯವಾಗಿ, ಬೆಳೆಗಳ ವಿಷಯವಾಗಿ ಒಟ್ಟಿನಲ್ಲಿ ಕೃಷಿಯವರಿಗೆ ಉಪಯುಕ್ತ

ವಾದ ಅನೇಕ ಜ್ಯೋತಿಷಶಾಸ್ತ್ರಾಧಾರದ ಮತ್ತು ಲೋಕಾನುಭವದ ಹೇಳಿಕೆಗಳು ಇಲ್ಲಿ ಬಂದುದುಂಟು.

ತನ್ನ ಜನಾನುರಾಗವನ್ನು ಹೀಗೆ ಹೇಳಿಕೊಂಡಿದ್ದಾನೆ :

ಜನಕನುರಾಗದೆ ನೆಗಟ್ದಿಂ
ಜನನುತಗುಣಿ ವಿತತಕೀರ್ತಿ ರಮಣೀ ರಮಣಂ ।
ಮನಸಿಜಸನ್ನಿಭನೆನಿಸಿದ
ವಿನಯಗುಣೋತ್ತುಂಗನೆಸೆವ ಬಿಟ್ಟವೆಡಂಗಂ ॥ (I–೨೩)

ತನ್ನ 'ಮೇಘಾಡಂಬರ'ವನ್ನು ಅತಿಶಯೋಕ್ತಿಯಿಂದ ಮಗಳಾದ ಚಂದ ಲೇಖೆಗೆ ತಿಳಿಸಿದನಂತೆ :

ಎಂಬ ಪೆಸರೆಸೆಯೆ ನೆಗಟ್ದಿ ದ
ಯಾಂಬುಧಿ ನಿಜಸುತೆಗೆ ಮೇಘಾ ।
ಡಂಬರಮನತಿಶಯೋಕ್ತಿಯಿ
ನಿಂದಾಗಿರೆ ತಿಳಿಯೆ ಪೇಟ್ದಿಪಂ ಕನ್ನಡದಿಂ ॥ (I–೨೫)

ಇದರಿಂದ ತನ್ನ ಕೃತಿಗೆ 'ಮೇಘಾಡಂಬರಂ' ಎಂಬ ಹೆಸರು ಇದ್ದಂತೆಯೂ ಯಾವುದೋ ಇತರ ಮೂಲವನ್ನಾಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಹೇಳಿದಂತೆಯೂ ಗೊತ್ತಾಗುತ್ತದೆ. ಕೆಳಗಿನ ಪದ್ಯದಲ್ಲಿ ರತ್ನೋಜ್ವಲಸಂಹಿತೆ, ಧನಕೀರ್ತಿಸಂಹಿತೆ, ವರಾಹಮಿಹಿರಗಾರ್ಗ್ಯಾಚಾರ್ಯರ ಸಂಹಿತೆ—ಇವುಗಳ ಆಧಾರದ ಮೇಲೆ 'ಮೇಘಮಾಲೆ' ರೂಪುಗೊಂಡಿತೆನ್ನಬಹುದು.

ಅತಿಶಯ ರತ್ನೋಜ್ವಲ ಸಂ
ಹಿತೆಯೊಳ್ ಧನಕೀರ್ತಿಯೊಳ್ ವರಾಹಮಿಹಿರ ।
ಸ್ಮೃತಿಯೊಳ್ ಗಾರ್ಗ್ಯಾಚಾರ್ಯರ
ಮತದೊಳ್ ಸಲೆ ಮೇಘಮಾಲೆಯನುನಯದಿಂದಂ ॥ (I–೩೪)

ಎಸೆವ ಮಟಿಗಾಲಮಂ ಜೋ
ಯಿಸ ಚಕ್ರಿಯೊಳುದಿತ ಕೀರ್ತಿ ನಾರಾಯಣದೊಳ್ ।
ಮಿಸುಪ ಶಕುನಂಗಳೊಳ್ ಭಾ
ವಿಸಿ ಪೇಟ್ದಂ ಮಟಿಯ ಕುಱುಪನೊಳ್ಪಿನ ಬಿಟ್ಟಂ ॥ (I-೩೫)

ಗ್ರಂಥದಲ್ಲಿ ಪ್ರತಿಪಾದ್ಯ ವಿಷಯ : ಮುಖ್ಯಾಂಶಗಳು—

ಸ್ಥಾವರ ಜಂಗಮಗಳಿಗೆ ಮಳೆಯ ಆವಶ್ಯಕತೆ ; ಮಳೆಯ ಉತ್ಪತ್ತಿ ; ಪರಿವೇಷಾದಿ ದಶಧಾತುಗಳಿಂದ ಮಳೆಯ ಉತ್ಪತ್ತಿಯನ್ನು ತಿಳಿಯುವುದು ; ಮಳೆಯ ಪ್ರಶ್ನೆ ಕೇಳುವುದು ; ದೂತಲಕ್ಷಣ (I. ೧–೪೬) ; ವಾಯುಗುಣ ಮೃಗ ಪಕ್ಷಿ ಮೊದಲಾದುವುಗಳ ಆಕಸ್ಮಿಕ ಶಕುನಗಳಿಂದ ಮಳೆಯ ಕುರುಹನ್ನು ಅರಿಯುವುದು (II. ೧-೨) ; ಪಿಂಗಳಿ, ಪೋದಗೆ, ಶುನಕ ಇವುಗಳ ಶಕುನದ ವಿಚಾರ (III. ೧–೫) ; ಸಸ್ಯೋತ್ಪತ್ತಿ ನಿಮಿತ್ತ ವಿವರಗಳು (IV. ೧–೨೬) ; ಭೌಮೋತ್ಪಾತ, ಅಂತರಿಕ್ಷೋತ್ಪಾತ, ದಿವ್ಯೋತ್ಪಾತ ಇತ್ಯಾದಿ ವಿವರ (V. ೧–೨೪) ; ಪೃಷ್ಟ್ಯರ್ಘಂಗಳ್ ಎಂಬುದರಲ್ಲಿ ಪರಿವೇಷ, ಮಿಂಚು, ಸೂರ್ಯ ವಿಮಾನ ಇತ್ಯಾದಿಯ ಲಕ್ಷಣಗಳೂ ವಿವಿಧ ಫಲಗಳೂ (VI. ೧–೬೧) ; ಜ್ಯೌತಿಷಂ ಎಂಬ ಏಳನೆಯ ಅಧ್ಯಾಯದಲ್ಲಿ ಸಂವತ್ಸರ ಫಲ, ಗ್ರಹಗಳ ಶತ್ರುತ್ವ ಮಿತ್ರುತ್ವ, ಗ್ರಹಯುದ್ಧಫಲ, ಗ್ರಹೋದಯಫಲ, ಗ್ರಹಸ್ವರೂಪ ಫಲ, ಗ್ರಹವೇಧಚಾರಫಲ, ಬುಧೋದಯಾಸ್ತ್ರಫಲ, ಶುಕ್ರ ನಾಱುವೀಥಿ ಇತ್ಯಾದಿ ಅಂಶಗಳೂ ಉಲ್ಲೇಖಿತ ವಾಗಿವೆ (VII. ೧–೧೫೩) ; ಮುಗಿಲ್ಗಳ ನಾಮಂ ಎಂಬಲ್ಲಿ ಸುಮಾರು ಹನ್ನೊಂದು ವಿಷಯಗಳನ್ನು ಹೇಳಿದೆ ; ಆಯಾ ತಿಂಗಳುಗಳ ವೃಷ್ಟಿರೂಪವನ್ನು ಹೇಳಿದೆ (VIII. ೧–೨೦೪) ; ಒಂಬತ್ತನೆಯ ಬೀಜಾವಾಪ ಅಧ್ಯಾಯವು ಕೃಷಿಕರಿಗೆ ಬಹಳ ಉಪಯುಕ್ತ ಭಾಗ (IX. ೧–೬೪) ; ಹತ್ತನೆಯ ಅಧ್ಯಾಯ ದಲ್ಲಿ ಗ್ರಹಣಫಲ ಹೇಳಿದೆ (X. ೧–೫) ; ಹನ್ನೊಂದನೆಯ ಅಧ್ಯಾಯದಲ್ಲಿ ನೀರಿನ ವಿಚಾರವಾಗಿ ಅನೇಕ ವಿಷಯಗಳನ್ನು ಕೊಟ್ಟಿದೆ (XI. ೧–೬೮) ; ಕೊನೆಯ ಅಧ್ಯಾಯದಲ್ಲಿ ನಕ್ಷತ್ರಗ್ರಹಸ್ವರೂಪವನ್ನು ವಿವರಿಸಿದೆ (XII. ೧–೭೭).

## ಗ್ರಂಥದಿಂದ ಉದಾಹರಣೆಗಳು

ಅಂತರಿಕ್ಷದಲ್ಲಿನ ಉತ್ಪಾತಗಳು, ಅವುಗಳ ಸೂಚನೆ :

ಕರಮೆ ಪಿರಿದಾಲಿಕಲ್ ಮೇಣ್
ಧರೆಯೊಳ್ ಬಿೞ್ವೊಡೆ ಸಿಡಿಲ್ಗಳೆಱಗುವೊಡಂತಾ ।
ಸುರವಾಯು ಬೀಸುವೊಡೆ ನೆ
ತ್ತರ ವರ್ಣದ ಪನಿಗಳಾಗೆ ದುರ್ಭಿಕ್ಷಕರಂ ॥ (V–೧೮)

ದಿನಕರನಂ ಶಶಿಯಂ ಪ
ಚ್ಚನೆವಣ್ಣದೆ ಬಳಸಿನಿಂದ ಪರಿವೇಷದೆ ನೆ ।
ಟ್ಟನೆ ಮಟಿಕೊಳ್ಗುಂ ತೊ
ಟ್ಟನೆ ಭಯಮಕ್ಕು ಮುಱಿದ ಬಣ್ಣದೊಳ್ ನೆಗಟ್ಟಿಂದಂ ॥
(V–೧೨)

ಮಂಗಳನುದಯಫಲ

ಅರುಣತೆವೆತ್ತು ಕಿಂಶುಕದ ಪೂವಿನ ಬಣ್ಣಮೆ ಬಣ್ಣ ಮಾಗೆಯುಂ
ಕರಗುವ ಸುಲ್ವಿನಾಕೃತಿಯೊಳಾಗಿರೆಯುಜ್ವಳಲಕ್ಷನಾಗೆಯುಂ ।
ನಿರತಿಶಯನಾಂಗಿಯುಮಿಳಾತ್ಮಜನನುದ್ಯತನಾದೊಡುತ್ತರೋ
ತ್ತರಮಭಿವೃದ್ಧಿಯಕ್ಕುಮವನೀತಳಕೆಲ್ಲಿಯುನೊಂದೆ ಮಾಟ್ಕಿಯಿಂ ॥
(VII–೭೬)

ಆಷಾಢ ಶುದ್ಧ ನವಮಿಯ ಮಳೆ

ಆಸಡಿಯ ಶುದ್ಧ ನವಮಿಯೊ
ಳಾಸಾಕಲಿ ಸ್ವಾತಿಕೊಡೆ ಮಟಿಕೊಳೆ ಬೆಳಗುಂ ।
ವಾಸವದಹನನೊಳನಿಲಂ
ಬೀಸೆ ಮುಗಿಲ್ ದಸಮಿಯಂದೆ ಕಱಿದೊಡೆ ಕಱಿಗುಂ ॥
(VIII–೧೪೫)

ಬಿತ್ತುವ ನಕ್ಷತ್ರಗಳು

ಭರಣಿ ಮಘೆ ಪುಷ್ಯ ರೋಹಿಣಿ
ನಿರುತಿ ಪುನರ್ವಸುವಿನಾರ್ದ್ರೆಯೊಳ್ ಕಲಿವೆಗಳಂ ।
ದೊರೆಕೊಳೆ ಶ್ರವಣದೆ ಕಿಱುನಿಲು
ಪಿರಿದಾಗಿಯೆ ಬೆಳೆಗುಮೆಂದನರ್ಹದ್ದಾಸಂ ॥ (IX–೪೫)

ಭೂಮಿಯೊಳಗಿನ ನೀರಧಾರೆಯನ್ನು ಮನುಷ್ಯಶರೀರದೊಳಗಿನ ರಕ್ತ ಸಂಚಾರವನ್ನರಿಯುವಂತೆ ಅರಿಯುವವರುಂಟು :

ನರನ ಶರೀರದೊಳೊಂದಿದ
ಸೆರೆಯಱಿವವರಿರ್ದು ನೋಡಿ ಬಿಟ್ಟೊಡೆ ರಕ್ತಂ ।

ಪರಿವಂತೆ ಮಹೀವಳಯದ
ಸೆರೆಯಜಿದಗುಬ್ಬಿಂತೆ ನೀರಧಾರೆಗಳಕ್ಕುಂ ॥ (XI–೨)

ನೀರನ್ನು ಕಂಡುಹಿಡಿಯುವುದಕ್ಕೆ ಕೊಟ್ಟ ಅನೇಕ ಸೂತ್ರಗಳಲ್ಲೊಂದು :

ಅತ್ತಿಯ ಪಡುವಲ್ ಮೂಗ
ಯ್ಯತ್ತಲ್ ನೀನಗುಟಿಸಿರದೆ ಪುರುಷದ ನೀರುಂ ।
ಮತ್ತೊಂದು ಪುರುಷದೊಳು ಭುಜ
ಗೋತ್ತಮನಂತಪ್ಪ ಕರಿಯ ಕಲ್ ಪಡುವ ಜಲಂ ॥ (XI–೯)

ಭೂಮಿಯ ನೀರನ್ನು ಶುದ್ಧವಾಗಿಟ್ಟುಕೊಳ್ಳುವುವಕ್ಕೆ ಕೆಲವು ಸೂತ್ರಗಳನ್ನು ಕೊಟ್ಟು (XI. ೬೧), 'ಭಾವಿಯ ನೀರನ್ನು ಸವಿಮಾಡುವ' ಸೂತ್ರ ಹೇಳಿರುವನು. ಇದು ಗಡಸು ನೀರನ್ನು (Hard Water) ಮೆದು ನೀರು (Soft Water) ಮಾಡುವ ಇಂದಿನ ವಿಜ್ಞಾನ ಸೂತ್ರದ ಮುನ್ಸೂಚಿಯಲ್ಲವೆ ?

ನೆಲ್ಲಿಯ ಸೆಟ್ಟುಬಾಳಮುಸಿತಾಂಜನಮೊಳ್ಪಿಹ ಮುಸ್ತೆಯಿಪ್ಪ ಕೀ
ಡಿಲ್ಲದ ಚಿಲ್ಲಗೊಟ್ಟೆ ಪೋಸಪೀರೆಯ ಬಿತ್ತಿನೊಳಾದ ಬೂದಿಯಂ ।
ನಿಲ್ಲದೆ ಬಾವಿಯೊಳ್ ಕಲಸಲುಪ್ಪಿನಕೈಪೆಯ ಕಾರದೂಜಿಲೊಳ್
ಪೊಲ್ಲವಿಮೆಂಬ ಬಾವಿಗಳ ನೀರಮೃತೋಪಮಮೆಂಗೆ ಜಟ್ಟುಗಾ ॥ (XI-೬೩)

೧೩ನೆಯ ಶತಮಾನದಲ್ಲಿ ವಿಜ್ಞಾನಶಾಸ್ತ್ರವು ಅಷ್ಟು ಮುಂಬರಿದಿರಲಿಲ್ಲ. ಆದರೂ ಗೊತ್ತಿದ್ದುದನ್ನು ಸಂದಿಗ್ಧತೆಯಿಲ್ಲದ ಭಾಷೆಯಲ್ಲಿ ಕನ್ನಡ ಜನ ನಿರೂಪಿಸಿದ್ದರೆಂಬುದನ್ನು ಜಟ್ಟಮತವು ಸಾರುವುದು.

## ೮. ಮಂಗರಾಜ (೧೩೬೦)

ವಿಜಯನಗರದ ಮೊದಲನೆಯ ಹರಿಹರನ (೧೩೩೬–೧೩೫೭) ಕಾಲದಲ್ಲಿ ಈ ಕವಿಯು ಜೀವಿಸಿದ್ದನೆಂಬುದಕ್ಕೆ ಗ್ರಂಥದ ಉದ್ದಕ್ಕೂ ಸಾಕ್ಷ್ಯಗಳುಂಟು. ಇವನು ದೀವಳಿಗೆ ನಾಡಿನ ಮುಗುಳಿಪುರದರಸನಾದ ಮಂಗವಿಭುವಿನ ಮಗನು. 'ಖಗೇಂದ್ರಮಣಿದರ್ಪಣ'ವೆಂಬ ವಿಷವೈದ್ಯಗ್ರಂಥವನ್ನು ಬರೆದನು. ಇವನ

ಅನಂತರದಲ್ಲಿ 'ಮಂಗರಾಜ' ಎಂಬ ಹೆಸರಿನ ಇಬ್ಬರು ಕವಿಗಳು ಇದ್ದುದರಿಂದ ಇವನನ್ನು ಮೊದಲನೆಯ ಮಂಗರಾಜನೆಂಬುದಾಗಿ ಕರೆಯುತ್ತಾರೆ.

ಖಗೇಂದ್ರಮಣಿದರ್ಪಣದಲ್ಲಿ ೧೬ ಅಧಿಕಾರಗಳುಂಟು. ೧೫೦೦ ವೃತ್ತಗಳು ವಿವಿಧ ಛಂದಸ್ಸುಗಳಲ್ಲಿವೆ ; ಆದರೆ ಶಾಸ್ತ್ರಪ್ರತಿಪಾದನೆಗೆ ಅನುಕೂಲವಾದ ಕಂದವೃತ್ತಗಳೇ (೧೧೯೩) ಹೆಚ್ಚಾಗಿರುತ್ತವೆ. ಇದು ಹಳಗನ್ನಡದಲ್ಲಿ ರಚಿತವಾಗಿದ್ದರೂ ನಡುಗನ್ನಡದ ಪ್ರಭಾವ ಅಲ್ಲಲ್ಲಿ ಎದ್ದು ತೋರುತ್ತದೆ. 'ಅಹುದೆ', 'ಜನಕಹ', 'ಹೊನ್ನಗಣೆ' ಇತ್ಯಾದಿ ಹ-ಕಾರಕ್ಕೆ ತಿರುಗಿದೆಡೆಗಳನ್ನೂ 'ಸೊಕ್ಕು' (ಸೊರ್ಕು), ಕಚ್ಚು (ಕರ್ಚು), ಅಳುಕಿ (ಅಳ್ಕಿ), ಕೊಳುಗುಂ (ಕೊಳ್ಗುಂ) ಇತ್ಯಾದಿ ನಡುಗನ್ನಡರೂಪಗಳನ್ನೂ ಕಾಣಬಹುದು.

ಸುಲಭವೂ ಸ್ಪಷ್ಟವೂ ಆದ ಭಾಷೆಯಲ್ಲಿ ಈ ಗ್ರಂಥರಚನೆಯಾಗಿದೆ. ಸಂಸ್ಕೃತ ಪ್ರಯೋಗದ ಜಟಿಲತೆ ಇರುವುದಿಲ್ಲ. ಇದು ಶಾಸ್ತ್ರಗ್ರಂಥವಾಗಿರುವುದರಿಂದ, ಕವಿಗೆ ತನ್ನ ಕವಿತಾಚಾತುರ್ಯವನ್ನು ಪ್ರದರ್ಶಿಸಲು ಸಂದರ್ಭ ದೊರಕಲಿಲ್ಲವಾದರೂ ಪೀಠಿಕಾಸಂಧಿಯಲ್ಲಿ ತನ್ನೂರಾದ ಮುಗುಳಿಪುರವನ್ನು ವರ್ಣಿಸುವಲ್ಲಿ ಆತನ ಕವಿತೆ ಸುಂದರವಾಗಿ ಬಂದಿರುತ್ತದೆ ಎಂಬುದನ್ನು ಗಮನಿಸಬಹುದು :

ವರಪದ್ಮಾಕರದಿಂದೆ ಪುಷ್ಪಿತಕುಜವ್ರಾತಂಗಳಿಂ ಷಟ್ಪದ
ಸ್ವರದಿಂದೊಪ್ಪುವ ಗಂಧಶಾಳಿವನದಿಂದುತ್ತುಂಗ ಚೈತ್ಯಾಲಯೋ ।
ತ್ಕರದಿಂ ಹರ್ಮ್ಯಗೃಹಾಳಿಯಿಂ ಸುಜನರಿಂ ಸಂಪತ್ತಿಯಿಂದಾವಗಂ
ನಿರುತಂ ಶ್ರೀಮುಗುಳೀಪುರಂ ಸೊಗಯಿಕುಂ ವಿಶ್ವಂಭರಾನೂಪುರಂ ॥

ಬಾಲಕರೊಳ್ ನಿರ್ಲಜ್ಜತೆ
ಮಾಲೆಯೊಳಂ ವರ್ಣಸಂಕರಂ ಕುಟಿಲತ್ವಂ ।
ಬಾಲೆಯರ ಕುರುಳೊಳಲ್ಲದೆ
ಪೋಲಿಪೊಡಾ ಜನದ ಮನದೊಳಿಲ್ಲಮಿವೆಂದುಂ ॥ (I–೩೭)

ತನ್ನ ಕೃತಿಗೆ ಕಾರಣವನ್ನು ಹೀಗೆ ಹೇಳುತ್ತಾನೆ :

ಕನ್ನಡದಿಂ ಸಮಸ್ತಜನಗೋಚರಮಪ್ಪವೊಲೊಲ್ದು ಪೇಳ್ವುದೈ
ನೀನ್ನಮಗೆಂದು ಭವ್ಯರೊರೆದಟ್ಟೆಯೊಳಂ ಬೆಸಗೊಳ್ವುದುಂ ಕರಂ ।

ನನ್ನಿಯೊಳಂತವರ್ಗೆ ತಿಳಿಪಲ್ ಮನದೆಂದೆನಿಪಂ ವಿಳಾಸ ಸಂ
ಪನ್ನತೆವೆತ್ತುದೀ ಕೃತಿಯುದೆಂತೆನೆ ಮತ್ಸುಕೃತಪ್ರಭಾವದಿಂ ॥ (I–೫೭)

ನೀರಿನೊಳಗೆ ಕಮಲದ ಕಂಪು ಉದ್ಭವಿಸಿದ್ದರೂ ಅದನ್ನು ಪಸರಿಸಲು ಹೇಗೆ ಮಂದಮಾರುತನು ಆವಶ್ಯಕವೊ ಹಾಗೆಯೇ ತನ್ನ ಕೃತಿಯುಶಸ್ಸನ್ನು ಭೂಮಂಡಲದಲ್ಲಿ ಪಸರಿಸಲು ಸಂತರಾದ ನೀವುಗಳು ಬೇಕು ಎಂಬ ವಿನಯದ ಮಾತನ್ನು ಹೇಳುತ್ತಾನೆ.

ಉದಕಂ ಪಡೆದೊಡಮಿಾಂ ಪ
ದ್ಮದ ಗಂಧಂ ಗಂಧವಾಹನಿಂ ಪರೆವಪ್ಪೊಲಿಂ ।
ತೊದವಿದ ಮದೀಯ ಕವಿತಾ
ಭ್ಯುದಯಯಶಂ ಪರೆಗುಮಿಳೆಗೆ ಸಂತರೆ ನಿಮ್ಮಿಂ ॥ (I–೫೯)

ಅಲ್ಲದೆ, ಬರಿಯ ಶೃಂಗಾರವನ್ನೇ ಕೊಂಡಾಡಿ ಬೆಂಡಾಗದೆ, ಸರ್ವಜನೋಪಕಾರವಾಗಿರುವಂಥ 'ಮಂತ್ರೌಷಧವ್ರಾತ'ವನ್ನು ಹೇಳುವ ಮಾನವನೆ ದೇವನೆಂಬುದಾಗಿ ಸಾರುತ್ತಾನೆ :

ಮರನಂ ಗಾಳಿಯ ಧೂಳಿಯಂ ರಜನಿಯುಂ ನೀರಾಟಮಂ ಬೇಟಮುಂ
ಸುರೆಯುಂ ಸೂಟಿಯರಂ ವಿಟಾಟವಿಕರುಂ ಕೊಂಡಾಡಿ ಬೆಂಡಾಗದೇ ।
ಧರೆಯೊಳ್ ಸರ್ವಜನೋಪಕಾರಮೆನಲೀ ಮಂತ್ರೌಷಧವ್ರಾತಮಂ
ನಿರುತಂ ಭಾವಿಸಿ ಪೇಳ್ದ ಮಾನವನೆ ತಾಂ ದೇವಂ ಧರಾಚಕ್ರದೊಳ್ ॥
(I–೬೩)

ಅಶೇಷಬುಧಜನೋಪಕಾರಾರ್ಥವಾಗಿ ಸ್ಥಾವರ ಜಂಗಮ ಕೃತ್ರಿಮಗಳೆಂಬ ಮೂರು ವಿಭಾಗಗಳಾಗಿರುವ ನಾನಾ ವಿಷಗಳಿಗೆ ಹರಣೋಪಾಯಗಳನ್ನು ವಿವರಿಸುವ ಗ್ರಂಥವನ್ನು ಈತನು ರಚಿಸಿರುವಂತೆ ತಿಳಿಯಬಹುದು.

ಕೇಶಿರಾಜನು ವ್ಯಾಕರಣದಿಂದ ಮೋಕ್ಷವನ್ನು ಸಾಧಿಸಬಹುದೆಂದರೆ, ಮಂಗರಸನು ಭೇಷಜದಿಂದ ಮೋಕ್ಷವನ್ನು ಸಾಧಿಸಬಹುದೆನ್ನುವನು. ಚತುರ್ವಿಧ ಪುರುಷಾರ್ಥಗಳ ದೃಷ್ಟಿಯಿಲ್ಲದೆ ಕಾರ್ಯವಿಲ್ಲವೆಂಬ ಧ್ಯೇಯ :

ನರರ್ಗರುಜತೆ ಭೇಷಜದಿಂ
ದರುಜತೆಯಿಂ ದೇಹ ದೇಹದಿಂದಂ ಜ್ಞಾನಂ ।
ಪರಮಜ್ಞಾನದೆ ಮೋಕ್ಷಂ
ದೊರೆಕೊಳ್ಗುಮದೆಂದು ಪೇಳ್ದಪೆಂ ಭೇಷಜಮಂ ॥ (I–೬೫)

ವಿಷವನ್ನು (೧) ಸ್ಥಾವರ (೨) ಜಂಗಮ (೩) ಕೃತ್ರಿಮ ಎಂಬುದಾಗಿ ಮೂರು ವರ್ಗಗಳಲ್ಲಿ ವಿಭಜಿಸಿರುತ್ತದೆ. (೧) ಮರಗಿಡ, ಧಾನ್ಯ, ಬೀಜ, ಕಲ್ಲು ಇತ್ಯಾದಿ ಸ್ಥಾವರಗಳ ಕಾರಣದಿಂದುಂಟಾಗುವ ವಿಷಪ್ರಕಾರಕ್ಕೆ 'ಸ್ಥಾವರ'; (೨) ಹಾವು ಚೇಳು (ಮನುಷ್ಯನ ಉಗುರು ಕೂಡ) ಇತ್ಯಾದಿ ಜಂಗಮಗಳಿಂದುಂಟಾದ ವಿಷಪ್ರಕಾರಕ್ಕೆ 'ಜಂಗಮ'; (೩) ಕೈಮುಸಕದ ಮೂಲಕ ಉಂಟಾದ ವಿಷಪ್ರಕಾರಕ್ಕೆ ಕೃತ್ರಿಮ ಎಂಬ ವಿವರಣೆ ಇರುತ್ತದೆ. ಒಟ್ಟಿನಲ್ಲಿ ೧೬ ಅಧಿಕಾರಗಳಾಗಿ ಗ್ರಂಥವು ವಿಭಾಗಿಸಲ್ಪಟ್ಟಿದೆ, ಎಲ್ಲ ಸಂದರ್ಭಗಳಲ್ಲಿಯೂ ಪ್ರಥಮ ಚಿಕಿತ್ಸೆಯನ್ನು ಹೇಳುತ್ತಾನೆ. ತದನಂತರ ಆಯಾ ವಿಷಕ್ಕೆ ತಕ್ಕಂತೆ (೧) ನಸ್ಯ (೨) ಪಾನ (೩) ಲೇಪ (೪) ಅಂಜನ ಇವುಗಳಲ್ಲಿ ಎಲ್ಲವನ್ನು ಅಥವಾ ಕೆಲವನ್ನು ಪ್ರಯೋಗಿಸುವಂತೆ ನಿಯಮಿಸುತ್ತಾನೆ. ಇನ್ನೊಂದು ವೈಶಿಷ್ಟ್ಯವೆಂದರೆ ಅನೇಕ ಸಂದರ್ಭದಲ್ಲಿ ಔಷಧೋಪಚಾರದೊಡನೆ ಮಂತ್ರೋಪಚಾರವನ್ನು ಹೇಳಿರುತ್ತದೆ. ಪು. ೨೩೬ರಲ್ಲಿ ಕೃತ್ರಿಮ ವಿಷಹರಣಕ್ಕೆ 'ದ್ರಾವಿಡಮಂತ್ರ'ವನ್ನು ಮಂಡಿಸಲಾಗಿದೆ.

ಖಗೇಂದ್ರಮಣಿದರ್ಪಣದ ಹಿರಿಮೆ ಅದರ ಭಾಷಾಶೈಲಿಯಲ್ಲಿಯೂ ಇರುತ್ತದೆ. ಶಾಸ್ತ್ರೀಯ ವಿಷಯವನ್ನು ನಿಷ್ಕೃಷ್ಟವಾಗಿಯೂ ಸ್ಪಷ್ಟವಾಗಿಯೂ ಹೇಳಿರುವುದನ್ನು ಸರ್ವತ್ರ ಕಾಣಬಹುದು. ಕೆಳಗಿನ ಪದ್ಯಗಳಲ್ಲಿ 'ಗರುಡಾಧಿಪ ಕ್ರಿಯೆ' ಎಂಬ ವಿಧಾನದಲ್ಲಿ ಹಾವು ಕಡಿದು ಸತ್ತು ಚಿತೆಗೇರಿಸಲ್ಪಟ್ಟವನನ್ನು ಚಿತಾಗ್ನಿಯಿಂದ ತಂದು ಬದುಕಿಸುವ ಯತ್ನವನ್ನು ಮನೋಹರವಾಗಿ ಸೂಚಿಸಿರುವನು. ಇಲ್ಲಿ ಶಾಸ್ತ್ರವು ಸಾಹಿತ್ಯವಾಗಿಬಿಟ್ಟಿದೆ :

ಸತ್ತನೆಹಿಕೊಂಡುದೆಂದಾ
ಪೊತ್ತೊಯ್ದು ಚಿತಾಗ್ನಿಯಲ್ಲಿ ಸಂಧಿಸುವೆಡೆಯೊಳ್।
ಮತ್ತೆನಿಸದೊಂದು ನಯಮಂ
ಬಿತ್ತರಿಸುವೆನವನ ತಲೆಗೆ ಶತಪೊಯ್ದೊಲವಿಂ ॥

ರಸಮಂ ಪೆರ್ಬೂಲಿಯ ತನಿ
ರಸದಿಂ ಮರ್ದಿಸಿ ಒಟಿಸ್ಕ ದಪ್ಪನ ಸಿರದೊಳ್ ।
ಬಿಸುಪೆಸೆಯೆ ತೇದು ಸಗಣದೊ
ಳಿಸೆವಿನೆಗಂ ಕಟ್ಟುಗಟ್ಟು ಭಾವಿಸಿ ಬಟಿಯಿಂ ॥

ಸಾಸುವೆ ಮೆಣಸುಳ್ಳಿಯೆನರಿ
ದಾ ಸಗಣದ ಕಟ್ಟೆಯೊಳಗೆ ಮೂತ್ರಯುತಂ ಪೊಯ್ ।
ಕಾಸಿದ ಕರ್ಬುನಮಂ ತಂ
ದಾ ಸರಿಸದೊಳೊಪ್ಪೆ ಒಡಿಯಲಂತವನೇಟ್ಟುಂ ॥

ತಪ್ಪುವೊಡೆ ರಾಮಬಾಣಂ
ತಪ್ಪುವೊಡಾ ಭರತನಾಜ್ಞೆ ಗಣಧರ ಸೂಕ್ತಂ ।
ತಪ್ಪುವೊಡಂ ತಪ್ಪದೆ ತಾ
ನಪ್ಪುದು ಗರುಡಾಧಿಪಕ್ರಿಯಾಖ್ಯವಿದಿಳಿಯೊಳ್ ॥

(VIII–೬೦–೬೩)

ಇಂಥ ವಿಚಾರಗಳಿಂದ ಈ ವೈದ್ಯಗ್ರಂಥವು ಬಹಳ ಮಹತ್ವದ್ದಾಗಿದೆ ಎನ್ನಬೇಕು.

## ೯. ಅಭಿನವಚಂದ್ರ (ಸು ೧೪೦೦)

ಅಭಿನವಚಂದ್ರನೆಂಬ ಬ್ರಾಹ್ಮಣಕವಿ ಕನ್ನಡದಲ್ಲಿ ಅಶ್ವಶಾಸ್ತ್ರವೊಂದನ್ನು ಬರೆದನು. 'ವಾಜಿಶಾಸ್ತ್ರ'ವನ್ನು ವಿರಚಿಸುವನೆಂಬುದಾಗಿ ಹೇಳಿರುವನು. ತನ್ನ ಕೃತಿಯನ್ನು 'ತುರಗಾಗಮ', 'ಅಶ್ವಾಗಮ'ವೆಂಬುದಾಗಿಯೂ ಕರೆಯುತ್ತಾನೆ. ಈ ಗ್ರಂಥದಲ್ಲಿ ಕುದುರೆಗೆ ಸಂಬಂಧಿಸಿದ ಲಕ್ಷಣ ಪೋಷಣ ವೈದ್ಯಾದಿ ಅನೇಕ ವಿಷಯಗಳನ್ನು ಸಂಗ್ರಹವಾಗಿ ಹೇಳಿರುತ್ತದೆ. ಈ ಗ್ರಂಥವನ್ನು ಸಿಂಹದತ್ತ, ರೇವಂತ ಮೊದಲಾದವರ ಸಂಸ್ಕೃತ ಹಯಶಾಸ್ತ್ರವನ್ನನುಸರಿಸಿ ಹೊಸಗನ್ನಡದಲ್ಲಿ ರಚಿಸಿರುವಂತೆ ಹೇಳುತ್ತಾನೆ. ಇದರಲ್ಲಿ ೮೨೮ ಕಂದಪದ್ಯಗಳನ್ನೊಳಗೊಂಡ ೧೬ ಅಧ್ಯಾಯಗಳಿರುತ್ತವೆ. ಉದಾಹರಣೆಗಳು :

ಶುಭವರ್ಣದ ಕುದುರೆ

ಕ್ಷೀರರುಚಿಯಿಂ ತನು ತನಿ ಪ್ರಭೆ
ಯೋರಂತಿರೆ ಶ್ವೇತನಾಗಲದನಾಳ್ವೊಡೆ ದಿ ।

ಗ್ವಾರಣ ಮರ್ಯಾದಾಂಬುಧಿ
ಧಾರಿಣಿಯನನೂನಮೊಂದೆ ಛತ್ರದಿನಾಳ್ಗುಂ ॥ (II-೫೧)

ಕುದುರೆಯ ಹಲ್ಲಿನಿಂದ ತಿಂಗಳಿಗೆ ಸರಿಯಾಗಿ ವಯಸ್ಸನ್ನು ತಿಳಿಯುವ ಸೂತ್ರಗಳನ್ನು ೫ನೆಯ ಅಧ್ಯಾಯದಲ್ಲಿ ಕೊಟ್ಟಿರುತ್ತದೆ. ಅವುಗಳಲ್ಲಿ ಒಂದು :

ನೇರಿದುವು ದಂತಪಂಙ್ತಿಶ
ರೀರಂ ಪಿರಿದಕ್ಕುಮದಱ ಸಂದಂಶಂಗಳ್ ।
ಕ್ಷೀರರುಚಿಯಾದೊಡದನವ
ಧರಿಸುಗೆ ಕಿಶೋರಕಂಗೆ ಸಪ್ತಮಮಾಸಂ ॥ (V-೨)

೭ನೆಯ ಅಧ್ಯಾಯದಲ್ಲಿ ಪೋಷಣವಿಧಾನವನ್ನು ವಿವರವಾಗಿ ಹೇಳಿದೆ. ಋತುಋತುವಿಗೂ (ಬೇರೆ ಬೇರೆ) ತಕ್ಕುದಾದ ಕ್ರಮವನ್ನು ಕೊಟ್ಟಿರುವುದು :

ವರಮಾಘಫಾಲ್ಗುಣಾಭ್ಯಂ
ತರ ತೈಲದೊಳಾ ಫಲತ್ರಯಂಗಳನಾ ಚಿ ।
ಯ್ಗಿರುಳಿಕ್ಕುಗೆ ರುಚಿಯಾಗವು
ತುರಗಕ್ಕೆ ಹಿತೋಪದೇಶಮಿಂತೀ ಕ್ರಿಯೆಯುಂ ॥ (VII-೨೨)

ಮರಣ ಚಿಹ್ನೆ

ಎವೆಯಿಕ್ಕದೆ ಕಣ್ಣಿಂ ಮು
ಚ್ಚಿ ಮುಖಂ ನೀರೋಡಿ ಚೇಷ್ಟೆಗೆಟ್ಟು ಕರಂ ಬಾ ।
ಲಮನೊಲ್ಲಲ್ಲಾಡದೆ ರ
ಕ್ತಮುಮಂ ಮೂತ್ರಿಸುವ ತುರಗಕಕ್ಕುಂ ಮರಣಂ ॥
(XIII-೨೩)

## ಸಂಗೀತ ಶಾಸ್ತ್ರ

ರಾ॥ ನರಸಿಂಹಚಾರ್ಯರು ಕವಿಚರಿತ್ರೆಯಲ್ಲಿ ಹೇಳಿದ 'ಸ್ವರಶಾಸ್ತ್ರ' ಎಂಬ ಸಂಗೀತಶಾಸ್ತ್ರ ಗ್ರಂಥವು ಉಪಲಬ್ಧವಾಗಿಲ್ಲ. ಪಂಪರನ್ನರ ಕಾಲದಲ್ಲಿ (೧೦ನೆಯ

ಶತಮಾನದಲ್ಲಿ) ಕನ್ನಡಿಗರಿಗೆ ಸಂಗೀತದಲ್ಲಿ ವಿಶೇಷ ಪರಿಶ್ರಮವಿದ್ದಿತೆಂಬುದು ಪಂಪಭಾರತ, ಅಜಿತತೀರ್ಥಂಕರ ಪುರಾಣಗಳಲ್ಲಿ ಬಂದಿರುವ ವರ್ಣನೆಗಳಿಂದ ತಿಳಿದುಬರುತ್ತದೆ—

ಸರಸದ ವಾದ್ಯದೊಳ್ ನೆಗಟಿ ಸಂನಿನಿವಂತತಿ ಘೇರಿಘೇರಿ ಮಾ
ಯ್ಗ್ಗರಿಗೆಮಮಂ ಮಧೂರುಗವಕ್ಕೈಕಟಕ್ರೆಂಪಮಪತ್ರಕುತ್ರರುಃ ।
ಸರಿಮಪತಂಬಿತಂತತಿ ವಿಕಕುದ್ರಕಕುದ್ರಕಮೆಂಬ ಭೇದದೋಳ್
ಪರಿಣತರಂಜಿಸುತ್ತುಯಿರೆ ರಂಜಿಸಿದರ್ ಪೊಸದೇಸಿಕಾರ್ತಿಯರ್ ॥ (ಅಜಿತ)

## ೧೦. ಸಂಗೀತರತ್ನಾಕರ (ಸು. ೧೭೫೦)

ಕನ್ನಡದಲ್ಲಿ 'ಸಂಗೀತ ರತ್ನಾಕರ' ಎಂಬೊಂದು ಪುಟ್ಟ ಸಂಗೀತಶಾಸ್ತ್ರ ಗ್ರಂಥ ದೊರೆತಿದೆ. ಇದರ ಕಾಲ ಸು. ೧೭೫೦ ಇರಬಹುದು. ಗ್ರಂಥಕರ್ತನು ಯಾರೆಂಬುದು ತಿಳಿದುಬರುವುದಿಲ್ಲ. ಸಾರಂಗದೇವನಿಂದ (೧೨೧೦-೪೭) ಸಂಸ್ಕೃತ ಭಾಷೆಯಲ್ಲಿ ರಚಿತವಾದ 'ಸಂಗೀತರತ್ನಾಕರ'ವು ಈತನಿಗೆ ತನ್ನ ಗ್ರಂಥಕ್ಕೆ ನಾಮಕರಣ ಮಾಡುವಲ್ಲಿ ಸ್ಫೂರ್ತಿಕೊಟ್ಟಿರಬೇಕು.

ಇದರಲ್ಲಿ ಕರ್ಣಾಟಕ ಸಂಗೀತದ ೭೨ ಮೇಳಕರ್ತರಾಗಗಳ ವಿವರವಾದ ಪ್ರತಿಪಾದನೆಯಿರುತ್ತದೆ. ಸಂಗೀತಶಾಸ್ತ್ರಕ್ಕೆ ಆವಶ್ಯಕವಾಗಿರುವ ಪಾರಿಭಾಷಿಕ ಶಬ್ದಗಳನ್ನೊಳಗೊಂಡ ಒಂದು ಶ್ಲೋಕದಿಂದ ಗ್ರಂಥಾರಂಭವಾಗುತ್ತದೆ. ಅವುಗಳ ಅರ್ಥಗಳನ್ನು ಸುಲಭವಾದ ಕನ್ನಡದಲ್ಲಿ ಕೊಡಲಾಗಿದೆ.

ಆರೋಹಮವರೋಹಂ ಚ ಢಾಲಸ್ಫುರಿತಕಂಪಿತಾಃ ।
ಆಹತ ಪ್ರತ್ಯಾಹತಶ್ಚ ತ್ರಿಪುಚ್ಛಾಂದೋಳಮೂರ್ಛನಾಃ ॥

(೧) ಆರೋಹಣ—ಸರಿಗಮಪದನಿಸ–ಹತ್ತೋಣ.

(೨) ಅವರೋಹಣ—ಸನಿದಪಮಗರಿಸ–ಇಳಿಯೋಣ.

(೩) ಢಾಲು—ಆರೋಹಣ ಅವರೋಹಣ ಎರಡರಲ್ಲೂ ಜಾರುತ್ತಲೆ ಸ್ವರಗಳನ್ನು ನುಡಿಸೋಣ.

(೪) ಸ್ಫುರಿತ—ಆರೋಹಣ ಅವರೋಹಣಗಳಲ್ಲಿ ಸುಕ್ಕುತ ಸ್ವರಗಳನ್ನು ನುಡಿಸುವುದು ಇತ್ಯಾದಿ.

ಮತ್ತೆ 'ಕನಕಾಂಗಿ'ಯಿಂದ ಮೊದಲ್ಗೊಂಡು ೭೨ ಮೇಳಕರ್ತರಾಗಗಳನ್ನು ವಿಶದವಾಗಿ ವಿವರಿಸಿದ್ದಾನೆ.

## ೯. ನಡುಗನ್ನಡ ಸಾಹಿತ್ಯ

ಸುಮಾರು ೧೨ನೆಯ ಶತಮಾನದ ಮಧ್ಯಕಾಲದಿಂದ ಮುಂದೆ ೧೯ನೆಯ ಶತಮಾನದ ಪೂರ್ವಾರ್ಧದವರೆಗಿನ ಭಾಷೆಯನ್ನು ನಡುಗನ್ನಡವೆನ್ನಬಹುದು. ಅದು ಅಂದಿನ ಜನ ಆಡುವ ಭಾಷೆಗೆ ಬಹಳ ಸಮೀಪವಾಗಿತ್ತೆನ್ನಬಹುದು. ಹಳಗನ್ನಡ ಶಬ್ದರೂಪಕ್ಕೂ ನಡುಗನ್ನಡ ಶಬ್ದರೂಪಕ್ಕೂ ಅನೇಕ ವ್ಯತ್ಯಾಸಗಳನ್ನು ಕಾಣಬಹುದು. ಅವುಗಳಲ್ಲಿ ಮುಖ್ಯವಾದುವು :

(೧) ವ್ಯಂಜನಾಂತ ಶಬ್ದಗಳು ಸ್ವರಾಂತವಾದುವು : ನಾರು, ಬೇರು, ನೀರು, ನೀನು ಇತ್ಯಾದಿ.

(೨) 'ಪ'ಕಾರವು ಅಚ್ಚಕನ್ನಡದಲ್ಲಿ ಪ್ರಾಯಿಕವಾಗಿ 'ಹ'ಕಾರವಾದುದು : ಹಾಲು, ಹೇಳು, ಹೊಡೆ, ಹಿಡಿ, ಹಸು ಇತ್ಯಾದಿ.

(೩) 'ಱ' ಮತ್ತು 'ೞ' ಕಾರಗಳು 'ರ' ಮತ್ತು 'ಳ' ಕಾರಗಳಾಗಿ ಮಾರ್ಪು ಪಡೆದುದು : ಅದರ, ಅರಿ (ತಿಳಿ ಎಂದರ್ಥದಲ್ಲಿ) ಮರಿ, ಮಳೆ, ಬಾಳ್ವೆ ಇತ್ಯಾದಿ.

ಹಳಗನ್ನಡದಲ್ಲಿ—ಸಂಸ್ಕೃತಪ್ರಚುರವಾದ ಶೈಲಿಯಲ್ಲಿ—ಬರೆಯಲ್ಪಟ್ಟ ಚಂಪೂಕಾವ್ಯಗಳು ಜನಸಾಮಾನ್ಯಕ್ಕೆ ಕಬ್ಬಿಣದ ಕಡಲೆಗಳಾಗಿ ಉಳಿಯುವಂತಾಯಿತು. ಕರ್ಣಾಟಕದಲ್ಲಿ ೧೨ನೆಯ ಶತಮಾನದ ಮಧ್ಯದಲ್ಲಿ ರಾಜಕೀಯ ಸಾಮಾಜಿಕ ಪರಿಸ್ಥಿತಿಗಳು ಕ್ರಾಂತಿಗೆ ಓಕೊಟ್ಟುವು. ಚಾಲುಕ್ಯವಂಶದ ಕ್ಷೀಣ

ಚಂದ್ರನಾದ ಮುಮ್ಮಡಿ ಸೋಮೇಶ್ವರನು ಅಸ್ತಮಿಸುತ್ತಿದ್ದನು. ಕರ್ಣಾಟಕ ರಾಜ್ಯಲಕ್ಷ್ಮಿಯು ಕಲಚೂರ್ಯರನ್ನು ಕಡೆಗಣ್ಣಿನಿಂದ ಒಮ್ಮೆ ನೋಡಿ ಮತ್ತೆ ಹೊಯ್ಸಳರ ಮತ್ತು ಯಾದವರ ನಡುವೆ ಕಣ್ಣುಮುಚ್ಚಾಲೆಯಾಡುತ್ತಿದ್ದಳು. ಈ ಸಂಧಿಕಾಲದಲ್ಲಿ ಚಂಪೂಕವಿಗಳಿಗೆ ಹಿಂದಿನ ರಾಜಾಶ್ರಯ ದೊರೆಯುವುದು ಕಷ್ಟಸಾಧ್ಯವಾಯಿತು. ಸಾಮಾಜಿಕ ಧಾರ್ಮಿಕ ಕ್ಷೇತ್ರಗಳಲ್ಲಿ ಕರ್ಣಾಟಕವನ್ನು ಏಕೆ—ದಕ್ಷಿಣ ಭಾರತವನ್ನೇ—ಸಂಪ್ರದಾಯದ ಮಬ್ಬಿನಿಂದ ಎಬ್ಬಿಸುವ ಕ್ರಾಂತಿಯ ಕಹಳೆಯನ್ನು ಬಸವಣ್ಣ (೧೧೬೦) ಊದಿದನು. ಅವರ ನೇತೃತ್ವದಲ್ಲಿ ವೀರಶೈವ ಮತಕ್ಕೊಂದು ನವಚೈತನ್ಯ ಒದಗಿಬಂತು. ಅವನು ಸ್ವತಃ ರಾಜಮಂತ್ರಿ; ತಾನು ಕಂಡುಕೊಂಡ ಸತ್ಯವನ್ನು, ಅನುಭವವನ್ನು ಜಾತಿಪಂಥಗಳ ಭೇದವಿಲ್ಲದೆ ಪ್ರತಿಯೊಬ್ಬ ಮಾನವನಿಗೂ ಅರುಹಬೇಕೆಂಬ ಹಂಬಲ ಅವನಿಗೆ. 'ಆದ್ಯರ ವಚನ'ಗಳ ಸ್ವಾರಸ್ಯವನ್ನನುಭವಿಸಿದ ಬಸವಣ್ಣನೂ ಅವನ ಅನುಯಾಯಿ ಅನುಭಾವಿಗಳೂ ತಾಯ್ನುಡಿಯ ಸಹಜಶಕ್ತಿಯನ್ನು ತಿಳಿದಿದ್ದರು. ಮನಮುಟ್ಟಿ ಬೋಧಿಸಲು ಹೃದಯಾಂತರಾಳದಿಂದ ಬಂದ ನಿರಾಡಂಬರದ ಕನ್ನಡ—ಜನ ಮಾತನಾಡುವಂಥ ಕನ್ನಡ—ಬಹಳ ಪರಿಣಾಮಕಾರಿಯಾಗುವುದೆಂಬ ರಹಸ್ಯದ ಮೇಲೆ ಅವರ ಕೆಲಸ ನಡೆಯಿತು.

ಅವರು ಮಾಡಿದ ಮೊದಲಿನ ಕೆಲಸ; ಕವಿಸಮಯ, ಹಳಸಿದ ಅಲಂಕಾರ, ವರ್ಣವೃತ್ತ, ಇತ್ಯಾದಿಯಾದ ಅರಮನೆಯ ಕೋಟೆಯೊಳಗಿನಿಂದ ಸಾಹಿತ್ಯವನ್ನು ಹೊರಗೆ ತಂದು ಹೆಚ್ಚಿನ ಸ್ವಾತಂತ್ರ್ಯದಿಂದ ಜನತೆಯ ನಡುವೆ ವ್ಯವಹರಿಸುವಂತೆ ಮಾಡಿದುದು; ಕ್ರಮೇಣ ಮಾರ್ಗ ಸಾಹಿತ್ಯವೇ ಸಾಹಿತ್ಯವೆಂಬ ಭಾವನೆಯನ್ನು ಹೋಗಲಾಡಿಸಿ, ದೇಸಿ ಸಾಹಿತ್ಯಕ್ಕೆ ಅದರ ಸ್ಥಾನವನ್ನು ಗಳಿಸಿಕೊಟ್ಟುದು; ವಸ್ತುಕ ಕಾವ್ಯಗಳಷ್ಟೇ ವರ್ಣಕಕಾವ್ಯಗಳೂ ಮುಖ್ಯವೆಂಬುದು ಸ್ವೀಕೃತವಾದುದು. ೧೨ನೆಯ ಶತಮಾನದ ಮಧ್ಯದಲ್ಲಿ ವಚನಕಾರರು ಗದ್ಯವು "ಕವಿಗಳ ನಿಕಷವನ್ನು ಸಾರುತ್ತದೆ" ಎಂಬ ಅಭಿಮತವನ್ನು ಸಿದ್ಧಾಂತಪಡಿಸಿದರು. ಈ ಕಾರ್ಯಗಳಿಗೆ 'ನಡುಗನ್ನಡ'ವೇ ಉಚಿತ ಮಾಧ್ಯಮವಾಯಿತು. ಸಂಗ್ರಹವಾಗಿ ಹೇಳುವುದಾದರೆ :

(೧) ಇದುವರೆಗೆ ಪದ್ಯಮಯವಾಗಿದ್ದ ಸಾಹಿತ್ಯಕ್ಕೆ ವಚನಸಾಹಿತ್ಯದ

ಒಂದು ಹೊಸ ಕಾಣಿಕೆ: ನೋಡುವುದಕ್ಕೆ ಗದ್ಯರೂಪದಲ್ಲಿದ್ದರೂ ಅನೇಕ ವಚನಗಳಲ್ಲಿ ಉತ್ತಮ ಕಾವ್ಯಗುಣವಿದೆ; ಪಾಂಡಿತ್ಯಪ್ರಚುರವಲ್ಲದ ಈ ನುಡಿಗಳು ಅನುಭಾವಿಗಳ ಅನುಭವಸುಧೆಯ ಹನಿಗಳಂತಿವೆ; ಕೆಲವು ವಚನಗಳು ತತ್ವ, ಅನುಭವ, ಸಾಹಿತ್ಯಗಳ ತ್ರಿವೇಣಿಯಾಗಿ, ಕಿರಿದರಲ್ಲಿ ಹಿರಿದನ್ನು ಹೇಳುವುವು.

(೨) ಸಂಸ್ಕೃತ ವರ್ಣವೃತ್ತಗಳನ್ನು ಬದಿಗೊತ್ತಿ ನಡುಗನ್ನಡಕ್ಕೆ ಹಿತವಾದಂಥ ಮಾತ್ರಾಗಣ ಅಂಶಗಣಗಳಿಂದ ರಚಿತವಾದ ಕನ್ನಡಛಂದಸ್ಸುಗಳನ್ನು ಧಾರಾಳವಾಗಿ ಬಳಸಿದುದು. ಹಿಂದಿನಿಂದಲೇ ಇದ್ದರೂ ತೀರ ಕಳೆಗುಂದಿದ್ದ ರಗಳೆ, ತ್ರಿಪದಿಗಳ ಪುನರುಜ್ಜೀವನವಾದುದು. ಹರಿಹರನಂಥ ಕವಿಪುಂಗವರು ಬಸವರಾಜದೇವರ ರಗಳೆಯಂಥ ರಸಪಾಕಗಳನ್ನು ತಯಾರಿಸಲು ಸಂಪೂರ್ಣವಾಗಿ ರಗಳೆಯ ಛಂದಸ್ಸನ್ನೇ ಪ್ರಯೋಗಿಸಿದುದು. ಷಟ್ಪದಿಸಾಂಗತ್ಯಗಳು ನೂತನವಾಗಿ ನಿರ್ಮಾಣವಾದುದು. ಹರಿಹರನ ಸೋದರಳಿಯನಾದ ರಾಘವಾಂಕನಿಗೆ (೧೨೫) ಷಟ್ಪದಿಯ ವಿಧಾತನೆಂಬ ಗೌರವ ಸಲ್ಲುವುದು. ಈತನು ಷಟ್ಪದಿಯಲ್ಲಿ ಹರಿಶ್ಚಂದ್ರಕಾವ್ಯವೆಂಬ ಉತ್ತಮ ಕೃತಿಯನ್ನು ರಚಿಸಿ, ಮೊದಲಿನ ಷಟ್ಪದಿಕವಿಯಾದನು. ಈ ನವಸ್ಫೂರ್ತಿ ಇತರ ಮತದವರನ್ನು ತಟ್ಟದಿಲ್ಲ. ಹಾಡುಗಬ್ಬಕ್ಕೆ ಒಪ್ಪುವ ಸಾಂಗತ್ಯವನ್ನು, ವಿಶೇಷವಾಗಿ ಜೈನ ಕವಿಗಳು ಬಳಕೆಗೆ ತಂದರು.[1] ಸಾಂಗತ್ಯಕಾವ್ಯಪ್ರಪಂಚದ ಕವಿಕುಲತಿಲಕನೆಂದರೆ ರತ್ನಾಕರವರ್ಣಿ (೧೫೬೦). ಷಟ್ಪದಿಯ ವಿವಿಧ ಪ್ರಯೋಗಗಳಲ್ಲಿ ಮುಂದಿನ ಕೆಲವು ಶತಮಾನಗಳ ಕವಿಗಳು ಮಾರ್ಗಕಾವ್ಯಗಳನ್ನೂ ದೇಸಿಕಾವ್ಯಗಳನ್ನೂ ರಚಿಸಿ ಕನ್ನಡಸಾಹಿತ್ಯಸಂಪತ್ತಿಯನ್ನು ಹೆಚ್ಚಿಸಿದರು. ತ್ರಿಪದಿಯಲ್ಲಿ - ಕನ್ನಡ ಜನತೆಯ ಉಸಿರಿನಂತಿರುವ ಈ ದೇಸೀ ಛಂದಸ್ಸಿನಲ್ಲಿ ವೀರಶೈವ ಕವಿಗಳು ಅನೇಕ ಸ್ತೋತ್ರಗಳನ್ನು ರಚಿಸಿರುವರು. ಆದರೆ ತ್ರಿಪದಿಯಿಂದ ತ್ರಿವಿಕ್ರಮನಾಗಿ ಕನ್ನಡ ಲೋಕವನ್ನು ಗೆದ್ದು ಕನ್ನಡಸಾಹಿತ್ಯದಲ್ಲಿ ಇತರ ಚಮತ್ಕೃತಿಗಳೊಂದಿಗೆ

---

1 ಸಾಂಗತ್ಯದಲ್ಲಿ ದೀರ್ಘವಾಗಿ ಕವಿತೆ ಮಾಡಿದವರಲ್ಲಿ ಶಿಶುಮಾಯಣನು (ಜೈನ: ೧೨೩೨ ? ೧೪೭೨ ? ) ಮೊದಲಿಗನೋ ದೇವರಾಜನು (೧೪೧೦ ? ) ಮೊದಲಿಗನೋ ಎಂಬೊಂದು ಚರ್ಚೆ ಉಳಿದುಕೊಂಡಿದೆ.

ವಿಡಂಬನವನ್ನು ಮಾನವಹಿತಕ್ಕೆ ಉಪಯೋಗಿಸಿದ ಕೀರ್ತಿ ಸರ್ವಜ್ಞನಿಗೆ (೧೭೦೦) ಮೀಸಲು.

(೩) ವೀರಶೈವ ವಚನಕಾರರ ಸಾಹಿತ್ಯರಚನಾಪ್ರಭಾವ ಭಾಗವತ ಅನುಭಾವಿಗಳನ್ನು ಸೋಂಕದೆಯಿಲ್ಲ. ಹರಿದಾಸರೆಂಬುದಾಗಿ ಖ್ಯಾತರಾದ ಈ ಭಾಗವತ ಅನುಭಾವಿಗಳು ಭಕ್ತಿ ಜ್ಞಾನ ವೈರಾಗ್ಯಗಳನ್ನೊಳಕೊಂಡ ತಮ್ಮ ಸಂದೇಶಗಳನ್ನು ಕನ್ನಡ ಜನಕ್ಕೆ ಅಮೋಘವಾದ ಕೀರ್ತನೆಗಳ ಮೂಲಕ ಸಾರಿದರು. ಇದನ್ನು ದಾಸಸಾಹಿತ್ಯವೆನ್ನುತ್ತಾರೆ. ವಿವಿಧ ದೇಶೀಛಂದಸ್ಸುಗಳಲ್ಲಿ ತಾಳಲಯಬದ್ಧವಾಗಿ ಈ ಕೀರ್ತನೆಗಳನ್ನು ಕಟ್ಟಿಹಾಡಿದರು. ನರಹರಿ ತೀರ್ಥನನ್ನು (೧೨೮೧) ಈ ಕೂಟದ ಮೊದಲಿಗನೆನ್ನುವರು. ವ್ಯಾಸರಾಯ (೧೫೩೯), ಪುರಂದರದಾಸ (೧೫೬೦), ಕನಕದಾಸ (೧೫೫೦), ಜಗನ್ನಾಥದಾಸ—ಇವರು ದಾಸವಾಙ್ಮಯಕ್ಕೆ ಅತ್ಯಧಿಕ ಸೇವೆಸಲ್ಲಿಸಿದ ಶ್ರೇಷ್ಠರು.

(೪) ೧೭ನೆಯ ಶತಮಾನದಿಂದ ಮುಂದಕ್ಕೆ ಯಕ್ಷಗಾನಪ್ರಸಂಗಗಳನ್ನು ಕಾಣುತ್ತೇವೆ. ಅವು ಕನ್ನಡಿಗರ ರಂಗಾಭಿರುಚಿಯ ದೇಶೀಯ ದ್ಯೋತಕಗಳು. ಅವಕ್ಕೆ ಸಂಸ್ಕೃತ ನಾಟಕಗಳ ಗಂಧಗಾಳಿ ಸುಳಿದಿಲ್ಲವೆಂದರೆ ತಪ್ಪಾಗದು. ಹೆಚ್ಚೇಕೆ ಅವುಗಳ ಪ್ರದರ್ಶನವನ್ನು ಶುದ್ಧಕನ್ನಡ ಹೆಸರಿನಿಂದ—ಆಟ ಅಥವಾ ಬಯಲಾಟ ಎಂಬ ಹೆಸರಿನಿಂದ—ಕರೆಯುವರು. ಅವನ್ನು ರಸಾನುಗುಣವಾಗಿ ಹಾಡುವುದಕ್ಕೆ ಸರಿಹೋಗುವಂಥ ವಿವಿಧ ಕನ್ನಡ ಛಂದಸ್ಸುಗಳಲ್ಲಿ ತಾಳಬದ್ಧವಾಗಿ ರಚಿಸಿರುವರು. ಪಾರ್ತಿಸುಬ್ಬನಂಥವರು ಈ ಕ್ಷೇತ್ರದ ಹೆಸರಾಂತ ಕವಿಗಳು.

(೫) ವಚನಗಳಲ್ಲದೆ, ವ್ಯಾಖ್ಯಾನ, ಟೀಕೆ, ತತ್ವಶಾಸ್ತ್ರ, ಮಾಹಾತ್ಮ್ಯೆ ಇತ್ಯಾದಿ ಕೃತಿಗಳು ನಡುಗನ್ನಡದಲ್ಲಿ ಗದ್ಯರೂಪವಾಗಿ ಬರೆಯಲ್ಪಟ್ಟವೆ.

ಪ್ರಸ್ತುತ ಇವನ್ನು ಒಂದಿಷ್ಟು ಗಮನಿಸೋಣ.

## ವಚನಸಾಹಿತ್ಯ

ವಚನಸಾಹಿತ್ಯವೆಂದೊಡನೆಯೇ ಎಲ್ಲರಿಗೂ ಮೊದಲು ನೆನಪಿಗೆ ಬರುವುದು

ಬಸವಣ್ಣನ ಹೆಸರು. ವೀರಶೈವೇತರರನೇಕರು ಬಸವಣ್ಣನೇ (೧೧೬೦) ಆದ್ಯ ವಚನಕಾರನೆಂಬ ತಪ್ಪಾದ ಅಭಿಪ್ರಾಯಪಟ್ಟವರುಂಟು. ಆದರೆ ೧೧ನೆಯ ಶತಮಾನದ ಪೂರ್ವಾರ್ಧದಲ್ಲಿ ಎಂದರೆ ಚಾಲುಕ್ಯ ಜಯಸಿಂಹನ ಕಾಲದಲ್ಲಿ (೧೦೧೫-೧೦೪೨)[1] ದೇವರ (ಜೇಡರ) ದಾಸಿಮಯ್ಯ, ಶಂಕರದಾಸಿಮಯ್ಯ ಎಂಬಿಬ್ಬರು ಶಿವಶರಣರು ವಚನಗಳ ಮೂಲಕ ತಮ್ಮ ಅನುಭವದ ಸಾರವನ್ನು ಅರುಹಿದಂತೆ ತಿಳಿದುಬರುತ್ತದೆ. ಬಸವೇಶ್ವರನೇ ಅವರನ್ನು 'ಆದ್ಯ'ರೆಂಬುದಾಗಿ ಗೌರವದಿಂದ ಸ್ಮರಿಸಿರುತ್ತಾನೆ. ಇವರಿಗಿಂತ ಹಿಂದಿನವರ ವಚನಗಳು ಉಪಲಬ್ಧವಾದಂತಿಲ್ಲ.

(i) ದೇವರದಾಸಿಮಯ್ಯನ ೧೫೦ ವಚನಗಳು ದೊರೆತಿವೆ. ಅವುಗಳಲ್ಲಿ ರಾಮನಾಥ ಎಂಬ ಅಂಕಿತವಿದೆ. ಆತನ ವಚನಗಳಲ್ಲಿ ಜೀವನದಲ್ಲಿ ಕಂಡು ಬರುವ ಉದಾಹರಣೆಗಳ ಮೂಲಕ, ಅನುಭವದ ನಿತ್ಯಸತ್ಯವು ಮನೆ ಮಾಡಿದೆ :

(೧) ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಣ್ಬುದೆ ? ಕಡೆಗೀಲು ಬಂಡಿಗಾಧಾರ ; ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ.

ಎಷ್ಟು ಸುಂದರ ರೂಪಕ ! ಇಲ್ಲಿ 'ಮೃಡಶರಣರ ನುಡಿಗಡಣ' ಎಂಬುದಾಗಿ ಸೂಚಿಸಿರುವುದನ್ನು ನೋಡಿದರೆ ತನಗಿಂತ ಹಿಂದಿನ ವೀರಶೈವಾಚಾರ್ಯರ ವಚನಗಳನ್ನು ಈತನು ದೃಷ್ಟಿಯಲ್ಲಿಟ್ಟುಕೊಂಡಂತೆ ತೋರುತ್ತದೆ.

(೨) ಮರದೊಳಗೆ ಮಂದಾಗ್ನಿಯನುರಿಯದಂತಿರಿಸಿದೆ ; ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ ; ಶರೀರದೊಳಗಾತ್ಮನನಾರುಂ ಕಾಣದಂತಿರಿಸಿದೆ ; ನೀ ಬೆರಸಿಹ ಭೇದಕ್ಕೆ ಬೆರಗಾದೆನಯ್ಯ ರಾಮನಾಥಾ.

ಇಲ್ಲಿ ವೀರಶೈವ ತತ್ತ್ವವೊಂದನ್ನು ಜನಸಾಮಾನ್ಯರು ಕೂಡ ತಿಳಿದು

---

[1] ಕ. ಸಾ. ಚ., ಪು. ೧೪೬.

ಕೊಳ್ಳುವಂತೆ ಪ್ರಸಿದ್ಧವಾದ ದೃಷ್ಟಾಂತಗಳ ಮೂಲಕ ಸ್ಪಷ್ಟವಾಗಿ ಸಾರಿದ್ದಾನೆ.

ಶಂಕರದಾಸಿಮಯ್ಯನ ವಚನಗಳು ಇನ್ನೂ ಅಷ್ಟು ಬೆಳಕಿಗೆ ಬಂದಿಲ್ಲ. ಮುಂದಕ್ಕೆ ಪ್ರಭುದೇವನ (೧೧೬೦) ವರೆಗೆ ಅಂಥ ಪ್ರಸಿದ್ಧ ವಚನಕಾರರು ಕಂಡು ಬರುವುದಿಲ್ಲ.

(ii) ಪ್ರಭುದೇವನು ಬಸವೇಶ್ವರನ ಸಮಕಾಲೀನನಾದರೂ ಆತನಿಗಿಂತ ಹಿರಿಯನು. ಪ್ರಭುದೇವನನ್ನು ಅಲ್ಲಮಪ್ರಭು ಎಂಬುದಾಗಿಯೂ ಕರೆಯುತ್ತಿದ್ದರು. 'ಶ್ರೀಮದ್ದೇಶಿಷಟ್ಸ್ಥಲ ಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾಕೋಳಾಹಳ ಪ್ರಭುದೇವರು' ಎಂಬ ಹೊಗಳಿಕೆಗೆ ಪಾತ್ರನಾದ ಈ ವೀರಶೈವಾಚಾರ್ಯನು ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಶಿವತತ್ವವನ್ನು ಬೋಧಿಸಿ ಕಲ್ಯಾಣಕ್ಕೆ ಹೋಗಿ ಬಸವನಿಂದ ಪುರಸ್ಕೃತನಾಗಿ ಶೂನ್ಯಸಿಂಹಾಸನವನ್ನೇರಿದನು. ಅಕ್ಕಮಹಾದೇವಿಗೂ ನಿರ್ವಾಣ ಪದವಿಯನ್ನು ದಯೆಮಾಡಿಸಿದನಂತೆ. ಈ ಮಹಾ ವಿಭೂತಿಯ ವಿಷಯವಾಗಿ ಚಾಮರಸನ ಪ್ರಭುಲಿಂಗಲೀಲೆ, ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣ ಮೊದಲಾದ ಗ್ರಂಥಗಳು ಅನೇಕ ಉಪಯುಕ್ತಾಂಶಗಳನ್ನು ತಿಳಿಸುತ್ತವೆ. ಈತನ ವಚನಗಳು ಪ್ರಾಯಿಕವಾಗಿ 'ಗುಹೇಶ್ವರ' ಎಂಬ ಮುದ್ರಿಕೆಯುಳ್ಳವು. ಷಟ್ಸ್ಥಲ ಜ್ಞಾನಚಾರಿತ್ರ, ಶೂನ್ಯಸಂಪಾದನೆ, ಸೃಷ್ಟಿಯ ವಚನ, ಬೆಡಗಿನ ವಚನ, ಮಂತ್ರಮಾಹಾತ್ಮ್ಯ, ಕಾಲಜ್ಞಾನವಚನ ಇತ್ಯಾದಿ ಹೆಸರಾಂತ ಗ್ರಂಥಗಳ ಮೂಲಕ ವೀರಶೈವ ವಚನಾಮೃತವನ್ನು ಕನ್ನಡ ಜಿಜ್ಞಾಸುಗಳಿಗೆ ಸುರಿದಿದ್ದಾನೆ. ಈತನು ವಚನವಾಙ್ಮಯಸಾಹಿತ್ಯದ ಅಮರಜ್ಯೋತಿಯಂತಿರುವನು. ಎಲ್ಲ ಗುಣಗಳಿಂದಲೂ ಪ್ರಭುದೇವನ ವಚನಗಳ ಶ್ರೇಷ್ಠತೆ ಅದ್ವಿತೀಯವಾಗಿದೆ.

ಉದಾಹರಣೆಗಳು :

(೧) ಹೊಸ ಮುತ್ತಿನ ಸುಪ್ಪಾಣಿಯಂತೆ ಆ ಲಿಂಗೈಕ್ಯವು ; ಸ್ಫಟಿಕದ ಘಟದೊಳಗಣ ಪ್ರಭೆಯಂತೆ ವಾಯುವಿನ ಸಂಚದ ಪರಿಮಳದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು ಗುಹೇಶ್ವರಾ (ಷಟ್‌ಸ್ಥಲಜ್ಞಾನಚಾರಿತ್ರ).

(೨) ಕರಿ ಸ್ಪರ್ಶನೇಂದ್ರಿಯದಿಂದ ಬಂಧನವಡೆದಟಿಯಿತ್ತು; ಪತಂಗನು ರೂಪೇಂದ್ರಿಯದಿಂದ ಬಂಧನವಡೆದಟಿಯಿತ್ತು; ಕುರಂಗನು ಶ್ರೋತ್ರೇಂದ್ರಿಯದಿಂದ ಬಂಧನ ವಡೆದಟಿಯಿತ್ತು; ಮತ್ಸ್ಯವು ಜಿಹ್ವೇಂದ್ರಿಯದಿಂದ ಬಂಧನವಡೆದಟಿಯಿತ್ತು; ಇಂತೀ ಯೊಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣ ಪ್ರಳಯವಾಗಿತ್ತು; ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿಹ ಮನುಷ್ಯಪ್ರಾಣಿಗೆ ಮಱವೆಯೆಡೆಗೊಂಡು ದೇಹ ಮೋಹಭ್ರಾಂತು ಮುಸುಕಿ ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇಟ ಗುಹೇಶ್ವರಾ.

(೩) ಬೆಟ್ಟಕ್ಕೆ ಚಳಿಯಾದಡೆ ಏನ ಹೊದ್ದಿಸುವರಯ್ಯ, ಬಯಲು ಬತ್ತಲೆ ಇರ್ದರೆ ಏನನುಡಿಸುವರಯ್ಯ, ಭಕ್ತನು ಭವಿಯಾದಡೆ ಆದೇನನುಪಮಿಸುವನಯ್ಯ ಗುಹೇಶ್ವರಾ.

(೪) ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣ ವೆಂಬುದು ಷಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿಯೆಂಬುದು ತೋರಿ ಉಂಬ ಲಾಭ, ಗುಹೇಶ್ವರನೆಂಬುದು ಮೀರಿದ ಘನವು

ಇಷ್ಟರಲ್ಲೇ ಪ್ರಭುದೇವನ ಆಳವಾದ ಮತ್ತು ಭಕ್ತಿಜ್ಞಾನಗಳ ಪ್ರಕಾರವು ಮಂದಟ್ವಾಗದಿರದು. ಅನುಭವವಿಲ್ಲದ, ಆಚರಣೆಗೆ ಬಾರದ ಮಾತನ್ನು ಮನಕೆ ನಾಟುವ ವಿಡಂಬನೆಯ ಮೂಲಕ ಟೀಕಿಸುತ್ತಾನೆ.

## (iii) ಬಸವೇಶ್ವರ (೧೧೬೦)

ಬ್ರಾಹ್ಮಣಕುಲದಲ್ಲಿ ಹುಟ್ಟಿದ ಬಸವೇಶ್ವರನಿಗೆ ಬ್ರಾಹ್ಮಣರ ಕರ್ಮಕಾಂಡ ಸತ್ಯಾನ್ವೇಷಣೆಗೆ ಸಾಕಷ್ಟು ಸ್ವಾತಂತ್ರ್ಯವನ್ನು ಕೊಡಲಿಲ್ಲವೇನೋ. ವೀರಶೈವ ದೀಕ್ಷೆಯನ್ನು ತೆಗೆದುಕೊಂಡು ರಾಜಕೀಯ ಧಾರ್ಮಿಕ ಕ್ಷೇತ್ರಗಳಲ್ಲಿ ಸವ್ಯಸಾಚಿ ಯಾಗಿ ದುಡಿದನು. ಕಳಚೂರ್ಯ ಬಿಜ್ಜಳರಾಯನ ಮಂತ್ರಿಯಾಗಿ ವಿಶೇಷ ವರ್ಚಸ್ಸನ್ನು ಬೀರಿದನು; ಸಮಾಜದೊಳಗಣ ವೈಷಮ್ಯಗಳನ್ನು ಕಂಡು ಬಹು ವಾಗಿ ನೊಂದನು; ಅಚಲವಾದ ಶಿವಭಕ್ತಿಯಿಂದ ಕೂಡಿದ ಅನುಭಾವಿಯಾಗಿ ಜಂಗಮರ ಸೇವೆಗೈದನು. ಕಲ್ಯಾಣದಲ್ಲಿ 'ಅನುಭವಮಂಟಪ'ವನ್ನು ಸ್ಥಾಪಿಸಿ ಶಿವಶರಣರ ವಿಚಾರವಿನಿಮಯಗಳಿಗೆ ವಿಶಿಷ್ಟ ಕ್ಷೇತ್ರವೊಂದನ್ನು ಕಲ್ಪಿಸಿಕೊಟ್ಟನು

ಕರ್ಣಾಟಕದಲ್ಲಿ ವೀರಶೈವ ಧರ್ಮವು ಪ್ರಾಚೀನ ಕಾಲದಿಂದಲೇ ಪ್ರಚಾರ ದಲ್ಲಿದ್ದರೂ, ಆ ತನಕ ಅದಕ್ಕೆ ರಾಜಕೀಯ ಪ್ರೋತ್ಸಾಹ ವಿಶೇಷ ದೊರೆತಂತೆ ತಿಳಿದುಬರಲಿಲ್ಲ. ಅಮಾತ್ಯ ಬಸವೇಶ್ವರನ ವರ್ಚಸ್ಸಿನಿಂದ ಅಂಥ ಪ್ರೋತ್ಸಾಹ ಲಭಿಸಿ ಕರ್ಣಾಟಕಾಂಧ್ರ ದೇಶಗಳಲ್ಲಿ ಆ ಧರ್ಮವು ಅಧಿಕವಾಗಿ ಹರಡಿತು. ಬಸವೇಶ್ವರನನ್ನು ವೀರಶೈವಮತೋದ್ಧಾರಕನೆಂಬುದಾಗಿ ಜನ ಸ್ಮರಿಸುತ್ತಾರೆ. ಮಾತ್ರವಲ್ಲ ಹಿರಿಯ ಅನುಭಾವಿಯಾಗಿ ಧರ್ಮದ ನೆಲೆಯನ್ನು ಕಂಡುಕೊಂಡು, ಅನುಪಮ ಪ್ರತಿಭೆಯಿಂದ ಅತ್ಯಂತ ಹೃದಯಂಗಮವಾದ ವಚನರಚನೆಯನ್ನು ಮಾಡಿ 'ಆದ್ಯರು' ಹಾಕಿಕೊಟ್ಟ ವಚನಸಾಹಿತ್ಯ ಪರಂಪರೆಯನ್ನು ಉದಿತೋದಿತ ವಾಗಿಸಿ ಕನ್ನಡ ಸಾಹಿತ್ಯಸಂಪತ್ತನ್ನು ಹೆಚ್ಚಿಸಿದ ಮಹಾಮಹಿಮ.

ಬಸವಣ್ಣನ ವಚನಗಳು ಮತಸಾಹಿತ್ಯಗಳ ರಸಪಾಕ. ಕೆಲವೆಡೆ ಅನು ಭಾವಿ ಬಸವಣ್ಣನು ನುಡಿಯುವಾಗ ವಚನವು ಕಾವ್ಯಮಯವಾಗಿ ನಲಿನಲಿದು ಭಾವುಕನ ಹೃದಯವನ್ನು ತುಂಬುವುದು. ಬಸವಣ್ಣನ ವಚನಾಮೃತವನ್ನು ಒಂದಿಷ್ಟಾದರೂ ಸವಿಯದ ಕನ್ನಡಿಗನಾರೂ ಇರಲಾರನೆಂದರೆ ತಪ್ಪಾಗದು.

ಭಕ್ತಿ, ಜ್ಞಾನ, ವೈರಾಗ್ಯಪರವಾದ ಈ ವಚನಗಳಲ್ಲಿ ಚಂಪೂಕಾವ್ಯಗಳ ಕ್ಲಿಷ್ಟತೆಯಿರುವುದಿಲ್ಲ ; ಸುಲಭವಾದ, ಲಲಿತವಾದ, ಸುಂದರವಾದ, ತಿಳಿಯಾದ ಕನ್ನಡದ ಶಕ್ತಿಯನ್ನು ಅವುಗಳಲ್ಲಿ ಸಮೀಕ್ಷಿಸಬಹುದು. ದೃಷ್ಟಾಂತಗಳೆಲ್ಲವೂ ನಿತ್ಯಜೀವನದಲ್ಲಿ ಕಂಡುಬರುವಂಥವು.

ಷಟ್‌ಸ್ಥಲವಚನ, ಶಿಖಾರತ್ನವಚನ, ಕಾಲಜ್ಞಾನವಚನ ಎಂಬ ವಚನ ಗ್ರಂಥಗಳು ಆತನಿಂದ ರಚಿತವಾಗಿವೆ. ಎಲ್ಲ ಬಸವೇಶ್ವರ ವಚನಗಳೂ ಕೂಡಲ ಸಂಗಮನಿಗೆ ಅಂಕಿತವಾಗಿವೆ. ಆ ರತ್ನರಾಶಿಯಿಂದ ಕೆಲವು :

(೧) ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ, ಚಂದ್ರ ಕುಂದೆ ಕುಂದು ವುದಯ್ಯಾ ! ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತೆ ? ಅಂಬುಧಿಯ ಮುನಿ ಆಪೋಷಣವ ಕೊಂಬಲ್ಲಿ ಚಂದ್ರಮನಡ್ಡಬಂದನೆ ? ಆರಿಗಾರು ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ, ಜಗದ ನಂಟ ನೀನೇ, ಅಯ್ಯಾ ಕೂಡಲಸಂಗಮದೇವ !

—ಲೋಕದ ರೀತಿಯಿದಲ್ಲವೆ ?

(೨) ನೀನೊಲಿದರೆ ಕೊರಡು ಕೊನರುವುದಯ್ಯಾ, ನೀನೊಲಿದರೆ ಬರಡು ಹಯನಹುದಯ್ಯಾ, ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ, ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲ್ಲಿಪ್ಪುವು ಕೂಡಲಸಂಗಮದೇವಾ.

—ಇದು 'ವಚನಗೀತ'ವಲ್ಲವೆ ?

(೩) ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯ, ಅಘೋರ ತಪವ ಮಾಡಿದರೇನು ಅಂತರಂಗ ಆತ್ಮಶುದ್ಧವಿಲ್ಲದವರನೆಂತು ಮೆಚ್ಚುವನಯ್ಯ ಕೂಡಲ ಸಂಗಮ ದೇವಾ ?

(೪) ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲಸಂಗಮ ದೇವಾ.

—ಎಂಥ ಅನುಭವದ ಸತ್ಯ !

(೫) ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲಸಂಗಮನೊಲಿಸುವಪರಿ.

—ಎಷ್ಟು ಉಚಿತವಾದ ಸುಲಭ ಮಾತಿನಲ್ಲಿ ಕರಣಶುದ್ಧಿಯನ್ನು ತಿಳಿಸಿ ಅದೇ ದೇವರಿಗೆ ಪ್ರೀತಿ ಎನ್ನುತ್ತಾನೆ.

(೬) ದಯವಿಲ್ಲದ ಧರ್ಮವಾವುದಯ್ಯ ? ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯಾ, ಕೂಡಲಸಂಗಮನಂತಲ್ಲದೊಲ್ಲನಯ್ಯಾ.

ಇಂಥ ಪ್ರತಿಯೊಂದು ಮಾತೂ ಅನುಭವದ ನವನೀತವಲ್ಲದೆ ಮತ್ತೇನು ?

## (iv) ಅಕ್ಕಮಹಾದೇವಿ (೧೧೬೦)

ಸುಮಾರು ಎಂಟು ಶತಮಾನಗಳ ಹಿಂದೆ ಬಸವಣ್ಣನ ಸಮಕಾಲೀನಳಾ

ಅಕ್ಕಮಹಾದೇವಿ (ಮಹಾದೇವಿಯಕ್ಕ) ಎಂಬ ಹಿರಿಯ ಶಿವಶರಣೆ ಕನ್ನಡ ನಂದಾ ದೀಪವನ್ನು ಮತ್ತಷ್ಟು ಬೆಳಗಿಸಿದಳು. ಆ ಪುಣ್ಯತಾಯಿಯ ಜೀವನದ ವಿಷಯ ವಾಗಿ ಅನೇಕ ಭಿನ್ನಾಭಿಪ್ರಾಯಗಳಿವೆ. ಆದರೆ ಅವಳ ಅಗಾಧವಾದ ಭಕ್ತಿ, ವೈರಾಗ್ಯ ಮತ್ತು ಅನುಭವ ಇವನ್ನು ಕುರಿತು ಎಲ್ಲರೂ ಒಂದೇ ಅಭಿಪ್ರಾಯ ದಿಂದ ಹೊಗಳುವರು. ಅವಳ ಇಷ್ಟದೇವತೆ ಚೆನ್ನಮಲ್ಲಿಕಾರ್ಜುನಸ್ವಾಮಿ. ಪ್ರಭುದೇವ ಬಸವೇಶ್ವರರ ಪ್ರಭಾವ ಈ ಮಹಾಮಹಿಮಳ ಮೇಲೆ ಬಹಳ ಪರಿಣಾಮ ಮಾಡಿರಬೇಕು. ಅಕ್ಕನ ಕೆಲವು ವಚನಗಳು ಕನ್ನಡದ ಆಣಿ ಮುತ್ತುಗಳು—

(೧) ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ, ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ, ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ, ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ ಲೋಕ ದೊಳಗೆ ಪುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ ಮನದಲಿ ಕೋಪವ ತಾಳದೆ ಸಮಾಧಾನಿ ಯಾಗಿರಬೇಕು.

ಸ್ಥಿತಪ್ರಜ್ಞನಾಗಬೇಕೆಂಬುದನ್ನು ಲೋಕದಲ್ಲಿ ಕಾಣುವ ದೃಷ್ಟಾಂತಗಳ ಮೂಲಕ ಸಾಧಿಸಿದ ರೀತಿ ಎಷ್ಟು ಸುಲಭವಾಗಿ ಮನಸ್ಸನ್ನು ಒಲಿಸುವುದು.

(೨) ಅಳಿಸಂಕುಲವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮ ನಿಮ್ಮನೆಲ್ಲರನು ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ.

—ಅಕ್ಕನು ಸಂಸ್ಕಾರದ ಹಿನ್ನೆಲೆಯಲ್ಲಿ ಭಕ್ತ್ಯಾವೇಶದಿಂದ ಹೀಗೆ ಹಾಡು ವಳು. ತುಂಬ ಸುಂದರವಾಗಿದೆ.

(೩) ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ ? ತಂದು ಸುವರ್ಣವ ಕಡಿದೊರೆದೊಡೆ ಬೆಂದು ಕಳಂಕ ಹಿಡಿದಿತ್ತೆ ? ಸಂದು ಸಂದು ಕಡಿದು ಕಬ್ಬನು ಗಾಣದಲ್ಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದನೆಂದು ಸವಿಯ ಬಿಟ್ಟಿತ್ತೆ ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ ? ಎನ್ನ ತಂದೆ ಚೆನ್ನಮಲ್ಲಿಕಾರ್ಜುನ ದೇವಯ್ಯ ಕೊಂದೊಡೆ ಶರಣೆಂಬುದು ಮಾಣೆ.

ಜೀವನದ ಯಾತನೆ ಪಶ್ಚಾತ್ತಾಪಗಳ ತಾತ್ವಿಕ ವಿಚಾರಪೂರ್ವಕವಾದ ಈ ಸುಂದರ ವಚನದಲ್ಲಿ ಅಕ್ಕಮಹಾದೇವಿ ಬಳಸಿರುವ ಸಹಜವಾದ ನುಡಿಗಟ್ಟುಗಳ ಶಕ್ತಿಯನ್ನು ಸಮೀಕ್ಷಿಸಬಹುದು.

## (v) ಚೆನ್ನಬಸವ (೧೧೬೦)

ಬಸವೇಶ್ವರನ ಸೋದರಳಿಯನಾದ ಚೆನ್ನಬಸವನು ಬಿಜ್ಜಳರಾಯನ (೧೧೫೬–೧೧೬೭) ಕೃಪೆಗೆ ಪಾತ್ರನಾಗಿದ್ದಂತೆ ತಿಳಿದುಬಂದಿದೆ. ಸೊನ್ನಲಿಗೆಯ ಸಿದ್ಧರಾಮನಿಗೆ ದೀಕ್ಷಾಗುರುವಾಗಿರಬಹುದು. ವಿರೂಪಾಕ್ಷಪಂಡಿತನ ಚೆನ್ನ ಬಸವಪುರಾಣದಲ್ಲಿ ಇವನ ವಿಷಯವಾಗಿ ಉಲ್ಲೇಖವಾಗಿರುತ್ತದೆ. ದೊಡ್ಡ ಜ್ಞಾನಿಯಾಗಿ ಷಟ್‌ಸ್ಥಲವಚನ, ಕರಣಹಸುಗೆ, ಮಿಶ್ರಾರ್ಪಣ, ಕಾಲಜ್ಞಾನ ಇತ್ಯಾದಿ ಗ್ರಂಥಗಳನ್ನು ಬರೆದಿದ್ದಾನೆ. ವಚನಗಳು ಪ್ರಾಯಿಕವಾಗಿ ಕೂಡಲ ಚೆನ್ನಸಂಗಮದೇವ ಎಂಬುದಾಗಿ ಅಂಕಿತವಾಗಿವೆ. ಇವನ ವಚನಗಳಲ್ಲಿ ವೀರ ಶೈವ ಪಾರಿಭಾಷಿಕ ಶಬ್ದಗಳು ಸ್ವಲ್ಪ ಹೆಚ್ಚಿನಲ್ಲಿ ಬಳಕೆಯಾಗಿವೆ ; ಬಸವಣ್ಣನಷ್ಟು ಸುಂದರವಾದ ಕನ್ನಡ ಶೈಲಿಯೂ ಇರುವುದಿಲ್ಲ ; ಆದರೂ ಶಕ್ತಿಯುತವಾಗಿವೆ. ಚೆನ್ನಬಸವನ ವಚನಗಳಿಗೆ ಉದಾಹರಣೆಗಳು :

(೧) ಒಡಲುಗೊಂಡು ಒಡಲುಮಿಡಿಯದೆ ಒಡಲಿಲ್ಲದ ನಿಜವ ಬೆರಸಲಪ್ಪೊ.

(೨) ಅಯ್ಯಾ ತೊತ್ತು ಲಕ್ಷಣವಿರಲು ಸಾಣ್ಯವನುಡಿಸಿ ನವರತ್ನಾಭರಣಂಗಳಂ ತೊಡಿಸಿ ದಂಡಿಗೆಯನೇಱಿಸಲು 'ಶಂಕರಸ್ಯ ಯಥಾ ಗೌರೀ' ಎನಿಸಿಕೊಳ್ಳಬಲ್ಲಳೆ ?

'ಕರಣಹಸುಗೆ' ಎಂಬ ಗದ್ಯಗ್ರಂಥದಲ್ಲಿ ವೇದಾಂತದಲ್ಲಿ ಅನೇಕ ವಿಷಯ ಗಳನ್ನು ವಿವರಿಸಿದ್ದಾನೆ ; ಬಹಳ ಮುಂದಟ್ಟಾಗುವಂಥ ರೀತಿಯಲ್ಲಿ ಲೋಕಾನು ಭವದ ದೃಷ್ಟಾಂತಗಳನ್ನು ಕೊಡುತ್ತಾನೆ.

"ಇನ್ನು ಪೃಥ್ವೀ, ಸಲಿಲ, ಪಾವಕ, ಪವನ, ಅಂಬರ, ರವಿ, ಶಶಿ, ಆತ್ಮ ಎಂಬುವು ಅಷ್ಟ ಮೂರ್ತಿಯ ಮದಂಗಳು. ಇದಕ್ಕೆ ವಿವರ—ಪೃಥ್ವೀ ಮದವೆತ್ತಿದಲ್ಲಿ ತನುಗುಣ ಭರಿತನಾಗಿ ವಸ್ತ್ರಾಭರಣಾನುಲೇಪನ ತಾಂಬೂಲಮಂ ಬಯಸುತ್ತಿಪನು ; ಸಲಿಲಮದವೆತ್ತಿದಲ್ಲಿ ಸಂಸಾರ

ಭರಿತನಾಗಿ ಎನಗೆ ಬೇಕು, ಮನೆಗೆ ಬೇಕು, ಮಕ್ಕಳಿಗೆ ಬೇಕೆನ್ನುತಿಹನು ; ಪಾವಕಮದವೆತ್ತಿದಲ್ಲಿ ಕಾಮರಸಭರಿತನಾಗಿ ಕರಸಬೇಕು, ನೋಡಬೇಕು, ನುಡಿಸಬೇಕು, ಆಲಿಂಗಿಸಬೇಕು ಎನ್ನುತಿಹನು....ಆತ್ಮಮದವೆತ್ತಿದಲ್ಲಿ ಅಹಂಕಾರಭರಿತನಾಗಿ ಎನ್ನಿಂದ ಒಳ್ಳಿದರಿಲ್ಲ, ಎನಗೆ ಇನ್ನಾರು ಇದಿರಿಲ್ಲವೆಂದು ಅಹಂಭಾವದಿಂದ ಅಹಂಕರಿಸುತ್ತಿಹನು. ಇಂತಿವು ಅಷ್ಟಮದಂಗಳು".

## (vi) ಸಿದ್ಧರಾಮ (ಸು. ೧೧೬೦)

ಪ್ರಸಿದ್ಧ ವಚನಕಾರರ ಸಾಲಿನವನಾದ ಸಿದ್ಧರಾಮನು ಪ್ರಭುದೇವ ಚೆನ್ನಬಸವಾದಿ ವೀರಶೈವ ಮತಾಚಾರ್ಯರ ಪ್ರಭಾವಕ್ಕೊಳಗಾಗಿ ಪರಮಜ್ಞಾನಿ–ಭಕ್ತ–ವಿರಕ್ತನಾಗಿ ಸೊನ್ನಲಿಗೆಯಲ್ಲಿ (ಈಗಿನ ಶೋಲಾಪುರ) ಒಂದು ಕೆರೆಯನ್ನು ಕಟ್ಟಿಸಿ, ಲಿಂಗಪ್ರತಿಷ್ಠೆಮಾಡಿ, ಪ್ರತಿವಾದಿಗಳನ್ನು ಜಯಿಸಿ ತಾನು ಕಟ್ಟಿಸಿದ ಕೆರೆಯ ಮಧ್ಯದಲ್ಲಿ ಸಮಾಧಿಯನ್ನು ಮಾಡಿಸಿಕೊಂಡು ಅಲ್ಲಿಯೇ ಬಯಲಾದನು; ಇವನು ಅನುಭವಭಕ್ತಿಗಳ ರಸಘಟ್ಟಿಗಳಂತಿರುವ ವಚನಗಳನ್ನು 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ಅಂಕಿತದಿಂದ ರಚಿಸಿದ್ದಾನೆ.

ಇವುಗಳಲ್ಲಿ ವ್ಯಕ್ತಿತ್ವವುಂಟು ; ಸಹಜತೆ ಉಂಟು ; ಭಕ್ತಿಯ ಪರಾಕಾಷ್ಠೆಯುಂಟು ; ಸಾಹಿತ್ಯದ ಸೌಂದರ್ಯವುಂಟು.

'ಅನಂತಕೋಟಿ ದೇವರೆಲ್ಲರು ತಂಡತಂಡದಲ್ಲಿ ಪ್ರಣಾಮಂಗೆಯ್ಯಲು ಅವರ ಮಕುಟಸಂಘಟ್ಟರಜ ಉದುರಲಿಕ್ಕೆ ಅಲ್ಲಿ ರಜತಗಿರಿಗಳಾದುವು ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಮುಂದೆ.'

ಎಷ್ಟು ಸುಂದರವಾದ, ಸಹಜವಾದ ರೂಪಕವಿದು :

'ಸಂಸಾರವೆಂಬ ಸರ್ಪನ ಅಣಲೊಳಗಿಹೆನಯ್ಯಾ ; ಆವಾಗ ನುಂಗೀತೆಂದರಿಯೆ ; ಆವಾಗ ಉಗುಳೀತೆಂದರಿಯೆನಯ್ಯಾ ; ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ.'

ಎಂಥ ಅನುಭವದ ಸಾರವಿದು—

'ಕಾಯ ಧರಿಸಿದವ ನವನೀತ ರೋಮದಂತಿರಬೇಕು ; ಮುಕುರದಲ್ಲಿಯ ಪ್ರತಿಬಿಂಬದಂತಿರಬೇಕು ; ಬೆಟ್ಟದಲ್ಲಿಯ ಕಾಡುಗಿಚ್ಚಿನಂತಿರಬೇಕು ; ಆಷಾಢದಲ್ಲಿಯ ಚಂಡಮಾರುತನಂತಿರಬೇಕು.'

ಇವಲ್ಲದೆ ಮಿಶ್ರಸ್ತೋತ್ರತ್ರಿವಿಧಿ, ಬಸವಸ್ತೋತ್ರತ್ರಿವಿಧಿ, ಅಷ್ಟಾವರಣಸ್ತೋತ್ರತ್ರಿವಿಧಿ ಇತ್ಯಾದಿ ಪುಟ್ಟ ಗ್ರಂಥಗಳನ್ನು ರಚಿಸಿದ್ದಾನೆ. ಆ ಪದ್ಯಗಳಿಂದ ಒಂದು ಉದಾಹರಣೆ :

ಶಿವಭಕ್ತಿ ಶರಧಿಯಲಿ ನೆಲೆಗೊಳಿಸಿದಾತ ಗುರು !
ಪರಿಕಿಸಿಯೆ ಭವವ ಹಱಿದಾತ ಗುರುವೈ !
ಶ್ರೀ ಗುರುವೆ ಎಂಬ ನಾಮಾಕ್ಷರತ್ರಯದಲ್ಲಿ !
ಆನು ಪ್ರಜ್ವಲಿತನೈ ಯೋಗಿನಾಥ (ಅಷ್ಟಾವರಣ ತ್ರಿವಿಧಿ).

ಎಷ್ಟು ಹೃದಯಂಗಮವಾಗಿ ಪದ್ಯರೂಪದ 'ವಚನ'ದಲ್ಲಿ ಗುರುಮಹಿಮೆ ಹಾಡಲ್ಪಟ್ಟದೆ.

# ೧೦. ನಡುಗನ್ನಡ ಮಹಾಕವಿಗಳು

## (i) ಹರಿಹರ

ಪಂಪನಂಥ ಪ್ರಾಚೀನ ಕವಿಗಳು ರಗಳೆಯನ್ನು ಹೆಸರಿಗೆ ಮಾತ್ರ ಬಳಸಿದರು. ಅವರೆಲ್ಲರೂ ಚಂಪೂಕಾವ್ಯಕ್ಕೆ ಒಪ್ಪಿದ ವರ್ಣವೃತ್ತಗಳಿಗೆ ಮಾರುಹೋದರು. ನಿರೂಪಣೆಗೆ ಹೆಚ್ಚಿನ ಸ್ವಾತಂತ್ರ್ಯ ಅವಕಾಶಗಳನ್ನು ಕೊಡುವ ಕನ್ನಡ ಕವಿತೆಗೆ (ಅದರಲ್ಲೂ ಹಾಡುಗಬ್ಬಕ್ಕೆ) ಹೆಚ್ಚಾಗಿ ಹೊಂದಿಕೊಳ್ಳುವ ರಗಳೆಯನ್ನು ವಿಪುಲವಾಗಿ ಪ್ರಯೋಗಿಸಿ ಕೃತಕೃತ್ಯನಾದವನೆಂದರೆ ಹರಿಹರನು (೧೧ಽಶ). ಆತನ 'ಶಿವಗಣರ ರಗಳೆಗಳು' ಕನ್ನಡ ವಾಙ್ಮಯದ ಅಮರ ಕೃತಿಗಳು. ಅವು ಸುಮಾರು ೧೨೦೦ ಇರಬಹುದು. ಅವುಗಳಲ್ಲಿ 'ಬಸವರಾಜದೇವರ ರಗಳೆ' ಅತ್ಯುತ್ತಮವಾದ ಭಕ್ತಿಸಾಂದ್ರತೆಯ ಪ್ರತೀಕ. ಅದೊಂದು ಸುಂದರಕಾವ್ಯ. ಶೈಲಿ ಎಲ್ಲೆಡೆ ಮೃದುಮಧುರ ಗಂಭೀರವಾಗಿ ಓಡುತ್ತಿದೆ. ಈ ಗ್ರಂಥದಲ್ಲಿ

ಬಸವೇಶ್ವರನ ಧಾರ್ಮಿಕ ಜೀವನವನ್ನು ವ್ಯಕ್ತಿತ್ವವು ಒಡಮೂಡಿ ಬರುವಂತೆ ಸುಲಲಿತವಾಗಿ ವರ್ಣಿಸಿರುವನು. ಬಸವೇಶ್ವರನು ಸಂಗಮೇಶ್ವರನ ಪೂಜೆಯನ್ನು ಮಾಡಿದನೆಂತು—

x x x

ಪೂಗೊಯ್ದು ನಿಮಿಷವದು ಕಲ್ಪಕೋಟಿಗಳಾಗೆ
ರಾಗದಿಂದರ್ಚಿಸುವ ಕಲ್ಪಂ ನಿಮಿಷವಾಗೆ
ಕೊಡುವಗ್ಘವಣಿಧಾರೆ ಮಟೆಯಾಗೆ ಹೆದಱುತಂ
ನಡುವೆ ಹೂವಡ್ಡಮಿರೆ ನಡುಗಿ ಕೆಲಸಾರ್ಚುತಂ

x x x

ಪುಳಕಕ್ಕೆ ಪುರುಡಿಸುತೆ ಸೋಂಕಿ ಸುಖಿಯಾಗುತಂ
ಇಳಿವಶ್ರುಜಲಕೆ ಪುರುಡಿಸುತೆ ನಡೆನೋಡುತುಂ
ಗದ್ಗದವನೊಟ್ಟಿರಿಸಿ ಪೊಗಳೆ ಲಟಲಟಿಸುವಂ
ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ (೧೫೦)

ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ
ಭವಪೂಜೆ ಬಲಿದು ಪುರುಷಾಕಾರವಾದಂತೆ
ಲಿಂಗ ಜಂಗಮವೊ ಮೇಣ್ ಜಂಗಮನೆ ಲಿಂಗವೋ
ಲಿಂಗಜಂಗಮವೆರಡು ಇಳೆಯೊಳು ವಿಭೇದವೋ
ಎಂಬಂತೆ ಸಾತ್ವಿಕಪ್ರಭು ಪೂಜಿಸುತ್ತುಮಿರೆ
ಅಂಬಕತ್ರಯನ ಪುತ್ರಂ ಪೂಜಿಸುತ್ತುಮಿರೆ
ಬಸವಣ್ಣನಪ್ರತಿಮನೊಲಿದು ಪೂಜಿಸುತಮಿರೆ
ಬಸವರಾಜಂ ಮೆಚ್ಚಿ ಪೂಜಿಸುತಿರೆಯಿರೆ (೧೫೮)

ಭಕ್ತಿ ಎಳೆಎಳೆಯಾಗಿ ಇಲ್ಲಿ ಬಂದಿದೆ; ತುಂಡಾಗದ ಎಳೆಗಳು; ಮಾಸದ ಬಣ್ಣದ ಎಳೆಗಳು.

## (ii) ರಾಘವಾಂಕ (೧೨೨೫)

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಹರಿಹರನು 'ರಗಳೆಗಳ' ಮೂಲಕ ಎಬ್ಬಿಸಿದ

ಕ್ರಾಂತಿಯನ್ನು ಅವನ ಸೋದರಳಿಯನಾದ ರಾಘವಾಂಕನು 'ಷಟ್ಪದಿಗಳ' ಮೂಲಕ ಮುಂದುವರಿಸಿದನು. ಇವರೀರ್ವರ ನೂತನ ಪ್ರಯೋಗಗಳು ಕನ್ನಡಕ್ಕೆ ಪುಷ್ಟಿತುಷ್ಟಿಗಳನ್ನು ತಂದವು. ಷಟ್ಪದಿಛಂದಸ್ಸು ನಡುಗನ್ನಡದ ಚೌಕಟ್ಟಿಗೆ ಸುಂದರವಾಗಿ ಒಪ್ಪುತ್ತದೆ ಎಂಬುದನ್ನು ಕಂಡುಕೊಂಡ ಆದ್ಯ ಸಂಶೋಧಕ ಕವಿಪುಂಗವನವನು. ಮುಂದೆ ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಸ ಛಂದಸ್ಸುಗಳ ಪ್ರಯೋಗ ಪ್ರಚಾರವಾಗುವ ತನಕ, ರಾಘವಾಂಕನ ಷಟ್ಪದಿ ಪ್ರಯೋಗವೇ ವಿವಿಧಾಕಾರಗಳಲ್ಲಿ ಪ್ರಸಿದ್ಧ ಕನ್ನಡ ಕವಿಗಳಿಗೆ ಛಂದೋಮಾರ್ಗ ದರ್ಶನ ಮಾಡಿತು. ಈ ಪರಂಪರೆಯಲ್ಲಿ ಬಂದವರಲ್ಲಿ ಭೀಮಕವಿ (೧೩೬೯), ಕುಮಾರವ್ಯಾಸ (೧೪೩೦), ಚಾಮರಸ (೧೪೩೦), ಗುಬ್ಬಿಯ ಮಲ್ಲಣಾರ್ಯ (೧೪೭೫), ಕುಮಾರ ವಾಲ್ಮೀಕಿ (೧೫೦೦), ತಿಮ್ಮಣ್ಣ ಕವಿ (೧೫೧೦), ಚಾಟುವಿಠಲ ನಾಥ (೧೫೩೦), ವಿರೂಪಾಕ್ಷಪಂಡಿತ (೧೫೮೪), ಲಕ್ಷ್ಮೀಶ (೧೭೦೦) ಮೊದಲಾದವ ರನ್ನು ಸ್ಮರಿಸಬಹುದು. ಈ ಪ್ರಮುಖರಲ್ಲಿ ಕೆಲವರ ಕೃತಿಗಳನ್ನು ಮಾತ್ರ ಇಲ್ಲಿ ಒಂದಿಷ್ಟು ಸಮೀಕ್ಷಿಸಲಾಗಿದೆ.

ರಾಘವಾಂಕನು ಬರೆದ ಗ್ರಂಥಗಳಲ್ಲಿ ಹರಿಶ್ಚಂದ್ರಕಾವ್ಯ, ಸಿದ್ಧರಾಮ ಪುರಾಣ, ಸೋಮನಾಥಚರಿತೆ, ವೀರೇಶಚರಿತೆ ಎಂಬ ನಾಲ್ಕು ಪ್ರಕಟಿತವಾಗಿವೆ. ಇವುಗಳೆಲ್ಲವೂ ಅತ್ಯುತ್ತಮ ಕಾವ್ಯಗಳು. ಆದರೂ ಹರಿಶ್ಚಂದ್ರ ಕಾವ್ಯವು ಅವುಗಳಲ್ಲಿ ಹೆಚ್ಚು ಜನಾದರಣೀಯವಾಗಿದೆ. ರಾಘವಾಂಕನಿಗೆ ಸಂಸ್ಕೃತ ದಲ್ಲಿಯೂ ವಿಶೇಷ ಪಾಂಡಿತ್ಯವಿದ್ದು 'ಉಭಯಕವಿಕಮಲರವಿ' ಎನಿಸಿಕೊಂಡನು. ಅವನ ಶೈಲಿಯಲ್ಲಿ ಮಾರ್ಗದೇಸಿಗಳ ಸುವರ್ಣಸಮ್ಮಿಳಿತವು ಮನಮೋಹಕ ವಾಗಿದೆ. ಅಲ್ಲಲ್ಲಿ ಸಂಭಾಷಣಾಮಟ್ಟನ್ನು ಬಳಸುವುದು ಅವನ ನಿರೂಪಣ ಕ್ರಮದ ಒಂದು ಅದ್ವಿತೀಯ ವೈಶಿಷ್ಟ್ಯ. ಇದರಿಂದ ಕೃತಿಯಲ್ಲಿ ನಾಟಕೀಯ ಗುಣ ಪ್ರಕಾಶವಾಗಿದೆ. ಅವನಿಗೆ 'ನಾಣ್ಣುಡಿಗಳ'ನ್ನು ಸಂದರ್ಭೋಚಿತವಾಗಿ ಪ್ರಯೋಗಿಸಿ ಪರಿಣಾಮಕ್ಕೆ ಪುಷ್ಟಿಕೊಡುವ ಮತ್ತೊಂದು ಸಾಮರ್ಥ್ಯವಿತ್ತು. ರಾಘವಾಂಕನು ಪಾತ್ರನಿರ್ಮಾಣದಲ್ಲಿಯೂ ಅತ್ಯಂತ ಯಶಸ್ವಿಯಾಗಿ 'ಕರ್ಮ ಯೋಗಿ ಸಿದ್ಧರಾಮ', 'ರೌದ್ರಮೂರ್ತಿ ವೀರೇಶ', 'ಭಕ್ತಶಿರೋಮಣಿ ಆದಯ್ಯ', 'ಸತ್ಯಮೂರ್ತಿ ಹರಿಶ್ಚಂದ್ರ', 'ಸಹಧರ್ಮಿಣಿ ಚಂದ್ರಮತಿ', 'ವಡಬಾಗ್ನಿ

ವಿಶ್ವಾಮಿತ್ರ' ಮೊದಲಾದ ಅಮರ ಚಿತ್ರಗಳನ್ನು ಕನ್ನಡ ಸಾಹಿತ್ಯಕ್ಕೆ ಕಾಣಿಕೆ ಮಾಡಿದ್ದಾನೆ.

ಪ್ರಸ್ತುತದಲ್ಲಿ ಹರಿಶ್ಚಂದ್ರಕಾವ್ಯದಿಂದ ಕೆಲವು ಉತ್ತಮ ಭಾಗಗಳನ್ನು ಗಮನಿಸೋಣ. ಇದರಲ್ಲಿ ೧೪ ಸ್ಥಲಗಳಿವೆ. "ಹರನೆಂಬುದೇ ಸತ್ಯ' 'ಸತ್ಯವೆಂಬುದೇ ಹರನು' (XIV–೩೩) ಎಂಬ ಶ್ರುತಿವಾಕ್ಯವನ್ನು ಪ್ರತಿಪಾದಿಸಿದ ಕಾವ್ಯವಿದು.

ಶಿವನ ಪಾರಮ್ಯವನ್ನು ಕೊಂಡಾಡುವ ಹಂಪೆಯ ವಿರೂಪಾಕ್ಷಸ್ತುತಿಯಿಂದ ಕೃತಿಯನ್ನು ಆರಂಭಿಸುತ್ತಾನೆ. ಉತ್ಕಟಶಿವಭಕ್ತಿ :

ಶ್ರೀಪತಿಗೆ ಸೊಬಗನುಡುಪತಿಗೆ ಕಾಂತಿಯನು ವಾ
ಣೀಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ ।
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯ ಮಾಳ್ಕೆ ಸಂತೋಷದಿಂದ ॥

(I–೧)

'ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ, ಪರರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ' (I–೧೬), ಎಂಬುದಾಗಿ ಪ್ರತಿಜ್ಞೆ ಮಾಡಿ, 'ರಸದೊಳರ್ಥದೊಳು, ಭಾವದೊಳು ಅಲಂಕಾರದೊಳು ಪೊಸರೀತಿಯೊಳು, ಬಂಧದೊಳು, ಲಕ್ಷಣದೊಳು, ಪದವಿಸರದೊಳು ತಪ್ಪುಳ್ಳೊಡಿದಱೊಳಗೆ ಪರರು ಕೈಯಿಕ್ಕದಂತೆ ಸಸಿನೆ ಮಾಡುವುದು, ತಿದ್ದುವುದು, ಕೊಂಡಾಡಿ ಲಾಲಿಸಿ ಕೇಳ್ವುದು ಎಲ್ಲಾ ಶಿವಾರ್ಚಕರು, ನಾಂ ನಿಮ್ಮ ಶಿಶು' (I–೨೦) ಎಂಬ ವಿನಯಸಂಪನ್ನತೆಯ ಮಾತನ್ನಾಡುತ್ತಾನೆ. ಇಲ್ಲಿ ಕಾವ್ಯಮಾರ್ಗದಲ್ಲಿ ತಾನೊಂದು ಹೊಸ ರೀತಿಯಲ್ಲಿ ಅಡಿಯಿಡುತ್ತೇನೆಂಬುದನ್ನು ಬಿನ್ನವಿಸಿದಂತಿದೆ. ಮುಂದುವರಿಯುತ್ತಾ ಸುಂದರ ರೂಪಕದಲ್ಲಿ ತನ್ನ 'ಪೊಸ ಕಾವ್ಯಕನ್ನಿಕೆ'ಯನ್ನು ವಿರೂಪಾಕ್ಷಂಗೆ ಕೊಟ್ಟು 'ಕೃತಕೃತ್ಯನಾದನೆಂದನು.

ರಸಜೀವ ಭಾವವೊಡಲರ್ಥವವಯವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಿಗೆಯು ತ
ವೆ ಸುಲಕ್ಷಣವೆ ಲಕ್ಷಣ ವಿವಳ ಪದನ್ಯಾಸ ನಡೆ ರೀತಿ ಸುಕುಮಾರತೆ।
ರಸಿಕತನ ಸುಟಿ ಸುಖಂ ನಿಳಯವಂತಪ್ಪಯಿಾ
ಪೊಸ ಕಾವ್ಯಕನ್ನಿಕೆಯ ಪಡೆದು ಪಂಪಾಂಬಿಕೆಯ
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ ಕೃತಕೃತ್ಯನೋ॥
(I–೨೪)

ಕೇಳುವ ರಸಿಕರಿಲ್ಲದೊಡೆ ಕವಿಯಧಿಕನಾಗಿದ್ದರೇನು ಫಲ ಎಂಬುದನ್ನು ಮನೋಹರವಾಗಿ ಹೇಳಿದ್ದಾನೆ :

ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ ಗಾ
ನವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ
........ಪೊಸ ಪೂಮಾಲೆಯಿರ್ದೊಡೇನು।
ತವೆ ಮುಡಿವರಿಲ್ಲದೊಡೆ ನಾನಾ ಕಳಾನ್ವಿತರ
ನಿವಹವಿದ್ದೇನಾ ಕಲಾಪ್ರೌಢರಿಲ್ಲದೊಡೆ
ಇವನೆಯ್ದೆ ಬಲ್ಲವನಪೂರ್ವ ಮೇಣುಳ್ಳಡವ ದೇವನಲ್ಲದೆ ಮನುಜನೆ॥
(I–೨)

ಇವನ್ನು ಚೆನ್ನಾಗಿ ಬಲ್ಲವರು ದುರ್ಲಭವಂತೆ ; ಒಂದು ವೇಳೆ ದೊರೆತರೆ ಅವನು ಮನುಜನಲ್ಲ, ದೇವನಂತೆ. ಎಂಥ ನೂತನ ವಿಮರ್ಶೆಯಿದು. ಇದಲ್ಲದೆ ಇನ್ನೂ ಅನೇಕ ವಿಮರ್ಶೆಯ ಮಾತನ್ನು ನವೀನವಾಗಿ ರಾಘವಾಂಕ ಹೇಳಿರುತ್ತಾನೆ.

ಸಂಭಾಷಣೆಯನ್ನು ಅಲ್ಲಲ್ಲಿ ಉಪಯೋಗಿಸಿರುವುದರಿಂದ ರಾಘವಾಂಕನ ಕಥನಕೌಶಲಕ್ಕೆ ಕಳೆ ಕಟ್ಟಿದಂತಾಗಿದೆ. ತ್ವರಿತಗತಿಯಿಂದ ಕಥೆ ಸಾಗುತ್ತದೆ. ಓದುಗರ ಕುತೂಹಲವನ್ನು ಕೆರಳಿಸುತ್ತದೆ. ಪಾತ್ರಗಳು ಸಹಜತೆಯಿಂದ ಸಜೀವ ರಾಗಿ ಕಣ್ಣಮುಂದೆ ನಿಲ್ಲುತ್ತಾರೆ.

ವಸಿಷ್ಠವಿಶ್ವಾಮಿತ್ರರ ಹೋರಾಟ—ಹರಿಶ್ಚಂದ್ರನು ಸುಳ್ಳುಗಾರನೆಂಬುದನ್ನು ತೋರಿಸುವ ಪ್ರತಿಜ್ಞೆಯನ್ನು ವಿಶ್ವಾಮಿತ್ರ ಮಾಡಿದೊಡನೆ ಅವರೊಳಗೆ ನಡೆಯುವ ಸಂಭಾಷಣೆಯಿದು—

ಎಂದು ಭೂವರನಂ ಪರೀಕ್ಷಿಸುವೆ—ಎನ್ನ ಮನ
ಬಂದ ದಿನಂ—ಎನಿತು ಸೂಳು—ಆತನೀಧರೆಯೊಳಿ
ಪ್ಪಂದು ತನಕ—ಆವಾವ ಪರಿಯೊಳು—ಸಹಸ್ರ ವಿಧದೊಳು—
ದಿಟವೆ—ದಿಟವೆಂದೆನೆ ।
ಹಿಂದುಗಳೆಯಲದೇಕೆ ನಡೆ—ಎನಲು—ನೀನಾಡು
ವಂದವನುವಾಗಿರದು—ಎನ್ನುತ್ತ ಕೌಶಿಕನಣಕ
ದಿಂದಾಡಲು—ಎಮ್ಮ ಕೂಡೆ ಇನಿತು ಅಣಕವೇಕೆ—ಎಂದು ವಾಸಿಷ್ಠ
ಮುನಿ ನುಡಿದನು ॥ (II–೨೮)

೭ನೆಯ ಸ್ಥಲದಲ್ಲಿ ಚಂಡಾಲ ಕನ್ನಿಕೆಯರಿಗೂ ಹರಿಶ್ಚಂದ್ರನಿಗೂ ನಡೆದ ಸಂಭಾಷಣೆಯು ಬಹಳ ಸ್ವಾರಸ್ಯವಾಗಿದೆ; ಚಮತ್ಕಾರವಾಗಿದೆ. ಇಂಥವನ್ನು ಗ್ರಂಥದ ಉದ್ದಕ್ಕೂ ಕಾಣಬಹುದು.

ವಿಶ್ವಾಮಿತ್ರನು ವಡಬಾಗ್ನಿಯಾದ ಚಿತ್ರವು ಭಯಂಕರವಾಗಿದೆ—

ವಡಬಾಗ್ನಿ ಜಡೆವೆತ್ತುದೋ ಸಿಡಿಲು ಹೊಸ ಭಸಿತ
ಮಿಡುಕಲಿತುದೋ ಕಾಡುಗಿಚ್ಚು ಹರಿಣಾಜಿನವ
ನುಡುಕಲಿತುದೋ ಪ್ರಳಯವಹ್ನಿ ತಪವೊತ್ತುದೊ ಭಾಳಲೋಚನನ
ಕೋಪ ।
ಕಡುಗಿ ಮುನಿಯಾಯ್ತೊ ಪೇಳೆನೆ ಕಣ್ಣ ಕಡೆ ತೋರ
ಗಿಡಿಗೆದಱೆ ಮೀಸೆಗೂದಲು ಹೊತ್ತಿ ಹೊಗೆಯು ಬಿಱು
ನುಡಿಗಳುರಿಯುಗುಳೆ ವಿಶ್ವಾಮಿತ್ರನುರವಣಿಸಿ ಬಂದನವನೀಶನೆಡೆಗೆ ॥
(XIII–೧)

ಹರಿಶ್ಚಂದ್ರನು ಪುರವನ್ನು ಬಿಟ್ಟು ಕಾನನಕ್ಕೆ ಹೊರಟುಹೋದ ದೃಶ್ಯವನ್ನು ರಾಘವಾಂಕನೇ ವರ್ಣಿಸಬೇಕು—

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿ ಪರಿವೃತ ಧರೆಯ ಸೊಬಗಜ್ಞಾತವಾಸಕ್ಕೆ ಪೋಗುತಿದೆಕೋ ।
ಧರೆಯ ದೀನಾನಾಥರಾನಂದವಡಗುತಿದೆ
ವರ ಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆ ದೋಢಾಗಿ ಬಂದು ಸಂಧಿಸಿ ನಿಂದ ಮಂದಿನೆಱೆ
ಮೊಱೆಯಿಟ್ಟುದು ॥ (IX–೧೧)

ಮಗನಾದ ಲೋಹಿತಾಶ್ವನು ಹಾವು ಕಡಿದು ಸತ್ತನು ; ಆಗ ಎಲ್ಲ ರೀತಿಯಲ್ಲಿ ಕಂಗೆಟ್ಟ ಚಂದ್ರಮತಿಯ ದುಃಖದ ಹೊನಲು ಕೋಡಿಯಾಗಿ ಹರಿಯುತ್ತಿರುವುದನ್ನು ರಾಘವಾಂಕನು ಮಂದಾನಿಲ ರಗಳೆಯಲ್ಲಿ ಚಿತ್ರಿಸಿದ್ದಾನೆ.

ಏವೇನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇೞಿದಿಯೆಲಾ ಎನ್ನನು ಸುಕುಮಾರಾ
ಕೊೞಿದಿಯೆಲಾ ಕೊರಲನು ಜಿತಮಾರಾ
ವನಿತೆಯನಾೞಡಿಗೊಂಡೆಯೆ ವಿಧಿಯೇ
ನಿನಗೀ ಪರಿಯಲಿ ಮಡಿವುದವಧಿಯೆ
ಶಿರದಲಿ ಬರೆದಕ್ಕರವೀ ಪರಿಯೇ
ಗರಳದ ಉರಿಯಲಿ ಒೞಗಿದೆ ಕಲಿಯೇ

x x x

ಆರ ಸಿರಿಯ ನೆಳಕೊಂಡನೊ ಮುನ್ನ
ಆರಳಲನು ಸೆಳೆಕೊಂಡನೊ ಮುನ್ನ
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ
ಎತ್ತಿದ ತೋಳನು ಕೆತ್ತಿದೆ ಮಗನೆ
ಹಾಡುವ ಬಾಯೊಳು ಮಣ್ಣನು ಹೊಯ್ದೆ
ನೋಡುವ ಕಣ್ಣೊಳು ಸುಣ್ಣವ ಹೊಯ್ದೆ
ಪಾಪಿಯೆನ್ನ ನೀನೊಮ್ಮೆಯು ನೋಡಾ
ಕೋಪವನುೞಿದೊಯ್ಯನೆ ಮಾತಾಡಾ
ನಾನಿದ್ದು ಹೆನಂಜದಿರೆಂದೆನ್ನಾ
ಏನುವನುಮ್ಮಳಿಸದಿರೆಂದೆನ್ನಾ
ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೆ
ತಂದೆತಾಯಿಗಗ್ನಿಯ ನೀ ಕೊಡದೆ
ಮುಂದೆ ಹೋಗಲಹುದೇ ಮನಗುಡದೆ ।

x x x

ಕರುಣಿಸು ಪಾಪಿಗೆ ಪಂಪಾಪತಿಯೇ
ಕರುಣೆಸನಾಥಗೆ ಕಾಶೀಪತಿಯೇ ॥ (XII)

## (iii) ಕುಮಾರವ್ಯಾಸ (೧೪೩೦)

೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ಕುಮಾರವ್ಯಾಸ ಚಾಮರಸ ರೆಂಬೀರ್ವರು ಮಹಾಕವಿಗಳು ಸಮಕಾಲೀನರಾಗಿ ವಿಜಯನಗರದ ಕರ್ಣಾಟಕ ರಮಾರಮಣರ ಕಾಲದ ಕನ್ನಡ ಸಾಹಿತ್ಯಕ್ಕೆ ವಿಶೇಷವಾದ ಖ್ಯಾತಿಯನ್ನು ತಮ್ಮ ಉತ್ತಮ ಕೃತಿಗಳಿಂದ ತಂದರು.

ಕುಮಾರವ್ಯಾಸನ ಕಾಲದ ವಿಚಾರವಾಗಿ ಹಾಗೂ ಮತದ ವಿಚಾರ ವಾಗಿ ವಾದಗಳು ಬಹಳ ತಲೆದೋರಿವೆಯಾದರೂ ಆತನ ಕೃತಿಮಹತ್ವದ ವಿಚಾರವಾಗಿ ಎಲ್ಲರೂ ಮುಕ್ತಕಂಠದಿಂದ ಪ್ರಶಂಸಿಸಿರುವರು. ಕುವೆಂಪು ಹೇಳಿರುವಂತೆ—

ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲಿ ಕುಣಿಯುವುದು ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು.

ಇದು ಭಾವುಕರೆಲ್ಲರ ಅನುಭವ ಎಂಬುದರಲ್ಲಿ ಸಂದೇಹವಿರಲಾರದು. ಕವಿಯೇ (ಪಂಚಮ ವೇದವೆನಿಸಿದ) ಈ ಭಾರತವು ಹೇಗೆ ಸರ್ವಗ್ರಾಹ್ಯವೆಂಬು ದನ್ನು ಯುಕ್ತಿಯುಕ್ತವಾಗಿ ಹೇಳಿ ಇದನ್ನು 'ಕಾವ್ಯಕ್ಕೆಲ್ಲ ಗುರು' ಎಂಬುದಾಗಿ ಗೌರವಿಸುತ್ತಾನೆ. ಇಲ್ಲಿ ಎಲ್ಲರಿಗೂ ಬೇಕಾದುದು ಇರುತ್ತದೆ. ಇದು ಅಕ್ಷರಶಃ ಸರಿ ; ಬರಿಯ ಹೊಗಳಿಕೆಯ ಮಾತಲ್ಲ :

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರಿಜನಕ್ಕೆ ಬುದ್ಧಿ ಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ॥ (I–೧–೧೯)

ಕುಮಾರವ್ಯಾಸನ ನಿಜವಾದ ಹೆಸರು ನಾರಣಪ್ಪ. ಗದಗು ಪ್ರಾಂತದ

ಕೋಳಿವಾಡ ಇವನ ಊರು. ಗದುಗಿನ ವೀರನಾರಾಯಣನು ಅವನ ಇಷ್ಟ ದೇವತೆ. ತಾನು ಬರಿಯ ಲಿಪಿಕಾರನೆಂಬುದಾಗಿಯೂ 'ವೀರನಾರಾಯಣನೆ ಕವಿ' ಎಂಬುದಾಗಿಯೂ ವಿನಯಭಕ್ತಿಗಳಿಂದ ಹೇಳುತ್ತಾನೆ. (I-೧-೬)

ಕವಿ ತನ್ನ ವಿಚಾರವಾಗಿ ಬೇರೆ ಏನನ್ನೂ ಹೇಳಿಕೊಂಡಿರುವುದಿಲ್ಲ. ವ್ಯಾಸ ಮಹಾಭಾರತದ ೧೮ ಪರ್ವಗಳಲ್ಲಿ ೧೦ನ್ನು ಮಾತ್ರ ಈತನು ಕನ್ನಡಕ್ಕೆ ಇಳಿಸಿರುವನು. ಆದರೆ ಇದು ವ್ಯಾಸಭಾರತದ ಪ್ರತಿಕೃತಿಯಲ್ಲ. ಅಪ್ರತಿಮ ವಾದ ಪ್ರತಿಭೆ ಸಹಜತೆಗಳಿಂದ ಇದೊಂದು ಸ್ವತಂತ್ರ ಮಹಾಕಾವ್ಯದಂತೆ ಸೊಗಯಿಸುವುದು.

ಕುಮಾರವ್ಯಾಸನು ಹಳಸಿದ ಕವಿಸಮಯಗಳನ್ನೇ ಆಶ್ರಯಿಸಿ ಬದುಕಿದ ಕವಿಯಲ್ಲ. 'ಕನ್ನಡದೇಸಿ'ಯನ್ನು ಕಾವ್ಯದ ಉದ್ದಕ್ಕೂ ತುಂಬಿದ್ದಾನೆ, ಅದು ನವೋನವವಾಗಿ ಉದಯವಾಗಿದೆ. ಕನ್ನಡ ನಾಡಿನ, ಕನ್ನಡ ಜನಜೀವನದ ಚಿತ್ರಗಳು ಅವನ ಕೃತಿಯಲ್ಲಿ ಅಮರವಾಗಿವೆ. ಸಹಜವಾದ ರೂಪಕಗಳಿಂದಲೇ ಅವನು ತನ್ನ ಕುಶಲಕರ್ಮವನ್ನೆಸಗುವನು. ಅವನನ್ನು ವಿಮರ್ಶಕರು 'ರೂಪಕ ಸಾಮ್ರಾಜ್ಯಚಕ್ರವರ್ತಿ' ಎಂಬುದಾಗಿ ಹೊಗಳಿರುವುದು ಸತ್ಯದ ಮಾತು. ಎಷ್ಟೋ ಮಾತುಗಳಲ್ಲಿ ವರ್ಣಿಸಿದರೂ ಸಾಧಿಸಲಾರದ ಫಲವನ್ನು ಒಂದು ಪುಟ್ಟ ರೂಪಕದಿಂದ ಸಾಧಿಸಿಬಿಡುವನು. ಇದು ಕುಮಾರವ್ಯಾಸನ ವೈಶಿಷ್ಟ್ಯ; 'ಭ್ರೂಲತೆಯ ಸುರಚಾಪ', 'ಉರುಕೇಶಾಳಿಗಳ ಕಾರ್ಮುಗಿಲು', 'ಮಾತಿನ ಗಾಳಿ', 'ರೋಷಜ್ವಾಲೆ', 'ಮೀಸೆಗಳು ಕುಣಿದವು', 'ಒಣಗುತಿದೆ ಕುರುವಂಶ ಲತೆ', 'ಕಾರುಣ್ಯವರ್ಷವನೊಣಗಲಲಿಸುರಿ', 'ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು', 'ಅಪಕೀರ್ತಿನಾರಿಯ ಸೆರಗ ಹಿಡಿದರು' ಮೊದಲಾದ ಮಾತುಗಳು ಆಯಾ ಸಂದರ್ಭಗಳಲ್ಲಿ ಕಾವ್ಯವನ್ನೇ ವಿದ್ಯುನ್ಮಯ ವಾಗಿ ಮಾಡುತ್ತವೆ.

ನವರಸಭರಿತವಾದ ಈ ಮಹಾಕಾವ್ಯದ ಎಲ್ಲ ರಸಸ್ಥಾನಗಳನ್ನು ಇಲ್ಲಿ ನಿರ್ದೇಶಿಸುವುದು ದುಸ್ಸಾಧ್ಯವಾಗಿದೆ. ಭಾರತದ ವೀರರ ಯುದ್ಧಗಳ ವರ್ಣನೆ ಗಳಲ್ಲಿ ಹರಿಯುವ ವೀರರಸದ ಸ್ರೋತವನ್ನೂ, ಉತ್ತರನ ಚಿತ್ರ, ದ್ರೌಪದಿಯ

ಸ್ವಯಂವರದಲ್ಲಿ ಬ್ರಾಹ್ಮಣ ವೇಷದಲ್ಲಿರುವ ಅರ್ಜುನನನ್ನು ಪರಿಹಾಸ ಮಾಡುವುದೇ ಮೊದಲಾದ ಹಾಸ್ಯರಸದ ಹೊನಲನ್ನೂ, ಕರ್ಣಾವಸಾನದಲ್ಲಿ ತುಂಬಿರುವ ಕರುಣರಸದ ಮಡುವನ್ನೂ ಈ ಸಂದರ್ಭದಲ್ಲಿ ನೆನೆದರೆ ಸಾಕು. ಇವು ಆತನು ಸೃಜಿಸಿದ ಅಸಂಖ್ಯಾತ ರಸಸ್ಥಾನಗಳ ಸ್ವಲ್ಪ ಪರಿಚಯವನ್ನಾದರೂ ಮಾಡಿಸುವುವು.

ಕುಮಾರವ್ಯಾಸನು ಪಾತ್ರರಚನೆಯಲ್ಲಿ ಸಾಫಲ್ಯತೆ ಪಡೆದಂತೆ ಹೆಚ್ಚು ಕವಿಗಳು ಪಡೆಯಲಿಲ್ಲ. ಆತನ ಕೃಷ್ಣ, ಕರ್ಣ, ಅರ್ಜುನ, ಭೀಮ, ದ್ರೌಪದಿ, ಅಭಿಮನ್ಯು, ಉತ್ತರ, ಭೀಷ್ಮ, ದುರ್ಯೋಧನ, ದ್ರೋಣ, ವಿದುರ— ಇವರುಗಳು ಚಿರಂಜೀವಿಗಳಾಗಿ ಕಲಿಯುಗಕ್ಕೆ ಬಂದಿರುವರು. ನಮ್ಮ ಮಧ್ಯೆ ಸಂಚರಿಸುವರು.

ಕುಮಾರವ್ಯಾಸನ ಪಾತ್ರಗಳಲ್ಲಿ ಶ್ರೀಕೃಷ್ಣನೇ ಕಥಾನಾಯಕನು. ಭಕ್ತಾಗ್ರಣಿ ಕುಮಾರವ್ಯಾಸನಿಗೆ ಶ್ರೀಕೃಷ್ಣನು ಬಂದಲ್ಲೆಲ್ಲಾ ಒಂದಿಲ್ಲದಿದ್ದರೆ ಇನ್ನೊಂದು ರೀತಿಯಲ್ಲಿ ಆತನ ಗುಣಗಾನವನ್ನು ಮಾಡಿ ಆತನು ಆಯಾ ಸಂದರ್ಭದಲ್ಲಿ ವಹಿಸುವ ಪಾತ್ರದ ಔಚಿತ್ಯವನ್ನು ಸ್ವಾರಸ್ಯವಾಗಿ ಸೂಚಿಸಿ ಆತನೇ ಸರ್ವಕ್ಕೂ ಸೂತ್ರಧಾರಿ ಎಂಬುದನ್ನು ಸುಂದರವಾಗಿ ಹೇಳದಿದ್ದರೆ ಆಗದು. "ಆಳಿನೊಂದ ಪಮಾನವಾಳ್ದಂಗೆಂಬ ನುಡಿಯಿಂದ" ಶ್ರೀಕೃಷ್ಣನು ತನ್ನ ಭಕ್ತರನ್ನು ನಡೆಸಿಕೊಂಡು ಬಂದಿರುವನು. ನಂಬಿದವರಿಗೆ ಇಂಬು ಎಂಬುದನ್ನು ಮತ್ತೂ ಮತ್ತೂ ನಿದರ್ಶಿಸುವನು.

ಬಂಟನಹೆ ಬಕುತರಿಗೆ ನೆನೆವರು  
ನಂಟರೆಮಗೊಲಿದಂತೆ ಹೊಗಳಿದ  
ರೆಂಟುಮಾಡಿ ಹಿಗ್ಗುವೆವು ಮೆಚ್ಚೆವು ತರ್ಕಸಾಧಕರ ।  
ಉಂಟು ಪಾಂಡವರೈವರಲಿ ಬಲು  
ನಂಟತನ ಮರೆಯೋತಕೈವರ  
ಕಂಟಕರು ನಮಗಾದ ಕಂಟಕರೆಂದು ಹರಿ ನುಡಿದ ॥ (V–೫–೮)

ಇನ್ನು ಪಲಾಯನಪಂಡಿತಶಿರೋಮಣಿಯಾದ ಉತ್ತರನ ಹಾಸ್ಯ ಚಿತ್ರವು ಎಂದಿಗೂ ಮಾಸಲಾರದ ಹೊಂಬಣ್ಣದ ಕುಂಚದಲ್ಲಿ ಬಳಿದುದಾಗಿದೆ. "ಈ

ವ್ಯಕ್ತಿ ಮಹಾಭಾರತದ ಪೂರ್ವೋತ್ತರಪರ್ವಗಳ ಮೌನ ಗಭೀರ ಸಾಗರಗಳಿಗೆ ಹಾಸ್ಯದ ಸೇತುವಾಗಿದ್ದಾನೆ." ಸ್ತ್ರೀಯರ ಮಧ್ಯದಲ್ಲಿ ಈತನು ಜಂಬವನ್ನಾಡಿ ಯುದ್ಧರಂಗದಲ್ಲಿ ಪಲಾಯನಮಂತ್ರವನ್ನು ಪಠಿಸಿರುವುದು ಬಹಳ ಸ್ವಾರಸ್ಯವಾಗಿದೆ. ಪ್ರಾಯಶಃ ಇಂಥ ನಿರ್ಮಾಣವನ್ನು ಬೇರೆಲ್ಲಿಯೂ ಕಾಣಲಾರೆವು. ಅಂತೆಯೆ ಬಡಾಯಿಕೊಚ್ಚಿಕೊಳ್ಳುವರಿಗೆ 'ಉತ್ತರನ ಪೌರುಷ'ವೆಂಬುದು ಗಾದೆಯ ಮಾತಾಗಿದೆ :

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮಕುಲದಲಿ ಸಂದು ಬಂದವರು ।
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳೇದು ಕು
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ ॥

(III–೫–೧೦)

ಜವನ ಮೀಸೆಯ ಮುರಿದನೋ ಭೈ
ರವನ ದಾಡೆಯನಲುಗಿದನೊ ಮೃ
ತ್ಯುವಿನ ಮೇಲುದ ಸೆಳೆದನೋ ಕೇಸರಿಯ ಕೆಣಕಿದನೋ ।
ಬವರವನು ತೊಡಗಿದನಲಾ ಕಾ
ರವನಕಟ ಮರುಳಾದನೆಂದಾ
ಯುವತಿಯರ ಮೊಗ ನೋಡುತುತ್ತರ ಬಿರುದ ಕೆದರಿದನು ॥

(III–೫–೧೯)

ಈ ರೀತಿಯಾಗಿ ಆಡಂಬರಮಾಡಿದ ಉತ್ತರನು ಸರಿಯಾದ ವೇಳೆ ಬರುವಾಗ ಯುದ್ಧರಂಗದಲ್ಲಿ ರಥದಿಂದ ಧುಮ್ಮಿಕ್ಕಿ ಓಡುವನು. ಆಗ ಅರ್ಜುನನು ಅವನನ್ನು ಹಿಡಿದು ಎಳೆದು "ಮನದಲ್ಲಿ ಒಡಲೊಡೆವಂತೆ ನಗುತ", "ಹರುಕನೇ ನೀನೆಲವೊ, ರಾಯರೊಳುರುವ ನೃಪ ನಿಮ್ಮಯ್ಯ....ಕೊಳಗುಳದೊಳೋಡಿದೊಡೆ ಹಜ್ಜೆಗೆ ಫಲ ಮಹಾಪಾತಕವು, ಮುಂದಣಿಗೊಲಿದು ಹಜ್ಜೆಯನಿಡಲು ಹಜ್ಜೆಯೊಳಶ್ವಮೇಧಫಲ, ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿಹರು, ಸುರೇಂದ್ರನು ನೆಲನನುಗ್ಗಡಿಸುವನು, ವೀರಸ್ವರ್ಗವಹುದು" ಎಂದು

ಸಾರುತ್ತಾ ಪ್ರೋತ್ಸಾಹಿಸುತ್ತಿದ್ದರೆ, ಹೇಡಿಯಾದ ಉತ್ತರನು ಕೊಡುವ ಉತ್ತರ ಯಾರನ್ನು ನಗಿಸದು—

ಧುರದೊಳೋಡಿದ ಪಾತಕವ ಭೂ
ಸುರರು ಕಳೆದಪರಶ್ವಮೇಧವ
ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದೆಮಗೆ ।
ಸುರರ ಸತಿಯರನೊಲ್ಲೆವೆಮಗೆ
ಮ್ಮರಮನೆಯ ನಾರಿಯರೆ ಸಾಕೆ
ಮ್ಮರಸುಂತನವೆಮಗಿಂದ್ರಪದವಿಯು ಬಿಟ್ಟು ಕಳುಹೆಂದ ॥

(III-೬-೨೬)

ಶ್ರೀಕೃಷ್ಣನು ಮಹಾವಿಷ್ಣುವಿನ ಅವತಾರವೆಂಬುದನ್ನು ಕುಮಾರವ್ಯಾಸನು ತನ್ನ ಕೃತಿಯುದ್ದಕ್ಕೂ ಅರಿವುಮಾಡಿಕೊಡುತ್ತಾ ಬಂದಿದ್ದರೂ ನರರೂಪಿನಲ್ಲಿ ಬಂದಿರುವ ಈ ಮಹಾಮಹಿಮನನ್ನು ಚತುರೋಪಾಯಕೋವಿದನೂ ಸುಶೀಲವಂತನೂ ಆದ ವ್ಯಕ್ತಿಯಂತೆ ರಸಾನುಗುಣವಾಗಿ ಚಿತ್ರಿಸಿರುವುದು ತುಂಬ ಸುಂದರವಾಗಿದೆ. ಹೀಗೆಯೇ ಎಲ್ಲ ಚಿತ್ರಗಳೂ ಸಹ ಔಚಿತ್ಯಗಳಿಂದ ಕಂಗೊಳಿಸುತ್ತಿವೆ.

ಕುಮಾರವ್ಯಾಸನು ಸಂಪೂರ್ಣವಾಗಿ 'ಭಾರತಕಥಾಮಂಜರಿ'ಯನ್ನು ಕಟ್ಟದೆ ಹೋದುದು ಕನ್ನಡಿಗರ ದುರ್ದೈವ. ಒಂದು ದೃಷ್ಟಿಯಿಂದ ಸಂಪೂರ್ಣತೆ ಬರುವಂತೆ ಮುಂದೆ ತಿಮ್ಮಣ್ಣಕವಿ (೧೫೧೦) ಉಳಿದ ಎಂಟು ಪರ್ವಗಳನ್ನು ವಿಜಯನಗರದ ಕೃಷ್ಣರಾಯನ ಆಶ್ರಯದಲ್ಲಿ ರಚಿಸಿದನು; ಏನೋ 'ಕ್ರಿಯಾ ಲೋಪ'ವಿಲ್ಲದಂತೆ ಆಯಿತು. ಆದರೆ ಕುಮಾರವ್ಯಾಸನ ಮಹೋನ್ನತಿ ಕುಮಾರ ವ್ಯಾಸನಿಗೇ ಸರಿ.

## (iv) ಚಾಮರಸ (೧೪೩೦)

ಕುಮಾರವ್ಯಾಸ-ಚಾಮರಸರ ವಿಷಯವಾಗಿರುವ ದಂತಕಥೆಗಳ ಮೌಲ್ಯ ಇತರ ದೃಷ್ಟಿಯಿಂದ ಹೇಗಿದ್ದರೂ ಅವರೀರ್ವರ ಕೃತಿಗಳು ಅಹಮಹಮಿಕಾ ಎಂಬಂತಿದ್ದುವೆಂಬ ತಥ್ಯವನ್ನಾದರೂ ಆ ಕಥೆಗಳು ಸಾರದೆ ಇರವು. ಇವರು

ತಮ್ಮ ಕೃತಿಗಳಲ್ಲಿ ತಮ್ಮ ವಿಚಾರವಾಗಿ ಏನನ್ನೂ ಹೇಳಿಕೊಳ್ಳದೆ ಇರುವುದು ಇವರ ಮಹಿಮೆಯನ್ನು ಮತ್ತಷ್ಟು ಹೆಚ್ಚಿಸಿದಂತಿದೆ.

ಚಾಮರಸನ 'ಪ್ರಭುಲಿಂಗಲೀಲೆ'ಯು ಅಲ್ಲಮಪ್ರಭುವಿನ ಪಾವನಚರಿತ್ರೆಯಾಗಿದೆ. ಶಿವನ ಅಪರಾವತಾರನೆನಿಸಿದ ಪ್ರಭುದೇವನು 'ಬಸವೇಶ್ವರನನ್ನು ಉತ್ಸವಮೂರ್ತಿಯಾಗಿ ನಿಲ್ಲಿಸಿ ವೀರಶೈವೋದ್ಧಾರದ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಿದ ಮಹಾತ್ಮನು'. ಇವನು ಇತರ ವೀರಶೈವಾಚಾರ್ಯರಿಗೂ ಜ್ಞಾನಬೋಧೆಯನ್ನು ಮಾಡಿ ಚೇತನಮೂರ್ತಿಯಾದನು.

ತನ್ನ ಕಾವ್ಯವಸ್ತುವು ಇದು ಎಂಬುದಾಗಿ ಕವಿ ಹೇಳುತ್ತಾನೆ—

ಅಲ್ಲಮಪ್ರಭು ಸಂಪ್ರದಾಯದ
ಸಲ್ಲಲಿತ ಸನ್ಮಾರ್ಗವನು ನಾ
ನೆಲ್ಲರಱಿವಂದದಲಿ ಪೇಳುವೆನುಚಿತವಚನದಲಿ ॥

ಈ ಗ್ರಂಥದ ಮಹತ್ವವನ್ನು ಕವಿವಾಣಿಯಲ್ಲಿ ಕೇಳೋಣ :

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ ।
ಹೊತ್ತು ಹೋಗದೆ ಪುಂಡರಾಲಿಪ
ಮತ್ತ ಮತಿಗಳ ಗೋಷ್ಠಿಯಲ್ಲಿದು
ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯ ॥

'ಜೀವನವನ್ನು ಬ್ರಹ್ಮದಲ್ಲಿ ಐಕ್ಯಮಾಡಿಸಿದ ಲಿಂಗಾಂಗಸಾಮರಸ್ಯವನ್ನು ಬಲ್ಲ ದಿವ್ಯಶರಣರ ವಿಚಾರ ಮತ್ತು ಸಿದ್ಧಾಂತಸಾರಸರ್ವಸ್ವವಿದು' ; 'ಕುಱಿಗಳೋಪಾದಿಯಲ್ಲಿ ಕಬ್ಬಿನ ಹೊಱಗಣೆಲೆಯನು ಮೇದು ಆಕಟ ಮೆಲುಕಿಱುವುತ ಅಲ್ಪಸುಖಕ್ಕೆ ಸೋಲದೆ, ಕಬ್ಬಿನೊಳು ರಸನ ನೆಱೆ ಸವಿವ ಗಜದಂತೆ ಭಕ್ತಿಯ ತೆಱನ ತಿಳಿದಾಚರಿಸಬೇಕೆಂದಱಿವವರು ಲಾಲಿಸುವುದೀ ಪ್ರಭುಲಿಂಗಲೀಲೆಯನು' ಎಂಬುದಾಗಿ ಸುಲಭವೂ ಹೃದಯಂಗಮವೂ ಆದ ಭಾಷೆಯಲ್ಲಿ ತನ್ನ ಕೃತಿಯನ್ನು

ರಚಿಸಿ ಅದರೊಳಗಿನ ಭಕ್ತಿರಸವನ್ನು ಆಸ್ವಾದಿಸಬಲ್ಲ ಸದಾಚಾರವಂತರು ಅದನ್ನು ಓದಬೇಕು ಕೇಳಬೇಕು ಎನ್ನುವನು.

ಮಾಯೆ ಅಲ್ಲಮರ ಶೃಂಗಾರ-ವಿರಹಗಳ ಮೂಲಕ ಕವಿಯು 'ನಿರ್ಮಾಯನಿಂದ ಮಾಯಾಪರಾಜಯವಾದುದನ್ನು' ಭಕ್ತರಿಗೆ ತಿಳಿಸುತ್ತಾನೆ. "ಜೀವನು ಸಂಸಾರವು ಹೇಯವೆಂದು ಬಗೆದು ಸಾಧನ ಚತುಷ್ಟಯ ಸಂಪನ್ನನಾಗಿ ಮುಕ್ತಿ ಸಾಮ್ರಾಜ್ಯವನ್ನು ಪಡೆಯಬೇಕೆಂಬುದನ್ನು ಮಹಾದೇವಿಯಕ್ಕನ ಕಥೆಯಲ್ಲಿ ಕವಿ ನಿರೂಪಿಸಿದ್ದಾನೆ".[1] ಅಲ್ಲಮನು ಸಿದ್ಧರಾಮ, ಬಸವೇಶ್ವರರಿಗೆ ಮಾರ್ಗ ದರ್ಶನ ಮಾಡಿದನು. ಪ್ರಭುಲಿಂಗಲೀಲೆಯಲ್ಲಿ ವೀರಶೈವಧರ್ಮದ ಅಸ್ತಿವಾರದಂತಿರುವ ಷಟ್ಸ್ಥಲಗಳು ಲೀಲಾಜಾಲವಾಗಿ ಪಂಡಿತರು ತಲೆದೂಗುವಂತೆ, ಜನಸಾಮಾನ್ಯರು ತಿಳಿದುಕೊಳ್ಳುವಂತೆ ವರ್ಣಿತವಾಗಿವೆ. ಈ ಗ್ರಂಥದ ಶ್ರೇಷ್ಠತೆಯನ್ನು ಗ್ರಹಿಸಿಕೊಳ್ಳುವುದಾದರೆ, ಇದು ಸಂಸ್ಕೃತ ಮತ್ತು ತಮಿಳು ಭಾಷೆಗಳಿಗೆ ಭಾಷಾಂತರಗೊಂಡಿದೆ ಎಂದರೆ ಸಾಲದೆ ?

ಚಾಮರಸನ ಕವಿತಾಸಾಮರ್ಥ್ಯವು ಅದ್ವಿತೀಯವಾಗಿದೆ. ಆತನ ಕಥನ ರೀತಿಯಲ್ಲಿಯೂ ಒಂದು ನವೀನತೆಯಿದೆ. ಅನಾವಶ್ಯಕಗಳಾದ ವರ್ಣನೆಗಳಿಂದ ಕಾವ್ಯವಸ್ತುವನ್ನು ಮುಸುಕಿಸಿ ಉಸಿರುಕಟ್ಟುವಂತೆ ಮಾಡಲಿಲ್ಲ. "ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಉತ್ತಮ ನಿದರ್ಶನವಾಗಿದೆ".[2] ಪಾತ್ರಚಿತ್ರಣ, ಸನ್ನಿವೇಶರಚನೆ, ಭಾಷೆ, ಶೈಲಿ ಇವೆಲ್ಲವು ಹೃದಯಂಗಮವಾಗಿವೆ. ಅಲ್ಲಮ ಪ್ರಭುವಿನ ಜನನೀಜನಕರಾದ 'ಸುಜ್ಞಾನಿನಿರಹಂಕಾರರ' ಸರಳತೆಯಂತೆ ಚಾಮರಸನ ಕಾವ್ಯಶ್ರೀಯು ಪಾಂಡಿತ್ಯಪ್ರಚುರವನ್ನು ಮಾಡದೆ ನಿರಾಡಂಬರದಿಂದ ಸಹಜ ಸುಂದರವಾಗಿ ಶೋಭಿಸುತ್ತಿದೆ. ಶೈಲಿಯ ನಿರರ್ಗಳತೆ ಸೌಂದರ್ಯಮಾಧುರ್ಯಗಳಲ್ಲಿ ಕುಮಾರವ್ಯಾಸ ಚಾಮರಸರಿಗೆ ಹೋಲಿಕೆ ಕೆಲವೆಡೆಗಳಲ್ಲಿ ಕಾಣಬಹುದು.

---

[1] ಪ್ರಭುಲಿಂಗಲೀಲೆಯ ಸಂಗ್ರಹ, ಮೈ. ವಿಶ್ವವಿದ್ಯಾನಿಲಯ, ಪು. xliv.

[2] ಅದೇ.

ಚಾಮರಸನ ವಾಣಿ

ಬನವಾಸಿ : ಆದಟಿಗೊಳವನೀಕಾಂತೆಗೊಪ್ಪುವ
ವದನವೋ ಶೃಂಗಾರಸಾರದ
ಸದನವೋ ಸೊಬಗಿನ ಸುಮಾನದ ಸುಖದ ನೆಲೆವೀಡೋ ।
ಸುದತಿರತ್ನಗಳೊಗೆವ ಚೆಲುವಂ
ಬುಧಿಯೋ ಪೇಳೆನೆ ಸಕಲ ಸೌರಂ
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು ॥
(II–೨೯)

ಮಾಯೆ : ಬೀಱುತಿರ್ದಳು ಮುದ್ದುತನವನು
ಹೇಱುತಿರ್ದಳು ಸಕಲ ಚೆಲುವನು
ತೋಱುತಿರ್ದಳು ಜಗದ ಜಂಗುಳಿಗಾಡುವೊನಲಾಗಿ ।
ಸಾಱುತಿರ್ದಳು ಸಕಲ ಸೊಬಗನು
ಮೀರುತಿರ್ದಳು ದಿನದಿನಕೆ ಕಳೆ
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ ॥ (II–೫೩)

ಬಸವಾದಿಗಳು ಶಿವಭಕ್ತರಾದರು :

ಮಲಯಜದ ಮರಗಾಳಿ ಸೋಂಕಿನ
ಉಳಿದ ಮರ ಪರಿಮಳಿಸುವಂತಿರೆ
ತಿಳಿಯಲೆಂದಲ್ಲಮನ ಕಾರಣ ಬಸವನುದಯಿಸಲು ।
ಇಳೆಯೊಳಾ ಮಹಿಮನ ಪದಾಂಬುಜ
ಗಳ ರಜಸ್ಸಿನ ರೇಣು ಸಂಗದ
ಬಲುಹಿನಲಿ ಶಿವಭಕ್ತರಾದರು ನರರು ತಮತಮಗೆ ॥
(IV–೨೦೩)

ಮಹಾದೇವಿಯು ನೆನೆದಳೊಂದನುವ—

ಪರಿಮಳವನಾರಿಕ್ಕಿದರು ಕ
ರ್ಪೂರಕೆ ಕೋಗಿಲೆಗಾರು ಸೊಗಸಿನ
ಸ್ವರನ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು ।
ಪರಿಕಿಸುವಡವಕಾರು ಗುಣಗಳ
ನೆರವ ತಂದರು ಮನದಲಂತಾ
ಪರಿಯಲಾ ಮಹದೇವಿ ತಾನೇ ನೆನೆದಳೊಂದನುವ ॥
(VII–೨೨)

## (v) ವಿರೂಪಾಕ್ಷ ಪಂಡಿತ (೧೫೮೪)

'ಚೆನ್ನಬಸವಪುರಾಣ'ವೆಂಬ ಉತ್ತಮ ಕಾವ್ಯವೊಂದನ್ನು ವಾರ್ಧಕ ಷಟ್ಪದಿಯಲ್ಲಿ ವಿರೂಪಾಕ್ಷಪಂಡಿತನು ರಚಿಸಿದನು. ಇದರಲ್ಲಿ ೬೩ ಸಂಧಿಗಳೂ ೩೬೭೮ ಪದ್ಯಗಳೂ ಇವೆ. ಈ ಗ್ರಂಥದಲ್ಲಿ ಚೆನ್ನಬಸವ ಚರಿತೆ, ಶಿವಲೀಲೆಗಳು ಹರಶರಣರ ಚರಿತೆ, ವೀರಶೈವಧರ್ಮವಿಚಾರ ಇತ್ಯಾದಿ ಪ್ರತಿಪಾದಿತವಾಗಿವೆ.

"ವರ್ಣನೆ ಮತ್ತು ಕಥನ ನಿರೂಪಣಗಳಲ್ಲಿ ವಿರೂಪಾಕ್ಷಪಂಡಿತನು ಅತ್ಯಂತ ಯಶಸ್ವಿಯಾಗಿದ್ದಾನೆ. ಈ ಕವಿಯು ತನಗೆ ಬೇಕಾದ ವಿಷಯವನ್ನು ನಿರೂಪಿಸುವಲ್ಲಿ ಶಬ್ದಾಲಂಕಾರ ಮೊದಲಾದ ಯಾವ ಆಡಂಬರಕ್ಕೂ ಹೋಗದೆ ಕೇವಲ ವಿಷಯವನ್ನೇ ಸರಳವಾದ ಶೈಲಿಯಲ್ಲಿ ಸಂಗಮವಾಗುವಂತೆ ಪ್ರತಿಪಾದಿಸುತ್ತಾನೆ".[1] ಈತನ ಕೃತಿಗೂ ಲಕ್ಷ್ಮೀಶನ ಜೈಮಿನಿಭಾರತಕ್ಕೂ ಅನೇಕ ಹೋಲಿಕೆಗಳುಂಟು. "ಇವನ್ನು ಪರಾಮರ್ಶಿಸಿದರೆ ಒಬ್ಬ ಕವಿಯ ಕೃತಿಯನ್ನು ಮಾದರಿಯಾಗಿಟ್ಟುಕೊಂಡು ಇನ್ನೊಬ್ಬ ಕವಿಯು ತನ್ನ ಕೃತಿಯನ್ನು ರಚಿಸಿರಬೇಕೆಂಬುದು ನಿಸ್ಸಂದೇಹವಾಗಿ ಕಾಣಬರುತ್ತದೆ."[2] ಅದು ಹೇಗಿದ್ದರೂ, ವಿರೂಪಾಕ್ಷಪಂಡಿತನ ಸುಂದರ ಕೃತಿಯು ಎಂದಿಗೂ ಜನರ ಆದರಣೆಗೆ ಪಾತ್ರವಾಗಿರುವುದರಲ್ಲಿ ಸಂದೇಹ ಬೇಡ. ಕವಿಯ ವಾಣಿಯನ್ನು ಒಂದೆರಡು ಉದಾಹರಣೆಗಳಿಂದ ತಿಳಿಯೋಣ :

ಮಂತ್ರಿ ಚೆನ್ನಬಸವೇಶ್ವರನು ಬಿಜ್ಜಳರಾಜನಿಗೆ ಹೇಳಿದ ರಾಜನೀತಿಯಿಂದ ಉದ್ಧೃತವಾದ ಭಾಗವಿದು—

ಪರಿಕಿ ಪೊಡೆ ಸಂತತಂ ವಕ್ರಚರಿತಂ ನುಡಿವೊ
ಡೆರಡು ನಾಲಗೆ ಧನವನೇ ಕಾಯ್ದುಕೊಂಡಿರ್ಪ
ಪರಮಲೋಭಂ ಭೋಗದೊಡನೆ ಕೂಡಿದ ಬಾಳ್ವೆ ಪರರಸುವನುಗಿವ
ಕೋಪಂ ।

---

[1] ಶಿ. ಶಿ. ಬಸವನಾಳ, ಚೆನ್ನಬಸವ ಪುರಾಣ, ಪು. ೧೫.

[2] ಶಿ. ಶಿ. ಅದೇ ಬಸವನಾಳ, ಚೆನ್ನಬಸವ ಪುರಾಣ, ಪು. ೧೦.

ಉರಗಂಗವರಸಿಂಗಮನ್ಯೋನ್ಯಮಾದೊಡಂ
ನಿರುತದಿಂ ಕಣ್ಣೆ ಕಿವಿಯ ಕಣ್ಣೆಂದೆಂಬ
ಪರಿಯಾಯ ಭೇದವಿದು ನಾಡಾಡಿಗಿದು ನೀತಿಯನುಚಿತಂ ಕೇಳೆಂದನು ॥
(VIII–೩)

ಸಾಮವೇ ವೇದಂಗಳೊಳಧಿಕವಾದಂತೆ
ಸಾಮವೇ ಮಿಗಿಲಾಯ್ತುಪಾಯಂಗಳಲ್ಲಿ ತ
ತ್ಸಾಮವೇ ಭೂಭುಜರ ಬಾಳ್ವಿಗನುಸಾರಿ ಮಿಕ್ಕಿನ ಮೂರುಪಾಯಂಗಳು ।
ಸಾಮಾನ್ಯಮವರೊಳಗೆ ದಂಡಮೆಂದೆಂಬುವದು
ಸಾಮಾನ್ಯದೊಳಗೆ ಸಾಮಾನ್ಯವಿದನರಿಯದರು
ಸಾಮಾನ್ಯರೆನಿಪರವನೀಪತಿಗಳೊಳು ನೃಪಲಲಾಮ ನೀ ಕೇಳೆಂದನು ॥
(VIII–೧೪)

ಉತ್ತಮ ನೀತಿಯನ್ನು ಎಷ್ಟು ಸುಲಭವಾಗಿಯೂ ಹೃದಯಂಗಮವಾಗಿಯೂ ಕವಿ ಹೇಳಿರುತ್ತಾನೆ.

## (vi) ಲಕ್ಷ್ಮೀಶ (೧೫೫೦ ?)

‘ಕರ್ಣಾಟ ಕವಿಚೂತವನ ಚೈತ್ರ’ ಮತ್ತು ‘ನಾದಲೋಲ’ ಎಂಬ ಬಿರುದಾಂತ ಲಕ್ಷ್ಮೀಶ ಕವಿಯ ಕಾಲ, ಮತ ಇತ್ಯಾದಿಯನ್ನು ಕುರಿತು ಅನೇಕ ವಾದಗಳು ನಡೆದಿವೆ; ಇನ್ನೂ ಇತ್ಯರ್ಥವಾಗಲಿಲ್ಲವೆನ್ನಬೇಕಾಗಿದೆ. ಈ ಕವಿಯು ಜೈಮಿನಿಭಾರತವೆಂಬ ಉತ್ತಮೋತ್ತಮ ಕಾವ್ಯವನ್ನು ಸಂಸ್ಕೃತ ಜೈಮಿನಿಭಾರತದ ಅಶ್ವಮೇಧಿಕವನ್ನನುಸರಿಸಿ ಬರೆದಿದ್ದಾನೆ. ಇದು ಸಂಸ್ಕೃತ ಮೂಲದ ಪ್ರತಿಕೃತಿಯಲ್ಲ. ರಸಾನುಗುಣವಾಗಿ ತನ್ನ ಪ್ರತಿಭೆಯಿಂದ ಕಥೆಯನ್ನು ಕುಗ್ಗಿಸಬೇಕಾದಲ್ಲಿ ಹಿಗ್ಗಿಸಿರುವನು. ಚಂದ್ರಹಾಸನ ಕಥೆ, ಸೀತಾಪರಿತ್ಯಾಗ, ಲವಕುಶರ ಕಾಳಗ, ಬಭ್ರುವಾಹನ ಯುದ್ಧ ಇತ್ಯಾದಿ ಸನ್ನಿವೇಶಗಳಲ್ಲಿ ಲಕ್ಷ್ಮೀಶನು ತನ್ನ ಅನುಪಮ ಕವಿತಾಚಾತುರ್ಯದಿಂದ ಒಂದೊಂದು ಸುಂದರ ಖಂಡಕಾವ್ಯಗಳನ್ನು ಕೊಟ್ಟಿರುವನು.

ನವರಸಗಳಿಂದ ತುಂಬಿ ತುಳುಕುವ ಕಾವ್ಯವಿದು. ‘ಮೂಲದಲ್ಲಿಯ ಪುರಾಣಪ್ರಧಾನ ಕಥನವನ್ನು ಕಾವ್ಯಪ್ರಧಾನ ಕಥನವನ್ನಾಗಿಸಿ ಅದನ್ನು

ರಸವತ್ತಾಗಿ ಮಾಡಿದ ಕೈವಾಡವೆಲ್ಲ ಲಕ್ಷ್ಮೀಶನದೇ ?"[1] ಅವನು ತನ್ನ ವಿಷಯವಾಗಿ ಹೇಳಿದ ಕೆಳಗಿನ ಮಾತುಗಳು ಅಕ್ಷರಶಃ ಸರಿಯೆನ್ನುವುದಕ್ಕೆ ಗ್ರಂಥದುದ್ದಕ್ಕೂ ಸಾಕ್ಷ್ಯಗಳಿವೆ :

ಜಾಣರಂ ತಲೆದೂಗಿಸದೆ ನುಡಿದೊಡಾ ಪದ
ಕ್ಕೊಣೆಯಂ ಬಹುದೇದು ಸರಸೋಕ್ತಿಯಿಂದೆ ಗೀ
ರ್ವಾಣಪುರನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸಕಲಾನಿಪುಣನು ।
ವೀಣೆಯಂ ಗಾನವಂ ನುಡಿಸುವಂದದೊಳೆನ್ನ
ವಾಣಿಯಿಂ ಕವಿತೆಯಂ ಪೇಳಿಸಿದನೆಂದರಿದು
ಕೇಣಮಂ ತೊರೆದು ಪುರುಡಿಸುವರಂ ಜರೆದು ಕಿವಿದೆರೆದು ಕೇಳ್ವುದು
ಸುಜನರು ॥

ಪುಣ್ಯಮಿದು ಕೃಷ್ಣಚರಿತಾಮೃತಂ ಸುಕವೀಂದ್ರ
ಗಣ್ಯಮಿದು ಶೃಂಗಾರಕುಸುಮತರು ತುರುಗಿದಾ
ರಣ್ಯಮಿದು ನವರಸ ಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ ।
ಗಣ್ಯಮಿದು ಶಾರದೆಯ ಸಮ್ಮೋಹನಾಂಗ ಲಾ
ವಣ್ಯಮಿದು ಭಾವಕರ ಕಿವಿದೊಡವಿಗೊದವಿದ ಹಿ
ರಣ್ಯಮಿದು ಭೂತಳದೊಳನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ ॥

ಸೀತಾ ಪರಿತ್ಯಾಗ ಸಂದರ್ಭದಲ್ಲಿ ಒಂದು ಪದ್ಯ; ಸೀತೆ ಮೂರ್ಛೆಗೆ ಸಂದುದು :

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ
ಮುರಿದಿಳೆಗೊರುಗುವಂತೆ ಲಕ್ಷ್ಮಣನ ಮಾತು ಕಿವಿ
ದೆರೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡನಡುಗುತ ।
ಮರೆದಳಂಗೋಪಾಂಗಮಂ ಬಳಿಕ ಸೌಮಿತ್ರಿ
ಮರುಗಿ ತಣ್ಣೀರ್ದಳಿದು ಪತ್ರದೊಳ್ಕೊಡೆವಿಡಿದು
ಸೆರಗಿಂದ ಬೀಸಿ ರಾಮನ ಸೇವೆ ಸಂದುದೇ ತನಗೆಂದು ರೋದಿಸಿದನು ॥

ಲಕ್ಷ್ಮೀಶನ ಕವಿತೆಯು, ಲಲಿತವಾಗಿಯೂ ಮೃದುಮಧುರ ಪದಪುಂಜ ರಂಜಿತವಾಗಿಯೂ ಇರುವುದನ್ನು ತೋರಿಸುವುದಕ್ಕೆ ಮೇಲಿನ ಪದ್ಯಗಳು

---

[1] ಕ. ಸಾ. ಚ., ಪು. ೨೭೧.

ಸಾಕು. ಶೈಲಿಯಲ್ಲಿ ಮುದ್ದಣನು ಇವನನ್ನು ಬಹಳವಾಗಿ ಅನುಕರಿಸಿರುವಂತಿದೆ.

## (vii) ರತ್ನಾಕರವರ್ಣಿ (೧೫೬೦)

೧೬ನೆಯ ಶತಮಾನದ 'ಕನ್ನಡದ ಕೋಗಿಲೆ' ಎಂದರೆ ರತ್ನಾಕರವರ್ಣಿ. ಆತನನ್ನು ರತ್ನಾಕರಸಿದ್ಧ, ರತ್ನಾಕರ, ಅಣ್ಣಗಳು ಎಂಬುದಾಗಿಯೂ ಕರೆಯುತ್ತಿದ್ದರಂತೆ. ಈತನು ರಚಿಸಿದ 'ಭರತೇಶವೈಭವ'ದಷ್ಟು ಉತ್ತಮವಾದ ಹಿರಿಯ ಹಾಡುಗಬ್ಬ ಕನ್ನಡದಲ್ಲಿ ಬೇರೊಂದು ಇಲ್ಲವೆನ್ನುವರು. ರತ್ನಾಕರನ ಜೀವನದ ವಿಷಯವಾಗಿ ಪರಸ್ಪರ ವಿರುದ್ಧವಾದ ಅನೇಕ ದಂತಕಥೆಗಳು ಪ್ರಚಲಿತವಾಗಿದ್ದರೂ, ಆತನೊಬ್ಬ ಶ್ರೇಷ್ಠ ಪ್ರತಿಭಾವಂತ ಕವಿಯೆಂಬುದರಲ್ಲಿ ಸಂದೇಹವಿಲ್ಲ. ಸಾಂಗತ್ಯದಲ್ಲಿ ಅವನಿಗಿಂತ ಹಿಂದೆ ಶಿಶುಮಾಯಣ, ದೇಪರಾಜ (೧೪೧೦), ಮಂಗರಸ (೧೫೦೦) ಮೊದಲಾದ ಕವಿಗಳು ಕೃತಿರಚನೆ ಮಾಡಿದರೂ, ಅವೆಲ್ಲವನ್ನೂ ಭರತೇಶವೈಭವವು 'ಮೆಟ್ಟಿನಿಂತಿದೆ'. ಗ್ರಂಥವು ಪಂಚಕಲ್ಯಾಣ (ವಿಜಯ)ಗಳಾಗಿ ವಿಭಾಗಿಸಲ್ಪಟ್ಟಿದೆ. ಭರತೇಶವೈಭವದ ಕಥಾಸಾರವಿಷ್ಟೆ: ಆದಿತೀರ್ಥಂಕರನ ಪ್ರಥಮ ಪುತ್ರನಾದ ಭರತೇಶನು ರಾಜಯೋಗಿಯಾಗಿ ಅಭಿವರ್ಣಿತವಾದುದು (ಭೋಗವಿಜಯವೆಂಬ ಪ್ರಥಮ ಕಲ್ಯಾಣ); ಭರತೇಶನ ದಿಗ್ವಿಜಯ ವರ್ಣನೆ, ತಮ್ಮನಾದ ಭುಜಬಲಿಯು ಎದುರಿಸಲು ಆತನನ್ನು ನೀತಿಯ ಮಾತಿನಿಂದ ಜಯಿಸಲು ಆತನು ವೈರಾಗ್ಯದಿಂದ ಜಿನದೀಕ್ಷೆ ಪಡೆಯುವುದು; ಭರತೇಶನ ವೈಭವದ ನಗರಪ್ರವೇಶ (ದಿಗ್ವಿಜಯವೆಂಬ ದ್ವಿತೀಯ ಕಲ್ಯಾಣ); ಭರತನು ಭುಜಬಲಿ ಸ್ವಾಮಿಯ ಮನಃಕಷಾಯವನ್ನು ಹೋಗಲಾಡಿಸುವಂತೆ ಮಾಡಿ ಆತನಿಗೆ ಆತ್ಮಸಿದ್ಧಿಯನ್ನು ದೊರಕಿಸಿ ರಜತಾದ್ರಿಯಲ್ಲಿ ಮಹೋತ್ಸವವನ್ನು ನಡೆಯಿಸಿದುದು (ಯೋಗವಿಜಯವೆಂಬ ಮೂರನೆಯ ಕಲ್ಯಾಣ); ಭರತೇಶನು ಮೋಕ್ಷಪಡೆಯುವುದು (ಮೋಕ್ಷವಿಜಯವೆಂಬ ನಾಲ್ಕನೆಯ ಕಲ್ಯಾಣ); ಆತನ ಮಗನಾದ ಅರ್ಕಕೀರ್ತಿಯು ತಮ್ಮ ಆದಿರಾಜನೊಡನೆ ಜಿನದೀಕ್ಷೆಯನ್ನು ಕೈಕೊಂಡು ಮುಕ್ತಿ ಪಡೆಯುವುದು (ಅರ್ಕಕೀರ್ತಿ ವಿಜಯವೆಂಬ ಐದನೆಯ ಕಲ್ಯಾಣ).

ಈ ಕೃತಿಯ ಪ್ರಧಾನ ನಾಯಕನು ಭರತೇಶನು. ಭುಜಬಲಿ, ಮಂತ್ರಿ ಬುದ್ಧಿಸಾಗರ, ದಳಪತಿ ಜಯರಾಜ, ಭರತೇಶನ ಸೋದರಮಾವನಾದ ನಮಿರಾಜ ಇವರು ಈ ಕಾವ್ಯದಲ್ಲಿ ಬರುವ ಇತರ ಪ್ರಮುಖರು. ಸ್ತ್ರೀಪಾತ್ರ ವರ್ಗದಲ್ಲಿ ರಾಜಮಾತೆ ಯಶಸ್ವತೀದೇವಿ, ನಚ್ಚಿನ ರಾಣಿ ಕುಸುಮಾಜಿ, ಪಟ್ಟದ ರಾಣಿ ಸುಭದ್ರಾದೇವಿ ಚಿರಸ್ಮರಣೀಯರು. ರತ್ನಾಕರವರ್ಣಿಯ ಪಾತ್ರಸೃಷ್ಟಿ ಕೌಶಲವು ಅದ್ಭುತವಾಗಿದೆ. ಕೃತಕತೆಯೆಂಬುದು ಈ ಕವಿಯು ಹೋದ ಹಾದಿ ಯಲ್ಲಿಯೇ ಇರುವುದಿಲ್ಲ. ಸಹಜಸೌಂದರ್ಯವು ಎಲ್ಲೆಲ್ಲೂ ಕೃತಿಯುದ್ದಕ್ಕೂ ಲಾಸ್ಯವಾಡುತ್ತಿದೆ. ಹಾಡುಗಬ್ಬಕ್ಕೆ ಹೊಂದಿಕೆಯಾದ ಕನ್ನಡ ಛಂದಸ್ಸನ್ನು (ಸಾಂಗತ್ಯವನ್ನು) ಬಳಸಿಕೊಂಡುದರಿಂದ ಕವಿಗೆ ಸ್ವಾತಂತ್ರ್ಯ ಹೆಚ್ಚಿಗೆ ಲಭಿಸಿದೆ. ಸುಲಭವೂ ಉಚಿತವೂ ಆದ ಪುಟ್ಟ ಸೊಲ್ಲುಗಳು ನಿರರ್ಗಳವಾಗಿ ಬಂದಿರುತ್ತವೆ. ತನ್ನ ಕೃತಿಯು ಚೆನ್ನಾಗಿದೆ ಎಂಬ ಆತ್ಮವಿಶ್ವಾಸ ಕವಿಗೆ ಧಾರಾಳವಾಗಿದೆ. ಕನ್ನಡಿಗರೂ, ತೆಲುಗರೂ, ತುಳುವರೂ ಅದನ್ನು ಮೈಯುಬ್ಬಿ ಕೇಳಬೇಕಂತೆ.

ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು
ರಯ್ಯಾ ಮಂಚಿದಿಯನೆ ತೆಲುಗಾ ।
ಆಯ ಯ್ಯಾ ಎಂಚ ಪೊರ್ಲಾಂಡೆಂದು ತುಳುವರು
ಮೈಯುಬ್ಬಿ ಕೇಳಬೇಕಣ್ಣಾ ॥ (ಪು. ೧, ಪ. ೭)

ಕಾವ್ಯಕ್ಕೆ ಒಟ್ಟಿನಲ್ಲಿ 'ರಸ'ವೇ ಪ್ರಧಾನ. 'ಕಬ್ಬಿನಂತಿರಬೇಕು, ಬಿದಿರಂತೆ ರಚಿಸಲೇಕಬ್ಬ' ಎಂಬುದಾಗಿ ಹೇಳಿ ವಸ್ತುಕವರ್ಣಕಗಳಿಗೆ ಸ್ವಾರಸ್ಯವಾದ ಒಂದು ನಿರ್ವಚನವನ್ನು ಸುರಿ ವರ್ಣಕದತ್ತ ತನ್ನ ಒಲವನ್ನು ಸೂಚಿಸುತ್ತಾನೆ.

ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು
ವಿಕಳವಾದರು ದೋಷವಿಲ್ಲ ।
ಸಕಲ ಲಕ್ಷಣವಾಗಿ ಬಿರುಸು ಮಾಡಿದರೆ ಪು
ಸ್ತಕದ ಬದನೆಕಾಯಹುದು ॥ (ಪು. ೧, ಪ. ೯)

ಕಥನರೀತಿಯಲ್ಲಿ ರತ್ನಾಕರವರ್ಣಿಯು ತನ್ನದೇ ಅದೊಂದು ವ್ಯಕ್ತಿತ್ವವನ್ನು ತೋರಿಸಿದ್ದಾನೆ. 'ಎಲ್ಲ ಕವಿಗಳೂ ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ ರಚಿಸಿದರೆ', ತಾನು ಹಾಗೆ ಹೇಳದೆ 'ಉಚಿತಕ್ಕೆ ತಕ್ಕಷ್ಟು' ಮಾತ್ರ ಹೇಳುವೆ

ನೆಂದಿರುವನು. 'ಆಧ್ಯಾತ್ಮವೆ ನಿಚಿತಪ್ರಯೋಜನವೆನಗೆ, ಎಂಬುದಾಗಿ ತನ್ನ ಕಾವ್ಯೋದ್ದೇಶವನ್ನು ಹೇಳಿಬಿಡುತ್ತಾನೆ. ರಸೋತ್ಪತ್ತಿಗೆ ಆವಶ್ಯಕವೆಂದು ಕಂಡಲ್ಲಿ ಕವಿಯು ಎಂಥ ಸಣ್ಣ ವಿಷಯಗಳನ್ನಾದರೂ ಭೂತ ಕನ್ನಡಿಯಿಂದ ತೋರಿಸುತ್ತಾನೆ; ವಿವರದ ಮೇಲೆ ವಿವರವನ್ನು ಹೇಳುತ್ತಾನೆ; ಆ ವಿವರಗಳು ಸುಂದರವಾದ 'ವಿಭಾಗಗಳಾಗಿ' ರಸೋತ್ಪತ್ತಿಗೆ ಸಹಾಯಮಾಡುವುವು; ಅವು ಬೇಸರಿಕೆ ಹುಟ್ಟಿಸವು. ಕಿರಿದನ್ನು ಹಿರಿದಾಗಿ ಮಾಡಿ ನವೀನತೆಯನ್ನು ತುಂಬುವ ಸಾಮರ್ಥ್ಯ ಆತನದು' ಭೋಗವಿಜಯದ ಸಂಭವಗಳ ಅವಧಿ ಬರಿಯ ಮೂರು ದಿನಗಳಷ್ಟೇ; ಆದರೂ "೧೯ ಸಂಧಿಗಳಲ್ಲಿ ಸಾಂಗತ್ಯ ಮಾಡಿರುವನು." ನಚ್ಚಿನ ರಾಣಿಯಾದ ಕುಸುಮಾಜಿಯು ಪ್ರಣಯಪೂರ್ವಕವಾಗಿ ಮಾಡಿದ ವರ್ಣನೆಯನ್ನು "ಅಮರಾಜಿ ಸುಮನಾಜಿಯರು ಗುಟ್ಟಿನಲ್ಲಿ ಕೇಳಿ ಅದನ್ನೇ ಒಂದು ಕಾವ್ಯವಾಗಿ ಬರೆಯುವರು. ಪಂಡಿತೆ ಅದನ್ನು ರಾಜನ ಮುಂದೆ ಹಾಡುವುದು. ಕವಿಯು ರಾಣಿಯರಿಂದಲೇ ಚಕ್ರವರ್ತಿಯನ್ನು ವರ್ಣಿಸಿದುದು ಕೇವಲ ನೂತನ ಕ್ರಮವಾಗಿದೆ. ರತ್ನಾಕರವರ್ಣಿಯ ರಚನಾಕೌಶಲವನ್ನು ತೋರುವ ಸಂದರ್ಭಗಳು ಇನ್ನೂ ಕೆಲವಿವೆ. ಭರತ ಬಾಹುಬಲಿಯರೊಳಗೆ ಯುದ್ಧವು ಸನ್ನಿಹಿತವಾಯಿತೆಂಬಂತೆ ತೋರಿಸಿ, ಅಂತ್ಯದಲ್ಲಿ ಅಹಿಂಸಾಧರ್ಮವು ನೆಲೆಗೊಳ್ಳುವಂತೆ—ಸಹೋದರರ ಯುದ್ಧವು ಸೊಗಸಲ್ಲವೆಂದು ಅದನ್ನು ಆಗಗೊಳಿಸದೆ"[1] ಬಾಹುಬಲಿಯನ್ನು ವೀತರಾಗನನ್ನಾಗಿ ಚಿತ್ರಿಸಿದುದು ಮತ್ತೊಂದು ಉದಾಹರಣೆ.

ವರ್ಣನೆಯಲ್ಲಿ ರತ್ನಾಕರನದು ಸಿದ್ಧಹಸ್ತ. ಸ್ವಾಭಾವಿಕತೆಯಿಂದ ಸುಂದರ ಚಿತ್ರವನ್ನು ಕಣ್ಣಮುಂದೆ ಕಟ್ಟುವನು. ಅಲಂಕಾರ ಕವಿಸಮಯಗಳ ಗೊಂಡಾರಣ್ಯದಲ್ಲಿ ನಾವು ಕಾಲ್ತೊಡಕಿ ಕಷ್ಟಪಡುವುದಿಲ್ಲ. ಆತನಿಗೆ ಸ್ವಾಭಾವಿಕವಾದ ಉಪಮೆಗಳೆಂದರೆ ಪ್ರಾಣ. ಅವನ್ನು ಹದವಾಗಿ ಉಪಯೋಗಿಸುವನು. 'ಜನಪತಿ ತಾನೊಬ್ಬ ದಿನಪತಿಯಂತಿರ್ದ ದಿನಪತಿಯುದಯಕಾಲದೊಳು' (ಪು. ೪೧, ಪ. ೫) ಇತ್ಯಾದಿ ಎಷ್ಟು ಮನೋಹರವಾಗಿವೆ. ಆಸ್ಥಾನ ಸಂಧಿಯಲ್ಲಿ ಬರುವ ಭರತೇಶನ ಚಿತ್ರವನ್ನು ವಿವಿಧಬಣ್ಣಗಳಲ್ಲಿ ಸೂಕ್ಷ್ಮವಾಗಿ ಬರೆದಿರು

---

1 ಉಗ್ರಾಣ ಮಂಗೇಶರಾವ್, ಭರತೇಶವೈಭವ, ಪು. xix.

ವನು. ಅದು ಅಸಾಧಾರಣ ಚಿತ್ರವೆಂಬುದನ್ನು ಕವಿಯೇ ಹೇಳುತ್ತಾನೆ. ಹೆಂಗಸರನ್ನು ಗಂಡಸರನ್ನು ಮರುಳುಮಾಡುವ ರೂಪವಂತೆ ಭರತೇಶನದು.

ಹೆಂಗಳ ರೂಪು ಗಂಡರಿಗೆ ಗಂಡರ ರೂಪು
ಹೆಂಗಳ ಸೋಲಿಪ್ಪುದೆಂಬ
ಪಾಂಗಲ್ಲವವನ ಚೆಲ್ವಿಕೆ ಗಂಡು ಪೆಣ್ಗಳ
ಕಂಗಳ ಸೆರೆವಿಡಿದಿಹುದು ॥ (ಪು. ೫, ಪ. ೫೦)

ಕೆಲವೊಮ್ಮೆ ತುಸುಗ್ರಾಮ್ಯವೆಂದು ಕಂಡರೂ ಶಕ್ತಿಯುತವಾದ ಮಾತು :

ನಿಟ್ಟಿಸಿದರೆ ಮುತ್ತ ಮುದುಕಿಗಾದರು ಜಮ್ಮ
ಧಟ್ಟಿಸುತಿಹುದು ರೂಪವನ ।
ಬಟ್ಟಜವ್ವನೆಯರಂತಿಂತಾದರೆಂದು ಬಾ
ಯಿಟ್ಟೆನ್ನು ನುಡಿಯಲದೇಕೆ ॥ (ಪು. ೫, ಪ. ೫೧)

ಎಂಥ ಸಹಜವಾದ ವರ್ಣನೆಯಿದು. ಸಮುದ್ರ ವರ್ಣನೆಯನ್ನು ಮಾಡು ವಲ್ಲಿ ಸಹ 'ಅಟ್ಟುವ ತೆರೆಯು, ಮುಂದೋಡುವ ತೆರೆಯು, ಪೆರ್ಬೆಟ್ಟದಂತೇಳ್ವ ತೆರೆಗಳಾ ತೊಟ್ಟನೆ ಬಯಲಹ ತೆರೆಗಳನವರು ಕಣ್ಣಿಟ್ಟು ನೋಡಿದರರ್ತಿವಡುತ' ಎಂಬ ಸಹಜವಾದ ಮಾತು; ಸುಂದರ ಉಪಮೆ. ಸಮುದ್ರವನ್ನು ನೋಡಿ ಆನಂದಿಸಿದ ಕವಿಯ ವಾಣಿಯದು.

ಭರತೇಶನು ಭೋಗದ ತೋರ್ಕೆಯಲ್ಲಿ ಅಧ್ಯಾತ್ಮದ ನೆಲೆಯನ್ನು ತಪ್ಪದೆ ಇದ್ದನೆಂಬುದನ್ನು ಕವಿ ಆಗಾಗ ಸಾರುತ್ತಿರುವನು :

ಸಿಕ್ಕಿದಂತಿಹನು ಸಿಕ್ಕನು ರತಿಸುಖದಲ್ಲಿ
ಸೊಕ್ಕಿದಂತಿಹನಲ್ಲಿ ಸೊಕ್ಕ ।
ಠಕ್ಕನಂತಿಹುನದು ಠಕ್ಕಲ್ಲ ನಿಜವ ಕ
ಣ್ಣಿಕ್ಕಿ ಕಂಡವನ ಲೀಲೆಯದು ॥ (ಪು. ೪೮, ಪ. ೯೭)

ಮಾರ್ಗವಲ್ಲೆಂಬಂತೆ ತೋರ್ಪುದನ್ಯರಿಗೆ ಸ
ನ್ಮಾರ್ಗ ದೊಳವನಿರುತಿಹನು ।
ಆರ್ಗ ತಿಳಿಯಬಹುದಾತ್ಮ ವಿಜ್ಞಾನಿಯಂ
ತರ್ಗತವನು ಜಿನ ತಾ ಬಲ್ಲ ॥ (ಪು. ೪೮, ಪ. ೧೦೨)

ಎಲ್ಲ ರಸಗಳು ಭರತೇಶವೈಭವದಲ್ಲಿ ಬಂದಿವೆ ಎನ್ನಬಹುದು. ಕವಿಯು ಶೃಂಗಾರರಸವಿನ್ಯಾಸ ಮಾಡುವುದರಲ್ಲಿ ನಿಸ್ಸೀಮನಾಗಿರುವನು. ಉಪ್ಪರಿಗೆ ಸಂಧಿ, ಅರಗಿಳಿಯಾಳಾಪಸಂಧಿ, ಸರಸಸಂಧಿ, ವೀಣಾಸಂಧಿ, ನಾಟಕಸಂಧಿ— ಇವೆಲ್ಲ ಶೃಂಗಾರ ರಸೋತ್ಪತ್ತಿಗೆ ಬೇಕಾದ ವಿಭಾವಾನುಭಾವ ಸಂಚಾರಿಭಾವ ಗಳನ್ನು ಯಥೇಷ್ಟವಾಗಿ ಕೊಟ್ಟಿವೆ.

ಎಲ್ಲ ರಸಗಳಿಗೆ ಉದಾಹರಣೆಯನ್ನು ಕೊಡದೆ, ರತ್ನಾಕರನು ದಯೆಪಾಲಿಸಿದ ಭಕ್ತಿರಸದ ಬುಗ್ಗೆಗಳನ್ನು ಒಂದಿಷ್ಟು ಗಮನಿಸೋಣ, ಸರ್ವ ಧರ್ಮದವರೂ ಆಸ್ವಾದಿಸಿ ಆನಂದಪಡಬಹುದಾದ ಬುಗ್ಗೆಗಳಿವು :

ಕಡೆಯಿಲ್ಲವಮೃತಸಂಪದವ ನಿನ್ನೊಳಗಿಟ್ಟು
ಬಡವನಂತಿಳೆಗೆ ಕಾಣಿಸುವ ।
ಬೆಡಗಿನ ಸಿದ್ಧಸನ್ಮತಿದೋರು ಭವ್ಯಾತ್ಮ
ರೊಡೆಯ ನಿರಂಜನ ಸಿದ್ಧಾ ॥ (ಪು. ೪೧, ಪ. ೧)

ನೋಡಿ ನೋಡದ ನುಡಿದಾಡಿ ನುಡಿಯದಡೆ
ಯಾಡಿ ನಡೆಯದ ಮಹಾತ್ಮಾ ।
ಕೂಡೆ ಕೊಡೆನಗೆ ಚಿಕ್ಕಲೆಯ ಬೆಳಗನುಂಟು
ಮಾಡು ನಿರಂಜನ ಸಿದ್ಧಾ ॥ (ಪು. ೪೯, ಪ. ೧)

ಉಸುರೆಂಬ ಗರಗಸದಿಂದ ದೇವಾತ್ಮರ
ಬೆಸುಗೆಯ ಬಿಡಿಸಿ ನೋಡಿದರೆ ।
ಮಸುಳದೆ ತೋರ್ವ ಮಹಾತ್ಮ ನೀನೆನಗೊಳ್ಪ
ನೆಸಗು ನಿರಂಜನ ಸಿದ್ಧಾ ॥

## (viii) ಸರ್ವಜ್ಞ (ಸು. ೧೭೦೦)

ಸರ್ವಜ್ಞನ ನಿಜವಾದ ಹೆಸರು, ದೇಶ, ಕಾಲ ಇತ್ಯಾದಿಯನ್ನು ಕುರಿತು ವಾದವಿವಾದಗಳೇನೇ ಇರಲಿ, ನಿರ್ಧಾರವೇನೇ ಇರಲಿ, ಆತನು ಕಾಲಾತೀತ ನಾದ ರಾಷ್ಟ್ರಕವಿ. ಕನ್ನಡ ಸರ್ವಸ್ವವನ್ನು ಪುಟ್ಟ ತ್ರಿಪದಿಗಳಲ್ಲಿ ತುಂಬಿದ ದೊಡ್ಡ ಅನುಭಾವಿ. ಕನ್ನಡ ಜಾನಪದಕ್ಕೆ ಉಸಿರಿನಂತಿರುವ ತ್ರಿಪದಿ

ಛಂದಸ್ಸನ್ನು ಸರ್ವಜ್ಞನಷ್ಟು ಪರಿಣಾಮದಿಂದ ಪ್ರಯೋಗಿಸಿದವರು ಪ್ರಾಯಶಃ ಬೇರೊಬ್ಬ ಕವಿ ಇರಲಾರನು.

ಒಂದೊಂದು ನಾಡುನುಡಿಗಳ ಪುಣ್ಯದಿಂದ ಅಂಥ ಕವಿಗಳು ಜನ್ಮವೆತ್ತುವರು. ತಮಿಳಿನ ತಿರುವಳ್ಳುವರ್ ತಿರುಕ್ಕುರಳಿನಲ್ಲಿ ತಮಿಳು ಸಂಸ್ಕೃತಿಯನ್ನು ಅಮರವಾಗಿ ಚಿತ್ರಿಸಿದನು. ತೆಲಗು ಸಂಸ್ಕೃತಿಯನ್ನು ವೇಮನನು ಪದ್ಯಗಳಲ್ಲಿ ಅಮರವಾಗಿ ಚಿತ್ರಿಸಿದನು. ಸರ್ವಜ್ಞನು ಕನ್ನಡ ಸಂಸ್ಕೃತಿಯನ್ನು ತನ್ನ ವಚನಗಳಲ್ಲಿ ಶಾಶ್ವತಗೊಳಿಸಿದನು.

ಸರ್ವಜ್ಞನು ಕ್ರಾಂತಿಮೂರ್ತಿ. ಕರ್ಣಾಟಕದ ಅರಸು ಮನೆತನಗಳು ಕಳೆಗುಂದಿ ದೇಶದ ಆದ್ಯಂತ ನೀತಿಧರ್ಮಗಳ ನೆಲೆಗಟ್ಟು ಶಿಥಿಲವಾಗಿದ್ದ ಕಾಲದಲ್ಲಿ ಆತನು ಉದಯಿಸಿದನು. ತನ್ನ ಸುತ್ತಮುತ್ತನ್ನು ನೋಡಿ ಬಹಳವಾಗಿ ನೊಂದನು ; ಕುಶಾಗ್ರಬುದ್ಧಿವಂತ ; ಯಾರ ಹಂಗಿಗೂ ಒಳಗಾದವನಲ್ಲ. ಕಂಡುದನ್ನು ಕಂಡಂತೆ ಹೇಳುವಂಥ ಆಂತರಿಕ ಶಕ್ತಿ ಆತನಿಗೆ ದೈವದತ್ತವಾಗಿ ಬಂದಿತ್ತು. ಆದರೂ "ಹೇಳಲರಿಯೆನು ನಾನು, ಹೇಳಿನಲು ಹೇಳಿದೆನು, ಭಾಳಲೋಚನನ ಶರಣರ ಆಳಾಗಿ ಹೇಳಿದೆನು", "ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ, ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯವೆಲ್ಲವರಿಗಿಲ್ಲ", "ಸರ್ವಜ್ಞನೆಂಬವನು ಗರ್ವದಿಂದಾದವನೆ, ಸರ್ವರೊಳು ಒಂದೊಂದು ನುಡಿಗಲಿತು, ವಿದ್ಯೆಯಾ ಪರ್ವತವೆ ಆದ" ಎಂದು ಮುಂತಾಗಿ ವಿನಯವನ್ನು ವ್ಯಕ್ತಪಡಿಸುತ್ತಾನೆ.

ತಾನೊಬ್ಬ ಯೋಗಿ ಅಥವಾ ಉಪದೇಶಿ ಅಥವಾ ಕವಿ ಎಂಬ ಯಾವ ತರದ ಹೆಮ್ಮೆಯೂ ಈ ಕ್ರಾಂತಿಪುರುಷನಿಗಿಲ್ಲ. ಆತನಿಗೆ ಹೊಗಳಿಕೆ ಬೇಕಾಗಿಲ್ಲ, ಆದ್ದರಿಂದ ನಿರ್ಭೀತಿಯಿಂದ ಸ್ವಾತಂತ್ರ್ಯವಹಿಸಿ ಹೇಳಿದನು ; ನೇರವಾಗಿ ಹೇಳಿದನು ; ಕವಿತಾಪ್ರೌಢಿಮೆಯತ್ತ ದೃಷ್ಟಿ ಕೂಡ ಹೊರಳಿಸಲಿಲ್ಲ ; ಕವಿಸಮಯ ವರ್ಣನೆಗಳ ಗೊಡವೆಗೇ ಹೋಗಲಿಲ್ಲ. ಅವನಿಗೆ ಎಷ್ಟೋ ಗೊತ್ತಿತ್ತು ; ಅದನ್ನೆಲ್ಲ ಜನಸಾಮಾನ್ಯ ತಿಳಿಯಬೇಕಾದರೆ ಸುಲಭಸಹಜತೆ ಒಂದೇ ದಾರಿ ; ಅದೇ ದಾರಿಯನ್ನು ತುಳಿದನು. ಭವಭೂತಿಯು ಮಹಾತ್ಮರನ್ನು ಕುರಿತು ಹೇಳಿದಂತೆ, ಸರ್ವಜ್ಞನು ವಜ್ರಕ್ಕಿಂತಲೂ ಕಠೋರನಾಗಬಲ್ಲನು, ಕುಸುಮ

ಕ್ಕಿಂತಲೂ ಮೃದುವಾಗಬಲ್ಲನು. ತನ್ನ ಈ ಅನುಪಮ ಶಕ್ತಿಯಿಂದ ಸರ್ವಜ್ಞ ವಚನಗಳೆಂಬ ಪುಟ್ಟ ವಿಶ್ವಕೋಶವನ್ನು ಕನ್ನಡ ಜನಕ್ಕೆ ಕಾಣಿಕೆಯಾಗಿ ಕೊಟ್ಟನು.

ಸರ್ವಜ್ಞ ವಚನಗಳನ್ನು ಗುರುಪದ್ಧತಿ, ಲಿಂಗಪದ್ಧತಿ ಭಕ್ತಿಪದ್ಧತಿ, ಜ್ಞಾನಪದ್ಧತಿ, ಯೋಗಪದ್ಧತಿ, ದಾನಪದ್ಧತಿ, ರಾಜನೀತಿಪದ್ಧತಿ, ದೇಶಪದ್ಧತಿ ಇತ್ಯಾದಿಯಾಗಿ ೩೩ ಪದ್ಧತಿಗಳಾಗಿ ವಿಭಾಗಿಸುವುದುಂಟು. ಪಂಜೆಯವರು ಸರ್ವಜ್ಞನ 'ಓನಾಮಪದ್ಧತಿ' ಎಂಬೊಂದು ವಿಭಾಗವನ್ನು ಸೂಚಿಸಿರುವುದು ಮನನೀಯವಾಗಿದೆ. ಅವನು ಅಲ್ಲಲ್ಲಿ ಹೇಳಿರುವ ಶಿಕ್ಷಣದ ಸೂಕ್ತಿಗಳನ್ನು ಕ್ರೋಢೀಕರಿಸಿ ಸರ್ವಜ್ಞನ ಓನಾಮ ಪದ್ಧತಿಯೆಂದು ಹೆಸರಿಟ್ಟು ಓದಿದರೆ, "ಅವನು ಸಾಹಿತಿಗಳನ್ನು ತಲೆದೂಗಿಸತಕ್ಕ ಕವಿಯೂ ಅಲ್ಲದೆ ಈಗಿನ ಶಾಲಾ ಉಪಾಧ್ಯಾಯರು ಮನ್ನಿಸತಕ್ಕ ಶಿಕ್ಷಣತಜ್ಞನೂ ಮನಶ್ಶಾಸ್ತ್ರಜ್ಞನೂ ಆಗಿದ ನೆಂದು ಖಂಡಿತವಾಗಿ ಹೇಳಬಹುದು" ಎಂಬುದಾಗಿ ಅವರು ಹೇಳಿದ್ದಾರೆ.

ಕರದಿ ಕಪ್ಪರ ಉಂಟು ಹಿರಿದೊಂದು ನಾಡುಂಟು
ಹರನೆಂಬ ದೈವ—ನಮಗುಂಟು ಸಿರಿವರಿಂ
ಸಿರಿವಂತರಾರು ಸರ್ವಜ್ಞ ॥

ಎಂಬ ಮಾತನ್ನು ಗಮನಿಸಿದರೆ, ಸರ್ವಜ್ಞನು ಜಂಗಮನಾಗಿ ಊರಿನಿಂದ ಊರಿಗೆ ಸಂಚರಿಸುತ್ತಾ ಹರನ ಅಚಲಭಕ್ತಿಯನ್ನಿಟುಕೊಂಡು ವಿರಕ್ತನಾಗಿ ನಿಜವಾದ 'ಸಿರಿವಂತ'ನಾಗಿದ್ದನೆನ್ನಬಹುದು.

ಸರ್ವಜ್ಞನು ಕಂಡುಕೊಂಡ ದೇವರು

ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೆ ಸರ್ವಜ್ಞ ॥

ಕಲ್ಲಿನಲಿ ಮಣ್ಣಿನಲಿ ಮುಳ್ಳಿನಾ ಮೊನೆಯಲ್ಲಿ
ಎಲ್ಲಿ ನೆನೆದಲ್ಲಿ ಶಿವನಿರ್ಪನವ ನೀನಿ
ದ್ದಲ್ಲಿಯೇ ಇರುವ ಸರ್ವಜ್ಞ ॥

ಪರಮ ಪದಂ ಸದಾ ಪಶ್ಯಂತಿ ಸೂರಯಃ—ಎಂಬ ಶ್ರುತಿವಚನದ ಸಾರವು ಮೇಲಿನ ವಚನದದಲ್ಲಿ ಎಷ್ಟು ಸುಂದರವಾಗಿ ಮತ್ತು ಅನುಭವಪೂರ್ವಕವಾಗಿ ಹೇಳಲ್ಪಟ್ಟಿದೆ.

ನಿರ್ಮಲ ಭಕ್ತಿಯೆ ಮುಖ್ಯ

ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು
ಎತ್ತು ಗಾಣವನು ಹೊತ್ತು ತಾ ನಿತ್ಯದಿ
ಸುತ್ತಿ ಬಂದಂತೆ ಸರ್ವಜ್ಞ ॥

ಮನದಲ್ಲಿ ನೆನೆವರಿಗೆ ಮನೆಯೇನು ಮಠವೇನು
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲ್ಲಿದ್ದೇನು ಸರ್ವಜ್ಞ ॥

ಕೋಪವು ಪಾಪದ ನೆಲೆಗಟ್ಟು

ಕೋಪವೆಂಬುದು ಕೇಳು ಪಾಪದಾ ನೆಲೆಗಟ್ಟು
ಕೂಪದೊಳು ನೇಣು ಹರಿದಂತೆ ನರಕಕೆ
ಕೋಪಿ ತಾನಿಳಿದ ಸರ್ವಜ್ಞ ॥

ಜಾತಿವೈಷಮ್ಯ ಬೇಡ

ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ
ಜಾತಿ ವಿಜಾತಿಯೆನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ ॥

ಸಜ್ಜನ-ದುರ್ಜನರ ಚಿತ್ರ—ಎಷ್ಟು ಮಾರ್ಮಿಕ !

ಡೊಂಕು ಫಲದೊಳಗೆಲ್ಲ ಡೊಂಕು ಬಾಳೆಯ ಹಣ್ಣು
ಡೊಂಕಾದರೊಳಗೆ ರುಚಿಯುಂಟು ಸಜ್ಜನರ
ಡೊಂಕು ಇಂತಿರ್ಪುದಯ್ಯ ಸರ್ವಜ್ಞ ॥

ಕೆಂಪು ಫಲದೊಳಗೆಲ್ಲ ಕೆಂಪು ಮೆಕ್ಕೆಯ ಹಣ್ಣು
ಕೆಂಪಾದರೊಳಗೆ ರುಚಿಯಿಲ್ಲ ದುರ್ಜನರ
ಕೆಂಪು ಇಂತಿರ್ಪುದಯ್ಯ ಸರ್ವಜ್ಞ ॥

ಶಿಸ್ತಿನ ಬೆಲೆ

ಆಳಾಗಬಲ್ಲವನು ಆಳುವನು ಅರಸಾಗಿ
ಆಳಾಗಿ ಬಾಳಲರಿಯದನು ಕಡೆಯಲ್ಲಿ
ಹಾಳಾಗಿ ಹೋಹ ಸರ್ವಜ್ಞ ॥

ಈ ಆರೋಗ್ಯ ಸೂತ್ರವನ್ನನುಸರಿಸಿದರೆ ವೈದ್ಯರ ಗೊಡವೆಯಿಲ್ಲವಂತೆ

ಹಸಿಯುದಿರೆ ಉಣಬೇಡ ಹಸಿದು ಮತ್ತಿರಬೇಡ
ಬಿಸಿ ಬೇಡ ತಂಗೂಳುಣಬೇಡ ವೈದ್ಯರಾ
ಬೆಸನವೇ ಬೇಡ ಸರ್ವಜ್ಞ ॥

ಸ್ವಾತಂತ್ರ್ಯದ ಹಿರಿಮೆ

ತಂತ್ರಿವಾದ್ಯವು ಲೇಸು ಮಂತ್ರಿಯಾ ಕೆಳೆ ಲೇಸು
ಯಂತ್ರವಾಹಕನ ದಯೆ ಲೇಸು ಜಗದಿ ಸ್ವಾ
ತಂತ್ರವೇ ಲೇಸು ಸರ್ವಜ್ಞ ॥

ಸರ್ವಜ್ಞನ ಚಿನ್ನದ ಗಣಿಯಿಂದ ಎಷ್ಟು ತೆಗೆದರೂ ಮುಗಿಯದು.

## ಹರಿದಾಸ ಸಾಹಿತ್ಯ

ಹರಿದಾಸರೆಂಬ ವೈಷ್ಣವ ಅನುಭಾವಿಗಳು ಶಿವಶರಣರಂತೆ ಕನ್ನಡನುಡಿಯ ಶಕ್ತಿಯನ್ನು ಅರಿತವರಾಗಿದ್ದರು. ವೇದಶಾಸ್ತ್ರಗಳಲ್ಲಡಕವಾದ ನಿತ್ಯಸತ್ಯಗಳನ್ನು ಜೀವನದಲ್ಲಿ ಕಂಡುಕೊಂಡು, ಆ ಅನುಭವಗಳನ್ನು ಹಾಡು ಕಟ್ಟಿ ಕನ್ನಡ ಲೋಕಕ್ಕೆ ಸಾರಿದರು. ಇದೇ ದಾಸವಾಙ್ಮಯ. ನರಹರಿತೀರ್ಥ (೧೨೮೧) ಈ ಸಂಪ್ರದಾಯದ ಮೊದಲಿಗನೆಂಬುದಾಗಿ ತಿಳಿದುಬಂದಿದೆ. ಮುಂದೆ ೧೬ನೆಯ ಶತಮಾನದ ಪೂರ್ವಾರ್ಧದವರೆಗೆ ಈ ಕ್ಷೇತ್ರದಲ್ಲಿ ಅಷ್ಟು ಕೃತಿರಚನೆಯಾದಂತೆ ಕಂಡುಬರುವುದಿಲ್ಲ. ವಿಜಯನಗರದ ಉಚ್ಛ್ರಾಯಕಾಲದಲ್ಲಿ ಶ್ರೀವ್ಯಾಸ ರಾಯನ (೧೫೩೯) ನೇತೃತ್ವದಲ್ಲಿ ದಾಸವಾಙ್ಮಯವು ಗೌರೀಶಂಕರವನ್ನು ಮುಟ್ಟಿತು. ವ್ಯಾಸರಾಯನು ತನ್ನ ಗುರುವಾದ ಶ್ರೀಪಾದರಾಯನಿಂದ ಸ್ಫೂರ್ತಿಪಡೆದು ಆತನ ಸುಲಲಿತವಾದ ಭಕ್ತಿಮಾರ್ಗದಲ್ಲಿ ನಡೆದು ಸ್ವತಃ

ಕೀರ್ತನೆಗಳನ್ನು ರಚಿಸಿ, ದಾಸಸಾಹಿತ್ಯದ ಅಶ್ವಿನಿದೇವತೆಗಳಂತಿರುವ ಪುರಂದರದಾಸ, ಕನಕದಾಸರಿಗೆ (೧೫೫೦) ಮಾರ್ಗದರ್ಶಕನಾದನು. ಈ ಸಂಪ್ರದಾಯವನ್ನು ಪ್ರಸನ್ನವೆಂಕಟದಾಸ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸ ಎಂಬ ದಾಸಶ್ರೇಷ್ಠರು ೧೮ನೆಯ ಶತಮಾನದಲ್ಲಿ ಮುಂದುವರಿಸಿದರು.

ದಾಸವಾಙ್ಮಯವನ್ನು ರಚನೆಯ (ರೂಪದ) ದೃಷ್ಟಿಯಿಂದ ಉಗಾಭೋಗ, ಸುಳಾದಿ, ಕೀರ್ತನೆ ಎಂಬುದಾಗಿ ಮೂರು ವರ್ಗಗಳಾಗಿ ವಿಂಗಡಿಸುವರು. ಇವುಗಳಲ್ಲಿ ಮೊದಲಿನೆರಡನ್ನು ಹಾಡುವ ಮಟ್ಟು ಈಗ ಸರಿಯಾಗಿ ತಿಳಿದಿಲ್ಲ. ಕೀರ್ತನೆಗಳನ್ನು ತಾಳಲಯಬದ್ಧವಾಗಿ ಹಾಡುವರು. ಕೀರ್ತನೆಗಳು ಬಹಳ ಇಂಪಾಗಿ ದ್ರಾಕ್ಷಾಪಾಕವಾಗಿರುವುದರಿಂದ ಅವುಗಳ ಸಾರ ಜನಸಾಮಾನ್ಯಕ್ಕೂ ಮನನಂಬುಗುವುದು. ಕನ್ನಡ ನಾಡಿನಲ್ಲಿ ಮನೆಮನೆಗಳಲ್ಲಿ ಕೀರ್ತನೆಗಳನ್ನು ಹಾಡುವ ಸಂಪ್ರದಾಯ ಕಳೆದ ೫೦ ವರ್ಷಗಳವರೆಗೂ ಉಳಿದಿತ್ತು. ಉಷಃಕಾಲದಲ್ಲಿ ಹಸೆಯಿಂದೆದ್ದು ಎಲ್ಲ ಕೆಲಸಕ್ಕೆ ಮೊದಲೆ 'ಉದಯರಾಗ' ಹೇಳುವುದು ನಿತ್ಯವಿಧಿಯಾಗಿತ್ತು. ಈಗ ಈ ಸಂಪ್ರದಾಯ ಶಿಥಿಲವಾಗುತ್ತಾ ಬಂದಿರುವುದು ದುರ್ದೈವ. ಅಂತು ಹರಿದಾಸರ ಮತ್ತು ಸಂಗೀತಶಾಸ್ತ್ರಜ್ಞರ ಮೂಲಕವಾಗಿಯಾದರೂ ಕೀರ್ತನೆಗಳನ್ನು ಹಾಡುವ ಮಟ್ಟು ಶುದ್ಧವಾಗಿಯೇ ಉಳಿದುಕೊಂಡಿದೆ ಎನ್ನಬಹುದು.

ದಾಸಕೂಟದಲ್ಲಿ ಅತ್ಯಂತ ಶ್ರೇಷ್ಠರೆನಿಸಿದ ಪುರಂದರದಾಸ(೧೫೫೦), ಕನಕದಾಸರನ್ನು (೧೫೫೦) ಮತ್ತು ಅವರ ಕೃತಿಗಳನ್ನು ಕುರಿತು ಎರಡು ಮಾತಗಳು.

## ೧. ಪುರಂದರದಾಸ (೧೫೫೦)

ಪುರಂದರದಾಸನ ಮೊದಲಿನ ಹೆಸರು ವರದಪ್ಪನಾಯಕನೆಂದಾಗಿತ್ತು. ಆಗರ್ಭಶ್ರೀಮಂತನಾಗಿದ್ದ ನಾಯಕ ಸನ್ನಿಹಿತಕಾಲದಲ್ಲಿ ಪರಮವಿರಕ್ತನಾಗಿ ಐಶ್ವರ್ಯವನ್ನೆಲ್ಲ ದಾನಮಾಡಿ ಹರಿದಾಸನಾದನು.

'ದಾಸರೆಂದರೆ ಪುರಂದರದಾಸರಯ್ಯಾ' ಎಂಬುದಾಗಿ ಗುರುವಿನಿಂದ

ಹೊಗಳಿಸಿಕೊಂಡ ಮಹಾತ್ಮ ಪುರಂದರದಾಸನು ಮತ ತತ್ವಪುರಾಣ ಸಾಹಿತ್ಯ ಅನುಭವಗಳ ರಸಪಾಕ ಮಾಡಿದನು ; ಹಾಡಿ ನಲಿದನು ; ನಲಿದು ಹಾಡಿದನು ; ಲೋಕವನ್ನೇ ನಲಿಸಿದನು. ಸುಮಾರು 4¾ ಲಕ್ಷ ಕೀರ್ತನೆಗಳನ್ನು ರಚಿಸಿದ ನೆಂಬುದಾಗಿ ಪ್ರತೀತಿಯಿದೆ. ಅದ್ಭುತ ಮಹಾಮಹಿಮ. ಪುರಂದರದಾಸನ ಕೀರ್ತನೆಗಳಿಗೆ ಆತನ ಇಷ್ಟದೇವತೆಯಾದ ಪುರಂದರವಿಠಲನ ಮುದ್ರಿಕೆ ಇರುತ್ತದೆ. ಅವನ ಕೀರ್ತನೆಗಳು ಭಕ್ತಿಜ್ಞಾನವೈರಾಗ್ಯಗಳ ಗಣಿಗಳೂ ಹೌದು ; ಕರ್ಣಾಟಕ ಸಂಗೀತದ ವಿವಿಧ ಪ್ರಯೋಗಗಳೂ ಹೌದು. 'ಶ್ರೀ ಗಣನಾಥ ಸಿಂಧೂರವರ್ಣ, ಕರುಣಾಸಾಗರ ಕರಿವದನ ಲಂಬೋದರ ಲಕುಮಿಕರ....". (೨) 'ಕುಂದ ಗೌರಿ' (೩) 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೊ ಹರಿಯ ಕರುಣದೊಳಾದ ಭಾಗ್ಯವ ಹರಿಸಮರ್ಪಣೆಮಾಡಿ ಬದುಕಿರೋ । ಶ್ರೀ ಪುರಂದರ ವಿಠಲರಾಯನ ಚರಣಕಮಲವ ನಂಬಿ ಬದುಕಿರೋ'. ಇಲ್ಲಿ ಹೇಳಿದ ಮೂರು ಗೀತೆಗಳಿಗೆ ಕೊನೆಯಲ್ಲಿ ಪುರಂದರವಿಠಲನ ಮುದ್ರಿಕೆ ಬಂದಿರುತ್ತದೆ. ಈ 'ಪಿಳ್ಳಾರಿಗೀತ'[1] ಎಂಬ ಪ್ರಸಿದ್ಧ ಪ್ರಾರ್ಥನಾಶ್ಲೋಕ ಕರ್ಣಾಟಕ ಸಂಗೀತಶಾಸ್ತ್ರಾ ಭ್ಯಾಸ ಪ್ರಾರಂಭಮಾಡುವವರಿಗೆಲ್ಲ ಮೊದಲಾದ ಮಂಗಲಗೀತ. ಇದರ ತಳ ಹದಿಯ ಮೇಲೆ ಸಂಗೀತಶಾಸ್ತ್ರದ ಭವ್ಯಮಂದಿರವನ್ನು ಕಟ್ಟಿದೆ. ತ್ಯಾಗರಾಜ ನಂಥ ಸಂಗೀತಯೋಗಿಗೆ ಸ್ಫೂರ್ತಿಕೊಟ್ಟ ಆಚಾರ್ಯನು ಪುರಂದರ ದಾಸನು.

ಉತ್ತಮ ಅನುಭಾವಿಗಳೆಲ್ಲರ ತವನಿಧಿಯೆಂದರೆ 'ಭಕ್ತಿ'. ಹರಿದಾಸರಿಗೆ ಮುಕುಂದನ ಮೇಲೆ ಅಚಲವಾದ ಭಕ್ತಿ. ಅದರಿಂದ ಆನಂದಸಾಂದ್ರತೆಯ ಸಿದ್ಧಿ. ಕೊನೆಯಲ್ಲಿ ಮೋಕ್ಷಸಾಮ್ರಾಜ್ಯ ಲಕ್ಷ್ಮಿಯನ್ನು ಸುಲಭವಾಗಿ ಒಲಿಸಿಕೊಳ್ಳು ವುದು. ಇದು ಅದರ ರೀತಿ. —'ವಿಷಯಾನುಗುಣವಾಗಿ ನಾಮಮಹಿಮೆ,

———

[1] 'ಪಿಳ್ಳೆಯಾರ್' ಎಂದರೆ ತಮಿಳಿನಲ್ಲಿ ಗಣಪತಿಯ ಹೆಸರು. ಇದೇ ಶಬ್ದರೂಪದಲ್ಲಿ ವ್ಯತ್ಯಾಸವುಂಟಾಗಿ 'ಪಿಳ್ಳಾರಿ' ಎಂದಾಗಿರಬೇಕು. 'ಪಿಳ್ಳಾರಿಗೀತ'ವೆಂದರೆ ಗಣಪತಿಸ್ತುತಿ. ಪುರಂದರದಾಸನು ಕರ್ಣಾಟಕ ಸಂಗೀತಕ್ಕೆ ಅಸ್ತಿಭಾರವನ್ನು ಹಾಕಿದುದಲ್ಲದೆ, ಕನ್ನಡ ಸಾಹಿತ್ಯಕ್ಕೂ ಸುಂದರ ಗೀತಗಳನ್ನು ಕೊಟ್ಟನು.

ಹರಿಗುರುಗಳ ಸ್ಮರಣೆ–ಸ್ತುತಿ, ಅಂತರಂಗ ನಿವೇದನೆ, ಕೃಷ್ಣಲೀಲೆ, ಸಮಾಜ ವಿಮರ್ಶೆ, ಸಮಾಜಬೋಧನೆ....ಹೀಗೆ ಸ್ಥೂಲವಾಗಿ ಎಲ್ಲ ದಾಸರ, ವಿಶೇಷವಾಗಿ ಪುರಂದರದಾಸನ ಕೀರ್ತನೆಗಳನ್ನು ವಿಭಾಗಿಸಬಹುದು'.[1] ಈ ಕೀರ್ತನೆಗಳನ್ನು ಪರಿಶೀಲಿಸಿದರೆ ಮೇಲೆ ಸೂಚಿಸಿದ ಗುಣಗಣಗಳೊಂದಿಗೆ ಸೊಬಗಿನ ಸಾಹಿತ್ಯವೂ ಮಧುರ ಸಂಗೀತವೂ ಅವುಗಳಲ್ಲಿ ಮನೆಮಾಡಿಕೊಂಡಿವೆ ಎಂಬುದನ್ನು ತಿಳಿಯ ಬಹುದು.

### ಪುರಂದರದಾಸ ಕೃತಿಗಳಿಂದ ಕೆಲವು "ಕೆಲ್ಲುಸಕ್ಕರೆ ತುಂಡುಗಳು"

ಡಾಂಭಿಕತನವನ್ನು ಟೀಕಿಸಿದುದು ಎಷ್ಟು ಮಾರ್ಮಿಕವಾಗಿದೆ! ಇಲ್ಲಿ ಹೇಳಿರುವ ದೃಶ್ಯ ನಮ್ಮ ಸುತ್ತಲೂ ಯಾವಾಗಲೂ ಇದೆ. ಇದು ಅನ್ವಯಿಸುವ ಪ್ರತಿಯೊಬ್ಬನೂ ಇದರೊಳಗೆ ತನ್ನನ್ನು ಕಂಡುಕೊಂಡು ತನ್ನ ಡೊಂಕೇನಾದರೂ ಇದ್ದರೆ ಅದನ್ನು ತಿದ್ದಿಕೊಳ್ಳಬಹುದು.

ಉದರವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ॥ ಪಲ್ಲವಿ ॥

ಉದಯ ಕಾಲದಲೆದ್ದು ಗಡಗಡ ನಡುಗುತ
ನದಿಯೊಳು ಮಿಂದೆವೆಂದು ಹೇಳುತಲಿ
ಮದ ಮತ್ಸರ ಮೋಹ ಒಳಗೆ ತುಂಬಿಟ್ಟುಕೊಂಡು
ಒದಿಯಲಿದ್ದವರಿಗಾಶ್ಚರ್ಯ ತೋರುವುದು ॥ ೧ ॥

ಕಂಚುಗಾರರಾ ಅಂಗಡಿಯಂದದಿ
ಕಂಚುಹಿತ್ತಾಳೆಯ ಪ್ರತಿಮೆಯ ನೆರಹಿ
ಮಿಂಚಲೆನುತ ಬಹು ಜ್ಯೋತಿಗಳನೆ ಹಚ್ಚಿ
ವಂಚನೆಯಲಿ ಘನಪೂಜೆ ಮಾಡುವುದು ॥ ೨ ॥

ಕರದೊಳು ಜಪಮಣಿ ಬಾಯೊಳು ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ

---

[1] ಕ. ಸಾ. ಚ., ಪು. ೨೮೨.

ಪರಸತಿ ಪರಧನಕಾಗಿ ಚಿಂತಿಸುತೆ
ಪರಮ ವೈರಾಗ್ಯದ ಮೂರ್ತಿಯೆನಿಸುವುದು ॥ ೩ ॥

ಬೂಟಕತನದಲಿ ಬಹಳ ಭಕುತಿ ಮಾಡಿ
ನೋಟಕೆ ಇವನಿಗೆ ಸರಿಯಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಬವ ತೋರೆ
ಊಟದ ಮಾರ್ಗದ ಜ್ಞಾನವಿದಲ್ಲದೆ ॥ ೪ ॥

ನಾನು ಎಂಬುದ ಬಿಟ್ಟು ಜ್ಞಾನಿಗಳೊಡಗೂಡಿ
ಏನೆಲ್ಲಕ್ಕೆ ದೇವಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ॥ ೫ ॥

ಕೆಳಗಿನ ಪುಟ್ಟ ಕೀರ್ತನೆಯಲ್ಲಿ ಕರ್ತವ್ಯ, ತತ್ವಬೋಧೆಯನ್ನು ಕಾಣು ತ್ತೇವೆ. ನಿತ್ಯಜೀವನದಲ್ಲಿ ಕಾಣುವ ಸುಂದರ ದೃಷ್ಟಾಂತಗಳು ಕೀರ್ತನೆಗೆ ಸಾಹಿತ್ಯದ ಸೌಂದರ್ಯವನ್ನು ತಂದಿವೆ :

ಈಸಬೇಕು ಇದ್ದು ಜೈಸಬೇಕು
ಹೇಸಿಕೆ ಸಂಸಾರದಲ್ಲಿ ಆಸೆ ಲೇಶ ಮಾಡದಂತೆ ॥ ಪಲ್ಲವಿ ॥

ತಾವರೆಯ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮನೆನುತ ಪಾಡಿ ಕಾಮಿತ ಕೈಕೊಂಬರೆಲ್ಲ ॥ ೧ ॥

ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ ಧೀರ ಕೃಷ್ಣನ ನೆನೆವರಲ್ಲ ॥ ೨ ॥

ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆ ಪಟ್ಟ ಪರಿಯಂತೆ
ಮೋಸಹೋಗದಂತೆ ಜಗದೀಶ ಪುರಂದರ ವಿಠಲನೆನುತ ॥ ೩ ॥

ಭಕ್ತನು ದೇವರನ್ನು ಶರಣುಹೊಕ್ಕು ತನ್ನ ಅಸಹಾಯತೆಯನ್ನು ತೋಡಿ ಭಕ್ತವತ್ಸಲನೆಂಬ ಬಿರುದನ್ನು ಏಕೆ ಸಾರ್ಥಕ್ಯಗೊಳಿಸುವುದಿಲ್ಲ ಎಂಬುದಾಗಿ ಪಟ್ಟುಹಿಡಿಯುವುದು ಎಂಥ ಉತ್ತಮ ಕಾವ್ಯವಾಗಿದೆ !

ಕಂಡು ಕಂಡು ನೀ ಎನ್ನ ಕೈಬಿಡುವರೇ
ಪುಂಡರೀಕಾಕ್ಷ ಪುರುಷೋತ್ತಮ ದೇವ ॥ ಪಲ್ಲವಿ ॥

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನೈ ನೀರಜಾಕ್ಷ
ತಂದೆತಾಯಿಯು ನೀನೆ ಬಂಧುಬಳಗವು ನೀನೆ
ಎಂದೆಂದಿಗೂ ನಿನ್ನ ನಂಬಿದೆನೋ ಕೃಷ್ಣ ॥ ೧ ॥

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದ ಭವದಿ ನೊಂದೆ ನಾನು
ಸನಕಾದಿ ಮುನಿವಂದ್ಯ ವನಜಸಂಭವನ ಪಿತ
ಫಣಿಶಾಯಿ ಪ್ರಹ್ಲಾದವರದ ಶ್ರೀಕೃಷ್ಣ ॥ ೨ ॥

ಭಕ್ತವತ್ಸಲನೆಂಬೊ ಬಿರುದ ಪೊತ್ತಮೇಲೆ
ಭಕ್ತರಾಧೀನನಾಗಿರಬೇಡವೇ
ಮುಕ್ತಿದಾಯಕ ದೇವ ಪುರಂದರವಿಠಲನೆ
ಶಕ್ತ ನೀನಹುದೆಂದು ನಂಬಿದೆನೊ ಕೃಷ್ಣ ॥ ೩ ॥

## ೨. ಕನಕದಾಸ (೧೫೫೦)

ಕನಕದಾಸನು ಕುರುಬರ ವಂಶದಲ್ಲಿ ಹುಟ್ಟಿದ ಒಬ್ಬ ಮಹಾನುಭಾವಿ. ದಾಸಕೂಟದಲ್ಲಿ ಕನಕಪುರಂದರರಷ್ಟು ಪ್ರಭಾವಶಾಲಿ ದಾಸರು ಬೇರೆ ಯಾರೂ ಇಲ್ಲವೆಂದರೆ ತಪ್ಪಾಗದು. ಕನಕದಾಸನೂ ಪುರಂದರದಾಸನೂ ವ್ಯಾಸರಾಯ ನಲ್ಲಿ ಸಹಾಧ್ಯಾಯಿಗಳಾಗಿದ್ದರೆಂಬ ಪ್ರತೀತಿಯಿದೆ. ಕನಕದಾಸನು ತನ್ನ ಕೀರ್ತನೆಗಳನ್ನೆಲ್ಲ ತನ್ನ ಇಷ್ಟದೇವತೆಯಾದ ಕಾಗಿನೆಲೆಯ ಆದಿಕೇಶವನಿಗೆ ಅಂಕಿತ ಮಾಡಿದ್ದಾನೆ. ಈತನು 'ಮೋಹನತರಂಗಿಣಿ', 'ಹರಿಭಕ್ತಿಸಾರ', 'ರಾಮಧಾನ್ಯ ಚರಿತ್ರೆ', 'ನಳಚರಿತ್ರೆ' ಮೊದಲಾದ ಕಾವ್ಯಗಳನ್ನೂ ಅನೇಕ ಕೀರ್ತನೆಗಳನ್ನೂ ರಚಿಸಿರುವನು. (ಪುರಂದರದಾಸನಾದರೆ ದೀರ್ಘ ಕಾವ್ಯಗಳನ್ನು ಬರೆದಿರಲಿಲ್ಲ).

'ಮೋಹನತರಂಗಿಣಿ'ಯಲ್ಲಿ ಕಾಮದಹನ, ಉಷಾ–ಅನಿರುದ್ಧ ವಿವಾಹ ಎಂಬ ಪುರಾಣಕಥಾ ವಸ್ತುವನ್ನು ಬಳಸಿಕೊಂಡು ಹಾಡುಗಬ್ಬಕ್ಕೆ ಹೇಳಿದ ಛಂದಸ್ಸಾರ ಸಾಂಗತ್ಯದಲ್ಲಿ ಒಂದು ಉತ್ತಮ ಪುರಾಣಕಾವ್ಯವನ್ನು ಕನಕ

ದಾಸನು ದಯಪಾಲಿಸಿದ್ದಾನೆ. ವರ್ಣನಾಚಾತುರ್ಯ, ಸನ್ನಿವೇಶ ರಚನೆ, ವಿವಿಧ ರಸಗಳು—ಇತ್ಯಾದಿ ಕಾವ್ಯಸಂಪತ್ತನ್ನು ಇದರಲ್ಲಿ ಕಾಣಬಹುದು. ಆತನ 'ನಳಚರಿತ್ರೆ' ಎಂಬ ಕಥನಕವನವು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಇದೊಂದು ಮಾನವೀಯತೆಯ ವಿವಿಧ ಭಾವಗಳನ್ನು ವಿಶದಪಡಿಸುವ ಪುಟ್ಟ ರಸಪಾಕ. ಸುಲಭವಾದ ಭಾಷೆ, ಸುಂದರ ಶೈಲಿಗಳಿಂದ ನಿರರ್ಗಳವಾಗಿ ಓಡುತ್ತದೆ. ಅದರಿಂದ ಒಂದು ಉದಾಹರಣೆ.

ನಳನು ನಿದ್ರಿಸುತ್ತಿದ್ದ ದಮಯಂತಿಯನ್ನು ಕಾಡಿನಲ್ಲಿ ಬಿಟ್ಟುಹೋದನು; ಸ್ವಲ್ಪದರಲ್ಲಿ ತನ್ನ ದ್ರೋಹವನ್ನು ನೆನೆನೆನೆದು, ನಳನು ಚಿಂತಿಸುತ್ತಾನೆ; ಎಂಥ ಪಶ್ಚಾತ್ತಾಪವಿದು !

ವನಿತೆ ಮಲಗಿಹಳೋ ಅಧೈರ್ಯದಿ
ನೆನೆವಳೋ ದೈವವನು ಮನದಲಿ
ಕನಸು ಕಂಡೇಳುವಳೋ ಕಾಣದೆ ಹಲವ ಹಂಬಲಿಸಿ ।
ಕನಲಿ ವಿಧಿಯನು ಬೈವಳೋ ಕಂ
ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆ ಎಂತಿಹಳೆನುತ ಬಿಸುಸುಯ್ದ ॥

ಸುತರ ಪರರೆಡೆಗಿತ್ತು ನಂಬಿದ
ಸತಿಯ ತಂದಡವಿಯಲಿ ಮಲಗಿಸಿ
ಮತಿವಿಕಳನಾದೆನು ಪುರಾಕೃತಕರ್ಮ ಫಲವೈಸೆ ।
ಕ್ಷಿತಿಯೊಳಾರುಂಟೆನ್ನ ಪೋಲ್ ನಿಜ
ಸತಿಗೆ ತಪ್ಪಿದ ಬಾಹಿರರು ಎಂ
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ॥

ಇನ್ನು 'ಹರಿಭಕ್ತಿಸಾರ'ದ ವಿಷಯವನ್ನು ತಿಳಿಯದ ಕನ್ನಡಿಗರೇ ವಿರಳವೆನ್ನಬಹುದು. ಆರ್ತಭಾವಭಕ್ತಿರಸಸಾಂದ್ರತೆಗಳ ಐಕ್ಯವನ್ನು ಅಲ್ಲಿ ಕಾಣಬಹುದು. ಅದರ ೧೧೦ ಪದ್ಯಗಳೂ ಭಕ್ತಿಮುಕ್ತಾಫಲಗಳು. ಅವು ಮನಸ್ಸಿಗೆ ಶಾಂತಿಯನ್ನು ಕೊಡಬಲ್ಲವು. ಅದರಿಂದ ಒಂದು ಉದಾಹರಣೆ :

ನಮ್ಮ ದೈನ್ಯವನ್ನು ಗ್ರಹಿಸಿ ಕೈವಲ್ಯಪತಿಯನ್ನು ಶರಣುಹೊಕ್ಕರೆ ಲೇಸು—

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನ ಬಲ್ಲೆನು ನಾನು ನೆರೆ ಸು
ಜ್ಞಾನಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥

ಪುರಂದರದಾಸನ ಹಾಗೆಯೇ ಕನಕದಾಸನೂ ತನ್ನ ಕೀರ್ತನೆಗಳಲ್ಲಿ ಸಮಾಜ ವಿಮರ್ಶೆ, ತತ್ವನೀತಿಗಳ ಬೋಧನೆ, ಆತ್ಮನಿವೇದನೆ ಇತ್ಯಾದಿಯನ್ನು ಅನುಭಾವಿಯ ವ್ಯಕ್ತಿತ್ವ ಒಡಮೂಡುವಂತೆ ಮಾಡಿರುತ್ತಾನೆ.

ಸಮಾಜ ವಿಮರ್ಶೆಗೊಂದು ಉದಾಹರಣೆ :

ಕುಲ ಕುಲ ಕುಲ ಕುಲವೆನ್ನುತಿಹರು
ಕುಲ ಯಾವುದು ಸತ್ಯಸುಖವುಳ್ಳ ಜನರಿಗೆ ॥ ಪಲ್ಲವಿ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ ।
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೆ ॥ ೧ ॥

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸುವರು ದ್ವಿಜರೆಲ್ಲರು ।
ಬಗೆಯಿಂದ ನಾರಾಯಣನಾವ ಕುಲವಯ್ಯ
ಅಗಜವಲ್ಲಭನಾವ ಕುಲ ಪೇಳಿರಯ್ಯ ॥ ೨ ॥

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ ।
ಆತ ಮಹಾತ್ಮನು ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ॥ ೩ ॥

ಸುಂದರವಾದ 'ಭಾವಗೀತೆ'ಗಳಂತಿರುವ ಕೀರ್ತನೆಗಳಲ್ಲಿ ದೇವರ ಅಪಾರವಾದ ಮಹಿಮೆಯನ್ನು ಕೊಂಡಾಡಿ ಆತನ ಅನುಗ್ರಹದಲ್ಲಿ ಅಚಲವಿಶ್ವಾಸ

ವನ್ನಿಟ್ಟು ಕವಿಯು ತನ್ನ ದೃಢಭಕ್ತಿಯನ್ನು ಸಾರಿದ್ದಾನೆ :

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕ್ಕೆ ಸಂಶಯವಿಲ್ಲ ॥ ಪಲ್ಲವಿ ॥

ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೋ ।
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು
ಕೊಟ್ಟು ರಕ್ಷಿಪನಿದಕೆ ಸಂದೇಹ ಬೇಡ ॥ ೧ ॥

ಅಡವಿಯೊಳಗಾಡುವಾ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗಾಹಾರವಿತ್ತವರು ಯಾರೋ ।
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ॥ ೨ ।

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೋ ।
ಒಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ೩ ॥

## ೧೧. ಜಾನಪದ ವಾಙ್ಮಯ

"ಕನ್ನಡನಾಡವರು ಕುಱಿತೋದದೆಯೂ ಕಾವ್ಯಪ್ರಯೋಗಪರಿಣತ ಮತಿಗಳು" ಎಂಬ ಹೊಗಳಿಕೆಗೆ ಪಾತ್ರರಾದವರಲ್ಲವೆ? ಇದಕ್ಕೆ ಸಾಕ್ಷ್ಯ ಬೇಕಾದರೆ ಜಾನಪದಸಾಹಿತ್ಯವು ಒದಗಿಸಬಲ್ಲುದು. 'ಗರತಿ ಹಾಡುಗಳು', 'ಗೋವಿನ ಹಾಡು', 'ಮಾನವಮಿ ಪದ', 'ಕೋಲಾಟದ ಪದಗಳು', 'ಜೋಗುಳ ಗಳು' ಮೊದಲಾದ ಅಸಂಖ್ಯಾತ ನಾಡಪದಗಳು ನಾಡವರ ಕಾವ್ಯಸಾಮರ್ಥ್ಯ ವನ್ನು ಸಾರುವುವು. ಜನತೆಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವುವು. ಸರ್ವ ಜನಾದರಣೀಯವಾದ ಗೋವಿನ ಹಾಡಿನಿಂದ ಎರಡು ಉದಾಹರಣೆಗಳನ್ನು ಪರಿಶೀಲಿಸೋಣ :

ಎಳೆಯ ಮಾವಿನ ಮರದ ಕೆಳಗೆ
ಕೊಳಲನೂದುತ ಗೊಲ್ಲಗೌಡನು
ಬಳಸಿನಿಂದ ತುರುಗಳನ್ನು
ಬಳಿಗೆ ಕರೆದನು ಹರುಷದಿ ॥

ಗಂಗೆ ಬಾರೇ ಗೌರಿ ಬಾರೇ
ತುಂಗಭದ್ರೆ, ತಾಯಿ ಬಾರೇ
ಕಾಮಧೇನು ನೀನು ಬಾರೆಂದು
ಪ್ರೇಮದಲಿ ಗೊಲ್ಲ ಕರೆದನು ॥

ಪ್ರಕೃತಿಯ ಕೋಮಲತೆ 'ಎಳೆಯ ಮಾವಿನ ಮರದಲ್ಲಿ' ಅಮರವಾಗಿದೆ. ಗೊಲ್ಲಗೌಡನು ಸಹಜತೆಯ ಮೂರ್ತಿಯಾಗಿ ನಿಂತಿದ್ದಾನೆ. ಅವನ ಕರೆ ನಮ್ಮ ಕಿವಿಯಲ್ಲಿ ರಿಂಗಣವಾಡುತ್ತಿದೆ. ಕಿವಿ ನೆಟ್ಟಗೆ ಮಾಡಿ ನಿಂತ ದನಗಳ ಚಿತ್ರ ಕಣ್ಣಮುಂದಿದೆ.

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಬಂಧುಬಳಗ
ಸತ್ಯವಾಕ್ಯಕೆ ತಪ್ಪಿ ನಡೆದರೆ
ಮೆಚ್ಚನಾ ಜಗದೀಶನು—॥

ಎಂಬ ಪುಣ್ಯಕೋಟಿಯ ಮಾತು ನಮ್ಮ ಸಂಸ್ಕೃತಿಯ ಭದ್ರವಾದ ತಳಹದಿ. ಈ ತತ್ವ ಎಷ್ಟು ಸುಲಭವಾಗಿ ಹೇಳಲ್ಪಟ್ಟಿದೆ. ಮುಂದೆ ಪುಣ್ಯಕೋಟಿಗೂ ಅದರ ಮಗುವಿಗೂ ಆಗುವ ಸಂಭಾಷಣೆಯಲ್ಲಿ ಕರುಣರಸವು ತುಂಬಿ ಹರಿಯುತ್ತಿದೆ :

ಅಮ್ಮ ನೀನು ಸಾಯಲೇಕೆ
ನನ್ನ ತಬ್ಬಲಿ ಮಾಡಲೇಕೆ
ಸುಮ್ಮನಿಲ್ಲಿಯೆ ನಿಲ್ಲೆನುತ
ಅಮ್ಮನಿಗೆ ಕರು ಹೇಳಲು ॥

ಕೊಟ್ಟ ಭಾಷೆಗೆ ತಪ್ಪಲಾರೆನು
ಕೆಟ್ಟ ಯೋಚನೆ ಮಾಡಲಾರೆನು

ನಿಷ್ಠೆಯಿಂದಲಿ ಪೋಷೆಸಲ್ಲಿಗೆ
ಕಟ್ಟಿಕಡೆಗಿದು ಖಂಡಿತ ॥

ಆರ ಮೊಲೆಯನು ಕುಡಿಯಲಮ್ಮಾ
ಆರ ಸೇರಿ ಬದುಕಲಮ್ಮ
ಆರ ಬಳಿಯಲಿ ಮಲಗಲಮ್ಮಾ
ಆರು ನನಗೆ ಹಿತವರು ॥

ಇದನ್ನು ಕೇಳಿ ಕಣ್ಣೀರು ಹಾಕದ ಕಂದಮ್ಮನಾರು ? ದೊಡ್ಡವರಿಗಾದರೂ ಇದು ಎಂದಿಗೂ ಹಳಸುವ ಪಾಕವಲ್ಲ.

## ಯಕ್ಷಗಾನ

ಜಾನಪದ ವಾಙ್ಮಯದಲ್ಲಿ 'ಯಕ್ಷಗಾನ' ಪ್ರಸಂಗ (ಪ್ರಬಂಧ) ಎಂಬೊಂದು ರೂಪಕಸಾಹಿತ್ಯಪ್ರಕಾರವಿದೆ. ಇದನ್ನು 'ಆಟ', 'ಬಯಲಾಟ', 'ದಶಾವತಾರದ ಆಟ' ಇತ್ಯಾದಿಯಾಗಿ ಕರೆಯುವುದೂ ಉಂಟು. ಇದೊಂದು ಅಚ್ಚ ದೇಸೀಕಲೆಯೆನ್ನಬಹುದು. ಇದನ್ನು ಕೇರಳದ 'ಕಥಕ್ಕಳಿ' 'ತಮಿಳುನಾಡಿನ 'ತೆರುಕ್ಕೂತ್ತು', ಆಂಧ್ರದ 'ಯಕ್ಷಗಾನ, ವೀಧಿನಾಟಕ'ಗಳಿಗೆ ಹೋಲಿಸಬಹುದು. ಪ್ರಾಯಃ ದ್ರಾವಿಡಭಾಷೆಗಳಂತೆ ಇವೆಲ್ಲವುಗಳ ಮೂಲ ಒಂದೇ ಆಗಿರಬಹುದು. ಅದು ಹೇಗೂ ಇರಲಿ, ಕನ್ನಡದಲ್ಲಿ ೧೭ನೆಯ ಶತಮಾನಕ್ಕಿಂತ ಪೂರ್ವದ ಯಕ್ಷಗಾನ ಕೃತಿಗಳು ದೊರೆತಿಲ್ಲ. ೧೭೦೮ರಲ್ಲಿ ಶಾಂತವೀರ ದೇಶಿಕನಿಂದ ರಚಿತವಾದ 'ಸೌಂದರೇಶ್ವರ' ಯಕ್ಷಗಾನವೇ ಈಗ ಉಪಲಬ್ಧವಾದವುಗಳಲ್ಲಿ ಮೊದಲನೆಯದು. ತೆಲುಗಿನಲ್ಲಿ ಕಂದುಕೂರಿ ರುದ್ರ ಕವಿಯ (೧೫೭೮) 'ಸುಗ್ರೀವ ವಿಜಯ'ವೇ ಮೊದಲಿನ ಕೃತಿ. ಆದುದರಿಂದ ತೆಲುಗಿನಲ್ಲಿ ಕನ್ನಡಕ್ಕಿಂತ ಸುಮಾರು ೨೦೦ ವರ್ಷಗಳ ಹಿಂದೆ ಯಕ್ಷಗಾನ ಸಾಹಿತ್ಯ ಕೃಷಿಯಾದಂತಿದೆ.

ವೈದಿಕ ಪುರಾಣಗಳು ಹೆಚ್ಚಾಗಿ ಯಕ್ಷಗಾನ ಕವಿಗಳಿಗೆ ವಸ್ತುವನ್ನು ಒದಗಿಸಿಕೊಟ್ಟಿವೆ; ಕುಮಾರರಾಮನ ಚರಿತ್ರೆಯಂಥ ಐತಿಹಾಸಿಕ ಪ್ರಸಂಗಗಳೂ ಒಮ್ಮೊಮ್ಮೆ ರಚಿತವಾದುದುಂಟು. ನಾಡಿನಲ್ಲಿ ವಿದ್ಯಾಭ್ಯಾಸದ ಸೌಕರ್ಯ

ವನ್ನು ಪಡೆಯಲಾರದವರಿಗೆ ಯಕ್ಷಗಾನ ಪ್ರಸಂಗಗಳು ಜ್ಞಾನ ಪ್ರಸಾರಣೆಯನ್ನು ಮಾಡುವ ಅತ್ಯುತ್ತಮ ಸಾಧನಗಳಾದುವು. ಅವು ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಉಳಿಸಿ ಬೆಳಗಿದುವು. ಪುರಾಣ–ಸಾಹಿತ್ಯ–ಸಂಗೀತಗಳ ತ್ರಿವೇಣಿಯನ್ನು ಅವುಗಳಲ್ಲಿ ಕಾಣಬಹುದು ಮಾತ್ರವಲ್ಲ ಅವು ಕನ್ನಡಿಗರ ರಂಗಾಭಿರುಚಿಯ ದೇಶೀಯ ದ್ಯೋತಕಗಳಂತಿವೆ.

ಶಾಂತವೀರ ದೇಶಿಕ (೧೬೭೮), ಮಲಾನಂದ (೧೬೮೫), ಚೆನ್ನಪ್ಪ (೧೭೫೦), ಸಾಮಿಕವಿ (೧೭೫೦), ಪಾರ್ತಿಸುಬ್ಬ (೧೮೦೦), ಸುಬ್ರಹ್ಮಣ್ಯ (೧೮೪೦), ಶಾಂತ ಕವಿ (೧೮೬೦), ಅಳಿಯಲಿಂಗರಾಜ (೧೮೬೦), ನಂದಳಿಕೆ ಲಕ್ಷ್ಮೀನಾರಣಪ್ಪ (೧೮೯೦) ಮೊದಲಾದವರು ಯಕ್ಷಗಾನ ಕೃತಿಗಳನ್ನು ಬರೆದ ಪ್ರಮುಖರು.

ಪ್ರಸ್ತುತ ಪಾರ್ತಿಸುಬ್ಬನ ಯಕ್ಷಗಾನ ಪ್ರಬಂಧದ ಸಾರವನ್ನಿಷ್ಟು ಅವಲೋಕಿಸೋಣ. ಆತನು ರಾಮಾಯಣದ ಪ್ರಸಿದ್ಧ ಘಟ್ಟಗಳನ್ನು ಆಯ್ದುಕೊಂಡು 'ಪಟ್ಟಾಭಿಷೇಕ ಪಂಚವಟಿ, ವಾಲಿಸಂಹಾರ, ಚೂಡಾಮಣಿ, ಸೇತುಬಂಧನ, ಅಂಗದಸಂಧಾನ, ಕುಂಭಕರ್ಣನ ಕಾಳಗ, ಇಂದ್ರಜಿತುವಿನ ಕಾಳಗ' ಎಂಬ ಸುಂದರ ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದಾನೆ. ಮರುಗಿ, ಕುದಿದು ಶಾಸ್ತ್ರದ ಬಲದಿಂದ ಹೇಳಿದ ಕವಿತೆ ಸುಬ್ಬನದಲ್ಲ. ವಾಗ್ದೇವಿಯು ಆತನ ಜಿಹ್ವಾಗ್ರದಲ್ಲಿ ನರ್ತಿಸುತ್ತಿದ್ದಳು. ನಾಟಕೀಯತೆಯಿಂದ ಪರಿಪೂರಿತವಾದ ಹಾಡುಗಬ್ಬವದು. ತಾಳಲಯಪ್ರಧಾನವಾದ ವಿವಿಧ ಕನ್ನಡ ಧಾಟಿಗಳ ಪ್ರಯೋಗದ ಸಾಫಲ್ಯವನ್ನು ಅಲ್ಲಿ ಕಾಣಬಹುದು. ರಸಾನುಗುಣವಾದ ಲಾಸ್ಯ ತಾಂಡವಗಳನ್ನು ಸುಬ್ಬನ ವಾಣಿಯಲ್ಲಿ ಕಾಣುತ್ತೇವೆ. ಸುಲಭವಾದ ಭಾಷೆ; ನಿರರ್ಗಳವಾದ ಶೈಲಿ. "ಒಟ್ಟಿನ ಮೇಲೆ ಯಕ್ಷಗಾನ ಪ್ರಪಂಚದಲ್ಲಿ ಯಾವ ಸಾಧನವಿದೆಯೋ ಅದನ್ನು ಪಾರ್ತಿಸುಬ್ಬನು ಬಳಸಿದ್ದಾನೆ; ಯಕ್ಷಗಾನದ ಪ್ರತ್ಯೇಕ ತಂತಿಯನ್ನು ಬಾರಿಸಿದ್ದಾನೆ. ಆ ಬಾರಿಸುವುದರಲ್ಲಿ ತುಂಬ ಯಶಸ್ವಿಯೂ ಆಗಿದ್ದಾನೆ. ಆತನ ಪ್ರಸಂಗಗಳು ಹಳ್ಳಿಯವರನ್ನೇ ಅಲ್ಲ ಹೊಳಲಿನವರನ್ನೂ ಮೆಚ್ಚಿಸಲಾಪವು; ಅವರನ್ನು ಎಷ್ಟೋ ಅಷ್ಟೇಮಟ್ಟಿಗೆ ಇವನನ್ನು ಸೈ ಸೈ ಎನಿಸಲಾಪವು" (ಗೋವಿಂದ ಪೈ). ಈ ಕವಿಯ ಹಿರಿಮೆಯನ್ನು ತೋರಿಸುವ ಕೆಲವು

ಉದಾಹರಣೆಗಳನ್ನು ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ' ಎಂಬ ಗ್ರಂಥದಿಂದ ಉದ್ಧರಿಸಲಾಗಿದೆ.

ರಾವಣನು ಸೀತೆಯನ್ನು ಕದ್ದೊಯ್ಯುವ ಹಂಚಿಕೆಯನ್ನು ಮಾಡಿದುದು ಮಂಡೋದರಿಗೆ ತಿಳಿದು, ಅವಳು ಈ ಕೆಲಸ ಎಷ್ಟಕ್ಕೂ 'ತರವಲ್ಲ' ಎಂಬುದಾಗಿ ತನ್ನ ಪತಿಯನ್ನು ಅಂಗಲಾಚಿ ಬೇಡಿಕೊಳ್ಳುವುದು ಹೃದಯಂಗಮವಾಗಿದೆ.

ರಾಗ—ಅಟತಾಳ

ತರವಲ್ಲ—ಕಾಂತ ತರವಲ್ಲ ॥
ತರವಲ್ಲವಿದು ಲೋಕಮಾತೆ ಜಾನಕಿಯ
ತರುವೆನುತ ಪೋಗುವುದು ಮಹಾಸತಿಯ ॥ ಪ ॥

ನಾರಾಯಣಸ್ವಾಮಿ ಆ ರಾಮಚಂದ್ರ
ಧೀರ ಲಕ್ಷ್ಮಣನೆಂಬವನೆ ಉರಗೇಂದ್ರ ।
ನಾರಿ ಜಾನಕಿಯೆ ಲಕ್ಷ್ಮೀದೇವಿ ನೀನರಿ
ಧಾರಿಣಿಗವತರಿಸಿಹರು ಈ ಸಾರಿ ॥ (ಪು. ೬೧-೧)

x x x

ಕುಲವೆ ಸಂಹಾರವಾಗುವ ಕಾಲ ಬಂತು
ನೆಲದೊಳು ಬಾಳಿರುವಂಥ ಋಣವೆಲ್ಲ ಸಂತು ।
ಇಳೆಯನಂದನೆ ಸೀತೆ ಸಿಕ್ಕಲೇತಕೆ ಭ್ರಾಂತು
ತಿಳಿವುದೆ ಮದ್ದು ಸಾರಿದೆನು ನಾನಿಂತು ॥ (ಪು. ೬೧-೨)

ಸ್ವಾಭಾವಿಕವಾಗಿ ಸಹಧರ್ಮಿಣಿಯೋರ್ವಳು ಆ ಸಂದರ್ಭದಲ್ಲಿ ಗುಡುಗುವ ರೀತಿಯದು. ಗಂಡಹೆಂಡಿರ ವಾದ ಮುಂದುವರಿಯುವುದು. ಗಂಡನ ಮದಾಂಧತೆ ಮತ್ತು ಹೆಂಡತಿಯ ವಿವೇಕದ ಎಚ್ಚರಿಕೆಗಳು ಹೊಳೆಯುತ್ತಿವೆ.

ರಾಗ–ಶಂಕರಾಭರಣ–ಅಟತಾಳ

ರಾವಣ—ವಲ್ಲಭೇ ನೀನಿಂಥ ಮಾತನೆನ್ನೊಳು ಪೇಳುವುದೇನೆ
ಹುಲ್ಲೆ ಘೋರ ಸಿಂಹವನು ಕೊಲ್ಲುವುದುಂಟೆ ॥ (ಪು. ೬೧)

ಮಂಡೋದರಿ—ಎಳ್ಳಿನಷ್ಟು ಕಿಚ್ಚು ಮನೆಗಳೆಲ್ಲ ಸುಡದೆ ನಂದಲುಂಟೆ
ಒಳ್ಳಿತಲ್ಲೀ ಬುದ್ಧಿ ಕುಲಕೆ ಸಲ್ಲುದು ಕಾಂತ ॥

ರಾವಣ—ಮಾನಿನಿ ಕುಕ್ಕುರಗಳು ಮದ್ದಾನೆಯ ಸಂಹರಿಸಲುಂಟೆ
ಆ ನರಪೋತುಂಗಳ್ಗೆಲ್ಲ ನಾನಂಜಲುಂಟೆ ॥

ಮಂಡೋದರಿ—ಕಾಣದೆ ಕಪ್ಪಿನಲಿ ಬಿದ್ದಡಾನೆಯಾದಡೇನು ತಾನೇ
ಶ್ವಾನದಿಂದತ್ತಲಹುದು ನೀನಂಜಲೇಕೆ ॥ (ಪು. ೬೨)

x x x

ಎಷ್ಟು ಸಹಜವಾದ ಸಂಭಾಷಣೆ, ಚಿರಪರಿಚಿತವಾದ ದೃಷ್ಟಾಂತಗಳು. ಕವಿಸಮಯದ ಗೋಜಿಗೇ ಈ ಕವಿ ಹೋಗುವುದಿಲ್ಲವೇನೋ ?

(ಸೀತಾಪಹರಣದ ಅನಂತರ) ಪರ್ಣಶಾಲೆಯಲ್ಲಿ ಸತಿ ಇಲ್ಲದಿರಲು ರಾಮನು ಪ್ರಲಾಪಿಸುವುದು ; ದುಃಖರಸವು ಕೋಡಿಯಾಗಿ ಹರಿಯುತ್ತಿದೆ.

ರಾಗ—ಕಾಂಬೋಧಿ—ತಾಳ ಜಂಪೆ

ಪೊಡವಿಗಿಡಮರಕಲ್ಲು—ನೋಡಿದರೆ ಆರಸಿನದ
ಪುಡಿಗೆದರಿದಂತಿಹುದು ತಮ್ಮಾ ।
ಒಡಲೊಳುರಿ ಹರಿಹರಿದು—ಚೈತನ್ಯ ಬರಬರತು
ನಡಂಗುತಿದೆ ಕೈಕಾಲು ತಮ್ಮಾ ॥ (ಪು. ೬೬—ಪ. ೧).

ನುಡಿವೆನೆಂದರೆ ಗಂಟಲೆಡೆಯ ಕೈಯಿಂದವುಕಿ
ಪಿಡಿದೊತ್ತಿದಂತಿಹುದು ತಮ್ಮಾ ।
ವಂಡದಿ ಜಾನಕಿರತುನವಿಲ್ಲದೀ ಮೈಯೊಂದು
ಬಿಡುಂದಾರವಾಯ್ತಲ್ಲೊ ತಮ್ಮಾ ॥ (೨)

ತಂದೆತಾಯ್ಗಳನುಳಿದು ಬಂಧುಬಳಗವ ಬಿಟ್ಟು
ಸಂದರಿಯಳೊಂದಾಗಿ ತಮ್ಮಾ ।
ಎಂದಿಗಾದರು ಎನ್ನ ಪಾದವೇ ಗತಿ ಎನುತ
ಬಂದು ಸೇರಿದಳಲ್ಲೊ ತಮ್ಮಾ ॥ (೩)

ಏಳು ಜನ್ಮಾಂತರದಿ ತಪವೆಸಗಿದರು ಇಂಥ
ಬಾಲೆ ಕೈಸೇರುವಳೆ ತಮ್ಮಾ ।
ಪೇಳಲೇಂ ಸತಿಯು ಬಾಳಿಂತಾಗೆ ರಾಘವನ
ಬಾಳೆ ಬಾಳಾಯ್ತಲ್ಲೊ ತಮ್ಮಾ ॥ (೪)

ಹಾಳು ಬದುಕಿಗೆ ಹೋಗುವಾಗಲೇ ನಿನ್ನೊಡನೆ
ಹೇಳಲಿಲ್ಲವೆ ನಾನು ತಮ್ಮಾ ।
ಕೀಳು ಮೇಲೆರಡರಿಯದಾಡಿದಾ ಬಿರುನುಡಿಯ
ಕೇಳಿ ನೀ ಬರಬಹುದೆ ತಮ್ಮಾ ॥ (೫)

ರಾಮನಿಗೆ 'ಕಣ್ಣುಕತ್ತಲೆ' ಹೋಗುವಾಗ ಎಲ್ಲ ಅರಸಿನವಾಗಿ ಕಾಣುವುದು ಸಹಜ ; ಮತ್ತೆ ಕೈಕಾಲು ನಡುಗುವುದು ; ಗಂಟಲು ಕಟ್ಟಿಬರುವುದು. ಸೀತಾರಾಮರೆಂಬ 'ರತ್ನಮಾಲೆ'ಯಿಂದ, ಸೀತಾರತ್ನವು ಕಳೆದುಹೋಗಲು ರಾಮನ ಮೈಯು 'ಬಿಡುದಾರ'ವಾಯಿತೆಂಬುದು ಎಷ್ಟು ಸುಂದರವಾದ ಅಲಂಕಾರ.

ಮಾಯಾಮೃಗವನ್ನು 'ಹಾಳುಬದುಕು' ಎಂದುದು ಎಂಥ ಔಚಿತ್ಯದ ದೇಶಿಯಿಂದೊಡವರಿದ ದೇಶಿ. 'ತಮ್ಮಾ, ತಮ್ಮಾ' ಎಂಬುದಾಗಿ ಅಳುವುದು ದುಃಖದ ಚರಮಸೀಮೆಯನ್ನು ತೋರಿಸುವುದು.

ವಾಲಿಸುಗ್ರೀವರ ಕಾಳಗ, ಅಂಗದಸಂಧಾನಗಳಲ್ಲಿ ವೀರರಸಘಟ್ಟಗಳನ್ನು ಸುಬ್ಬನು ನೀಡಿರುವನು. ವೀರಾವತಾರದ ಅಂಗದನು ರಾವಣನ ಸಭೆಯಲ್ಲಿ ಮಾಡುವ ಮೂದಲಿಕೆ ಅನುಪಮವಾಗಿದೆ. 'ಬೇರಾವ ರಾಮಾಯಣದೊಳಗಿನ ಈ ಸಂದರ್ಭದ ಅಂಗದನ ಮಾತೂ ಈ ಮಾತಿಗೆ ಸರಿಯಾಗಿರುವಂತೆ ತೋರುವುದಿಲ್ಲ' (ತಿಮ್ಮಪ್ಪಯ್ಯ).

ಕೊನೆಯದಾಗಿ ಸುಬ್ಬನು ಹಾಡಿದ ಮಂಗಲ ; ರಮಣೀಯವಾದ ರೂಪಕ ; ಭಕ್ತಿರಸವೆಂಬ ತುಪ್ಪದ ಬತ್ತಿಯಲ್ಲಿ 'ಎದೆಯಾರತಿ'ಯನ್ನೆತ್ತುವನು ; ಎಲ್ಲ ಅವನ ವ್ಯಕ್ತಿತ್ವದ ಪರಿಕರಗಳು :

ಹೃದಯಕಮಲವೆಂಬ ಹರಿವಾಣದೊಳು ಪರ
ತರಭಕ್ತಿರಸದ ತುಪ್ಪವನೆರೆದು ।

ಸದಮಲಚಿತ್ತೇಜನ ಬೆಳಗಿಸುತಲಿ
ಮುದವಡೆದೆದೆಯಾರತಿಯೆತ್ತಿರೋ ॥ ಮಂಗಲಂ ಜಯ ಮಂಗಲಂ ॥

ಉಳಿದ ಮೂರು ಪದ್ಯಗಳಲ್ಲಿ ರಾಮಾಯಣದ ಕಥಾಸಾರವನ್ನೇ ಹಿಂಡಿ ತೋರಿಸುವನು. ಒಟ್ಟಿನಲ್ಲಿ ಸುಬ್ಬನ ಕೃತಿಗಳ ಮೂಲಕ ಯಕ್ಷಗಾನ ಸಾಹಿತ್ಯಕ್ಕೆ ಕಳೆಯೇರಿದೆ; ಅವನಿಂದ, ಯಕ್ಷಗಾನ ಸಾಹಿತ್ಯವು. ಚಿರಸ್ಮರಣೀಯವೆಂದರೆ ತಪ್ಪಾಗದು.

## ೧೨. ಹೊಸಗನ್ನಡ ಸಾಹಿತ್ಯ

ಸುಮಾರು ೧೯ನೆಯ ಶತಮಾನದ ಪೂರ್ವಾರ್ಧದಿಂದ ಹೊಸಗನ್ನಡ ಸಾಹಿತ್ಯೋದಯವಾಯಿತೆನ್ನಬಹುದು. ನಮ್ಮ ಇಂದಿನ ಕನ್ನಡವೇ ಹೊಸ ಗನ್ನಡ. ಅಂದು ವೀರಶೈವ ವಚನಕಾರರು (ಇಂದು ನಾವು ನಡುಗನ್ನಡವೆಂಬು ದಾಗಿ ಕರೆಯುವ) ಮಾತನಾಡುವ ಕನ್ನಡವನ್ನು ಗ್ರಂಥಭಾಷೆಯ ಗೌರವಕ್ಕೇರಿಸಿ ದಂತೆ, ಕಳೆದ ಶತಮಾನದಲ್ಲಿ ಕ್ರೈಸ್ತಮತೋಪದೇಶಕರು (ಬಹುತೇಕ ಪ್ರಾಟೆ ಸ್ಟೆಂಟ್ ಮಿಶನರಿಗಳು) ಹೊಸಗನ್ನಡವನ್ನು ಗ್ರಂಥಭಾಷೆಯ ಗೌರವಕ್ಕೇರಿಸಿ ಪುಣ್ಯಕಟ್ಟಿಕೊಂಡರು.

೧೮೨೦ರಲ್ಲಿ ರೆವರೆಂಡ್ ವಿಲ್ಲಿಯಂ ಕೇರಿ ಎಂಬುವನು ಬೈಬಲ್ ಗ್ರಂಥ ವನ್ನು ಕನ್ನಡದಲ್ಲಿ ಅನುವಾದ ಮಾಡಿದ್ದನಂತೆ. ಮುದ್ರಣಾಲಯದಲ್ಲಿ ಆ ಹಸ್ತಪ್ರತಿ ಸುಟ್ಟುಹೋಗಿ ಮತ್ತೆ ೧೮೨೩ರಲ್ಲಿ ಅದು ಪ್ರಕಟಿತವಾಯಿತು. ಲಂಡನ್ ಮಿಶನರಿ ಸೊಸೈಟಿಗೆ ಸೇರಿದ ರೆವರೆಂಡ್ ಜಾನ್ ಹೇಂಡ್ಸ್ ಎಂಬುವನು ೧೮೩೧ ರಲ್ಲಿ ಉತ್ತಮ ಕನ್ನಡ ಮೊಳೆಗಳನ್ನು ಇಂಗ್ಲೆಂಡಿನಲ್ಲಿ ಸಿದ್ಧಪಡಿಸಿ ಬಳ್ಳಾರಿಗೆ ತಂದು ಅಲ್ಲಿನ ಮಿಶನ್ ಮುದ್ರಣಾಲಯವನ್ನು ಸಜ್ಜುಗೊಳಿಸಿದನಂತೆ.[1] ಇದೇ ಸಮಯ ಮಂಗಳೂರಿನಲ್ಲಿ ಬಾಸೆಲ್ ಮಿಶನಿನವರು ಕನ್ನಡ ಮುದ್ರಣಕಾರ್ಯ

---

[1] *Karnataka Darsana* (Uttangi C. D.), p. 378.

ವನ್ನು ನಡೆಸುತ್ತಿದ್ದರು. ಮುದ್ರಣಸೌಕರ್ಯಗಳು ಮಿಶನರಿಗಳ ಪ್ರಕಟಣೆಯ ಕೆಲಸಕ್ಕೆ ಮತ್ತಷ್ಟು ಅನುಕೂಲಮಾಡಿಕೊಟ್ಟವು.

ಪ್ರಾಯಶಃ ೧೮೨೩ರಲ್ಲಿ ಪ್ರಕಟಿತವಾದ ಕನ್ನಡ ಬೈಬಲ್ ಗ್ರಂಥವೇ ಮೊದಲಿನ ಹೊಸಗನ್ನಡ ಗದ್ಯಕೃತಿ. ಏಕೆಂದರೆ, ಹೆಚ್ಚುಕಡಿಮೆ ಅದೇ ಸಮಯದಲ್ಲಿ ಕೆಂಪುನಾರಾಯಣನಿಂದ ರಚಿತವಾದ 'ಮುದ್ರಾಮಂಜೂಷ'ವು ಹೊಸಗನ್ನಡ ಗದ್ಯಕೃತಿ ಎಂಬುದಾಗಿ ಕರೆಯಲ್ಪಟ್ಟರೂ ಅದು ಹಳಗನ್ನಡ-ನಡುಗನ್ನಡ-ಹೊಸಗನ್ನಡಗಳ 'ಕದಂಬ'ದಂತಿದೆ. ೧೭೯೪ ರಿಂದ ೧೮೬೮ರ ವರೆಗೂ ಮೈಸೂರ ಸಿಂಹಾಸನಾಧೀಶ್ವರನಾಗಿದ್ದ ಮುಮ್ಮಡಿ ಕೃಷ್ಣರಾಜನು ಅನೇಕ ಬರಹಗಾರರಿಗೆ ಪ್ರೋತ್ಸಾಹಕೊಟ್ಟಿದ್ದಲ್ಲದೆ ಉಭಯಭಾಷಾಪಂಡಿತನಾಗಿ ತಾನೇ ಸ್ವತಃ ಗ್ರಂಥಗಳನ್ನು ರಚಿಸಿದನಂತೆ. ಈ ಕಾಲದ ಕೃತಿಗಳಲ್ಲಿ ಹೆಚ್ಚಿನವು ಗದ್ಯ ರೂಪದಲ್ಲಿವೆ; ಪುರಾಣಕಥೆಗಳು, ತಾತ್ಪರ್ಯಗಳು, ಟೀಕೆಗಳು ಮಾಹಾತ್ಮ್ಯಗಳು ಇತ್ಯಾದಿಯಾಗಿ ಅವುಗಳ ಪ್ರಕಾರಗಳು ; ದೇವಚಂದ್ರ (೧೮೦೦) ನೆಂಬ ಜೈನ ಚರಿತ್ರೆಕಾರನು ಕರ್ಣಾಟಕ ಇತಿಹಾಸಕ್ಕೆ ಉಪಯುಕ್ತವಾದ 'ರಾಜಾವಳೀ ಕಥೆ' ಎಂಬ ಸುದೀರ್ಘವಾದ ಗದ್ಯಗ್ರಂಥವನ್ನು ಈ ಅವಧಿಯಲ್ಲಿ ರಚಿಸಿದನು. ಈ ಎಲ್ಲ ಕೃತಿಗಳ ಗದ್ಯವು ನಡುಗನ್ನಡದಿಂದ ಹೊಸಗನ್ನಡಕ್ಕೆ ತಿರುಗುವ ಸಂಧಿ ಕಾಲದ ಲಕ್ಷಣಗಳಿಂದ ಕೂಡಿದ್ದು, ವಿಲಕ್ಷಣವಾಗಿದೆ.

'ರಾಜಾವಳೀ ಕಥೆ'ಯ ಕನ್ನಡವು ಮಿಶ್ರಗನ್ನಡವೆಂಬುದಾಗಿ ದೇವ ಚಂದ್ರನೇ ಹೀಗೆ ಹೇಳಿರುವನು :

ಹಳಗನ್ನಡ ಬೆಳುಗನ್ನಡ
ಒಳುಗನ್ನಡ ಮಿಶ್ರಗನ್ನಡಃ ಕಬ್ಬದೊಳಂ ।
ತಿಳಿದಲ್ಲ ಮಿಶ್ರಮಾಗಿಯು
ಮಿಳಿಗರಿವಂದದೊಳೆ ಪೇಳ್ದೆ ರಾಜಾವಳಿಯಂ ॥

ಹಳಗನ್ನಡ ಬೆಳುಗನ್ನಡ
ಒಳುಗನ್ನಡವಚ್ಚಗನ್ನಡಂ ಪೊಸತೆಂಬು ।
ತೆಳು (ತಿಳಿ) ಗನ್ನಡ ಮಿಶ್ರದಿನಿದ
ನಿಳೆಯೊಳ್ ಸತ್ಪುರುಷರೋದಿ ಕೇಳ್ವುದು ಸತತಂ ॥

ಅನೇಕ ವಿಧವಾದ ಕನ್ನಡಗಳನ್ನು ಹೇಳಿ ಅವುಗಳ ಮಿಶ್ರಣವೇ ಹೊಸಗನ್ನಡವೆಂದಂತಿದೆ. ಮುಮ್ಮಡಿ ಕೃಷ್ಣರಾಜನ ಗದ್ಯಶೈಲಿಗೊಂದು ಉದಾಹರಣೆ :

'ಹೀಗೆ ಪ್ರಸಿದ್ಧವಾದ ಶುಭಮತಿಯುಳ್ಳ ಶ್ರೀ ಕೃಷ್ಣರಾಜ ಒಡೆಯರವರು ಅಧ್ಯಾತ್ಮರಾಮಾಯಣವು ಸರ್ವರಿಗೂ ಆನಂದವನ್ನುಂಟುಮಾಡುವುದು, ಸಕಲ ಪುಣ್ಯಫಲಂಗಳನ್ನು ಕೊಡುವುದು ಎಂದು ನಿಜಬುದ್ಧಿಯಿಂದ ಆಲೋಚಿಸಿ ಮನೋಹರವಾದ ಕನ್ನಡ ಭಾಷೆಯಿಂದ ಶೃಂಗಾರರಸ ಮುಂತಾದ ನವರಸಗಳಿಂದ ತುಂಬಿರುವ ಸದ್ಯುಕ್ತಿಗಳೆಂಬ ತೆರೆಗಳಿಂದೊಪ್ಪಿರುವ ನದಿಯೋಪಾದಿಯಲ್ಲಿರುವ ಟೀಕೆಯನ್ನು ವಿದ್ವಜ್ಜನಸಮೂಹಕ್ಕೆ ಸಂತೋಷವನ್ನುಂಟುಮಾಡುವುದಕ್ಕೋಸ್ಕರ ರಚಿಸಿರುವರು.' (ಕ.ಚ. ಸಂ. III, ಪು. ೧೭೭)

ಇದು ಹೊಸಗನ್ನಡಕ್ಕೆ ಬಹಳ ಸಮೀಪವರ್ತಿಯಾಗಿದೆ. ನಡುಗನ್ನಡದ ಛಾಯೆ ಸ್ವಲ್ಪವುಂಟು. ಕೆಂಪುನಾರಾಯಣನ ಶೈಲಿಗಿಂತ ಹೆಚ್ಚಾದ ನವೀನತೆ ಈ ಶೈಲಿಯಲ್ಲಿದೆ. ಹಿಂದೆ ಎಂದೂ ಒದಗದ ಪ್ರೋತ್ಸಾಹ ಮುಮ್ಮಡಿ ಕೃಷ್ಣರಾಜನ ಆಸ್ಥಾನದಲ್ಲಿ ಗದ್ಯಕ್ಕೆ ದೊರೆತು, ಅದೊಂದು ಗದ್ಯಾಶ್ರಮದಂತಿದ್ದಿತು. ಇನ್ನೊಂದು ದಿಕ್ಕಿನಿಂದ ಕ್ರೈಸ್ತ ಮಿಶನರಿಗಳ ಉದ್ಯಮವು ಗದ್ಯಕ್ಕೆ ನ್ಯಾಯವಾದ ಸ್ಥಾನಮಾನಗಳನ್ನು ಸಾಧಿಸುತ್ತಿದ್ದಿತು. ಮೊದಲಿನ 'ಇಂಗ್ಲಿಷು–ಕನ್ನಡ ನಿಘಂಟು'ವನ್ನು ೧೮೨೪ರಲ್ಲಿ ರೆವರೆಂಡ್ ರೀವ್ ಎಂಬವನು ಪ್ರಕಟಿಸಿದನು. ಅಂದಿನ ಸರ್ಕಾರದವರು ಯೋಗ್ಯ ಪಠ್ಯಪುಸ್ತಕಗಳ ತಯಾರಿಕೆಯ ಕಡೆಗೆ ಏನೂ ಗಮನವನ್ನು ಕೊಟ್ಟಂತೆ ತೋರುವುದಿಲ್ಲ. ಆದರೂ 'ಮದ್ರಾಸಿನ ಫೋರ್ಟು ಸೈಂಟ್ ಜಾರ್ಜಿನ ಸರಕಾರದವರು' ೧೮೪೭ರಲ್ಲಿ ಪಠ್ಯಪುಸ್ತಕದ ಅಭಾವದಿಂದಾಗಿ ಕನ್ನಡ ಟ್ರಾನ್ಸ್ಲೇಟರ್ ಕಚೇರಿಯ ಮುನಿಷಿಯಾಗಿದ್ದ ಅಡಕಿ ಸುಬ್ಬರಾಯನೆಂಬುವನ ಕೈಯಲ್ಲಿ ಒಂದು ಸಂಕಲನವನ್ನು ಬರೆಸಿದರು. ಅಂದಿನ ಆಂಗ್ಲೇಯ ಅಧಿಕಾರಿಗಳಿಗೆ ಫೋರ್ಟು ಸೈಂಟು ಜಾರ್ಜ್ ಕಾಲೇಜಿನಲ್ಲಿ (College of Fort Saint George) ಕನ್ನಡ ಕಲಿಯಲು ಅನುಕೂಲವಾಗುವಂತೆ ಮಾಡಿಕೊಡುವುದೇ ಈ ಸಂಕಲನದ ಉದ್ದೇಶವಂತೆ.[1]

---

[1] Selection of Stories and Revenue paper in the

## ಆ ಸಂಕಲನದಲ್ಲಿ ಬಂದಿರುವ ಒಂದು ಕಥೆ

ಒಂದು ಗ್ರಾಮದಲ್ಲಿ ಒಬ್ಬ ಕುಮಾರನು ಒಬ್ಬ ಮನುಷ್ಯಂನ ಕೊಂದನು—ಆದ ಕಾರಣ—ಅವಂನ ಶೂಲಕ್ಕೆ ಹಾಕುವಂತೆ ನಿರ್ಣಯವಾಯಿತು—ಆ ಸ್ಥಲದಲ್ಲಿಯಿದ್ದ ದೊಡ್ಡ ಒಕ್ಕಲಿಗರು ಯೆಲ್ಲರೂ ಕೂಡಿ—ಆ ಕುಮಾರನು ಜನಗಳಿಗೆ ಬಹು ಉಪಯೋಗವಾಗಿಯಿರುವುದರಿಂದ ಅವಂನ ಕೊಲ್ಲಬೇಡರಿ—ಯೆಂತ ಹೇಳಿಕೊಂಡರು—ಹಾಂಗಾದರೆ—ನ್ಯಾಯವಂನು ಹ್ಯಾಂಗೆ ನಡೆಯಿಸಬೇಕು ಯೆಂತ ನ್ಯಾಯಾಧಿಪತಿ ಕೇಳಲಾಗಿ—ಆ ವೊಕ್ಕಲಿಗರಲ್ಲಿ ವೊಬ್ಬನು—ಸ್ವಾಮಿ—ಆ ಗ್ರಾಮದಲ್ಲಿ ಯಿಬ್ಬರು ಜೇಡರು ಯಿದ್ದಾರೆ—ಇಷ್ಟು ಸಂಣವೂರಿಗೆ ವೊಬ್ಬ ಜೇಡ ಸಾಕು—ಯೆರಡನೇ ಜೇಡಂನ ಶೂಲಕ್ಕೆ ಹಾಕರಿ ಯೆಂತ ಹೇಳಿದನು. (ಯಥಾಪ್ರತಿ—೨೦ನೆಯ ಕಥೆ)

ಇಲ್ಲಿ ಹಳ್ಳಿಯ ಕಥೆಯೊಂದು ತಕ್ಕಷ್ಟು ಪುಷ್ಟಿಗೊಂಡ ಹೊಸಗನ್ನಡದಲ್ಲಿ ಹೇಳಲ್ಪಟ್ಟಿದೆ. ಅಂತು ಚಂಪೂವಿನಲ್ಲಿ ಪದ್ಯದ ದಾಸ್ಯವನ್ನು ವಹಿಸಿದ್ದ ಗದ್ಯವು ಇದೀಗ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದು ಶುದ್ಧ ಸಾಹಿತ್ಯ ಕ್ಷೇತ್ರದಲ್ಲಿ ವ್ಯವಹರಿಸಲು ಮೊದಲಾಯಿತು. ಗದ್ಯವು ಹೃದ್ಯವಾಗುತ್ತಿತ್ತು.

೧೮೪೮ರಲ್ಲಿ ಕ್ರೈಸ್ತ ಮಿಶನರಿಗಳ ನೇತೃತ್ವದಲ್ಲಿ 'ಯಾತ್ರಿಕನ ಸಂಚಾರ' ಎಂಬ ಹೆಸರಿನಲ್ಲಿ ಆಂಗ್ಲಸಾಹಿತ್ಯದಿಂದ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಎಂಬ ಪ್ರಸಿದ್ಧ ಗ್ರಂಥವು ಕನ್ನಡಕ್ಕೆ ಭಾಷಾಂತರಿಸಲ್ಪಟ್ಟಿತು. ೧೮೬೪ರಲ್ಲಿ ರೆವರೆಂಡ್

---

Karnatika Language with translation and Grammatical Analysis is to which is added Dialogues in Karnatica and English by Adacki Sooba Rao (Moonshee in the Canarese Translator's Office). Revised by Walter Elliot Esq. of the Madras, Civil Service: Printed at the Military Male Orphan Asylum, Madras, 1846—ಎಂಬುದಾಗಿ ರಕ್ಷಾಕವಚದಲ್ಲಿದೆ. ಈ ಕೃತಿಯನ್ನು ದಿವಂಗತ Francis Whyte Ellis ಅವರಿಗೆ ಗ್ರಂಥಕರ್ತನು ಅರ್ಪಣೆ ಮಾಡಿರುತ್ತಾನೆ.

ಕಿಟ್ಟೆಲ್ಲರ[1] ಪಾಂಡಿತ್ಯಪೂರ್ಣವಾದ ಬೃಹತ್ ಕೋಶವು ಕನ್ನಡ-ಇಂಗ್ಲಿಷ್ ಡಿಕ್ಶನರಿ (Kannada English Dictionary) ಎಂಬ ಹೆಸರಿನಿಂದ ಪ್ರಕಟವಾಯಿತು. ಇದರಲ್ಲಿ ಅಂದು ಅವರಿಗೆ ಉಪಲಬ್ಧವಾದ ಅನೇಕ ಹಳಗನ್ನಡ ನಡುಗನ್ನಡ ಗ್ರಂಥಗಳಲ್ಲಿ ಪ್ರಯೋಗವಾದ ಶಬ್ದಗಳಿಗೆ ಅರ್ಥವನ್ನು ಕೊಟ್ಟಿದ್ದಾರೆ ; ಮಾತ್ರವಲ್ಲ ಹೊಸಗನ್ನಡದಲ್ಲಿ ರೂಢವಾಗಿದ್ದ ಕೆಲವು ಪ್ರಾದೇಶಿಕ ಶಬ್ದಗಳನ್ನು ಸಾಧ್ಯವಾದಷ್ಟು ಸೇರಿಸಿದ್ದಾರೆ. ಭಾಷಾಶಾಸ್ತ್ರಾಭ್ಯಾಸ ಅಷ್ಟಾಗಿ ಮುಂದುವರಿಯದ ಕಾಲದಲ್ಲಿ ರಚಿತವಾದ ಆ ನಿಘಂಟುವಿನಲ್ಲಿ ಶಬ್ದಗಳ ವ್ಯುತ್ಪತ್ತಿ (ಸಾಧ್ಯವಾದಲ್ಲಿ), ಅವುಗಳನ್ನು ದೇಶ್ಯ, ಅನ್ಯದೇಶ್ಯ, ಸಂಸ್ಕೃತ, ತದ್ಭವ ಇತ್ಯಾದಿಯಾಗಿ ವರ್ಗೀಕರಣ, ಇತರ ದ್ರಾವಿಡ ಭಾಷೆಗಳಲ್ಲಿ ಕನ್ನಡ ದೇಶ್ಯಪದಗಳಿಗೆ ಕಂಡುಬರುವ ಜ್ಞಾತಿಶಬ್ದಗಳು (Cognates) ಮುಂತಾದ ವಿವರಣಗಳು ಕೊಡಲಾಗಿವೆ. ಇದು ಮಹತ್ವದ ಸಿದ್ಧಿ. ಆಯಾ ಶಬ್ದಗಳ ಕೆಳಗೆ ಅವುಗಳ ಪ್ರಯೋಗವುಳ್ಳ ನಾಣ್ಣುಡಿಗಳನ್ನು ಕೊಟ್ಟಿದೆ. ಕೆಲವೆಡೆ ಪೂರ್ವ ಕವಿಗಳಿಂದ ಅಥವಾ ಲಾಕ್ಷಣಿಕರಿಂದ ಪ್ರಯೋಗಗಳನ್ನು ಉದ್ಧರಿಸಲಾಗಿದೆ. ನಿಘಂಟುವಿನ ಮುನ್ನುಡಿಯಲ್ಲಿ ವಿಚಾರಪೂರ್ವಕವಾದ ಸಂಶೋಧನಾಂಶಗಳು ಕನ್ನಡ ಭಾಷಾರಚನೆಯ ಮಟ್ಟಿಗೆ ಕೊಡಲ್ಪಟ್ಟಿವೆ. ಈ ಮಹಾಕೋಶಕ್ಕೆ ೨೮ ವರ್ಷಗಳ ಕಾಲ ಕಿಟ್ಟೆಲ್ ಸಾಹೇಬರು ಪಂಡಿತ ವೃಂದದೊಂದಿಗೆ ದುಡಿದರಂತೆ. ಇದು ಅನುಪಮ ಸೇವೆ.

೧೯ನೆಯ ಶತಮಾನದ ಮಧ್ಯದಲ್ಲಿ 'ಸಭಾಪತ್ರ', 'ಸತ್ಯದೀಪಿಕೆ'ಗಳೆಂಬ ಮತಪ್ರಚಾರಕ ಕನ್ನಡ ಪತ್ರಿಕೆಗಳನ್ನು ಹೊರಡಿಸಿ, ಕನ್ನಡದಲ್ಲಿ ಪತ್ರಿಕಾ ವ್ಯವಸಾಯಕ್ಕೂ ವಿದೇಶೀ ಮತಪ್ರಚಾರಕರು ಅಸ್ತಿವಾರ[2] ಹಾಕಿದರು. ೧೮೬೫ರಲ್ಲಿ ಮೈಸೂರಿನಿಂದ 'ಕರ್ಣಾಟಕ ಪ್ರಕಾಶಿಕೆ' ಎಂಬ ಪತ್ರಿಕೆ ಹುಟ್ಟಿತು.

---

1 ಇಲ್ಲಿಂದ ಮುಂದೆ ನಮಗೆ ತೀರ ಸಮೀಪದವರಾದ ಮತ್ತು ನಮ್ಮ ಮಧ್ಯೆಯಿರುವ ಗ್ರಂಥಕರ್ತರನ್ನು ಕುರಿತು ಹೇಳುವಾಗ ಗೌರವಾರ್ಥ ಬಹುವಚನವನ್ನು ಉಪಯೋಗಿಸಲಾಗಿದೆ.

2 ಬಿ. ಶಂಕರಭಟ್ಟ, ನಮ್ಮ ಸಾಹಿತ್ಯ, ಪು. ೧೯

೧೯ನೆಯ ಶತಮಾನದ ಕೊನೆಯ ಮೂರು ದಶಕಗಳಲ್ಲಿ ಮೈಸೂರಿನ ಸರಕಾರದಿಂದ ಬಿ. ಎಲ್. ರೈಸರ ನೇತೃತ್ವದಲ್ಲಿ ಹಳಗನ್ನಡ ಕಾವ್ಯಗಳೂ ಲಕ್ಷಣ ಗ್ರಂಥಗಳೂ ಕೆಲವು ವಿಮರ್ಶಾತ್ಮಕವಾದ ಮುನ್ನುಡಿಗಳಿಂದ ಪ್ರಕಟಿತವಾದುವು. ಇದು ಪಾಶ್ಚಾತ್ಯ ವಿಮರ್ಶಾಪದ್ಧತಿಯಿಂದ ಕವಿಕಾವ್ಯ ಪರಿಚಯ ಮಾಡಿ ಕೊಡುವ ಒಂದು ಹೊಸ ಕ್ರಮವನ್ನು ತಂದಿತು. ಈ ಮುನ್ನುಡಿಗಳೆಲ್ಲವೂ ಹೆಚ್ಚಾಗಿ ಇಂಗ್ಲಿಷಿನಲ್ಲಿದ್ದರೂ ಮುಂದಿನ ಕನ್ನಡ ವಿಮರ್ಶೆಗಳಿಗೆ ಅವು ಮಾರ್ಗದರ್ಶಕಗಳಾದುವು.

ಹೀಗಿದ್ದರೂ ೨೦ನೆಯ ಶತಮಾನದ ಆದಿಯಲ್ಲಿ ಕನ್ನಡಕ್ಕೆ ಅಸ್ವಸ್ಥ ತಪ್ಪಲಿಲ್ಲ. ಆಧುನಿಕ ಪಾಠಶಾಲೆಗಳಲ್ಲಿ ಇಂಗ್ಲಿಷು ಮಾಧ್ಯಮದಲ್ಲಿ ಪಾಠಗಳು ಸಾಗುತ್ತಿದ್ದವು. ಕೆಲವು ಸಂದರ್ಭಗಳಲ್ಲಿ ಕನ್ನಡ ಪಾಠದಲ್ಲಿ ಕನ್ನಡಕ್ಕೆ ಇಂಗ್ಲಿಷಿನಲ್ಲಿ ಅರ್ಥ ಹೇಳುವ ವಿಚಿತ್ರ ಪರಿಸ್ಥಿತಿಯೂ ಇದ್ದಿತು. ಇಂಗ್ಲಿಷು ಓದಿಕೊಂಡ ವಿದ್ವಾಂಸರಲ್ಲಿ ಕನ್ನಡಕ್ಕೆ ಮನ್ನಣೆಯಿರಲಿಲ್ಲ. ಸುಶಿಕ್ಷಿತರೆನಿಸಿಕೊಂಡವರು ಪರಸ್ಪರ ಇಂಗ್ಲಿಷಿನಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಆಧುನಿಕ ಶಿಕ್ಷಣದ ಪ್ರಯೋಜನ ಲಭಿಸದಿದ್ದ ಬಹುಸಂಖ್ಯಾಕರಾದ ಹಳ್ಳಿಗರಲ್ಲಿ ಕನ್ನಡಭಾಷಾಸಂಸ್ಕೃತಿಗಳ ಸತ್ವವಾದರೂ ಉಳಿದುಕೊಂಡಿತು. ಹರಿಕಥೆ ಪುರಾಣಗಳ ಸಪ್ತಾಹ, ವಚನಾಮೃತ, ದಾಸರ ಕೀರ್ತನೆಗಳು, ಭಜನೆಗಳು ಯಕ್ಷಗಾನ ಬಯಲಾಟಗಳು ಇತ್ಯಾದಿ ಕಾರ್ಯಕ್ರಮಗಳು, ಕನ್ನಡದ ನಂದಾದೀಪವನ್ನು ನಂದಲು ಬಿಡಲಿಲ್ಲ ; ದೀಪವು ಮಿಣಿಮಿಣಿಯಾಗಿ ಉರಿಯುತ್ತಿತ್ತು.

ಆಧುನಿಕ ಸುಶಿಕ್ಷಿತರು ಕನ್ನಡಕ್ಕೆ ತೋರುತ್ತಿದ್ದ ಅಸಡ್ಡೆ ಬಹಳ ಕಾಲ ಇರಲಿಲ್ಲ. ಈ ಶತಮಾನದ ಎರಡನೆಯ ದಶಕದಲ್ಲಿ ಭಾರತದ ಆದ್ಯಂತವಾಗಿ ರಾಜಕೀಯ ಆಂದೋಲನದಿಂದ ಒಂದು ನವಸ್ಫೂರ್ತಿಯುಂಟಾದುದು ಸರ್ವವಿದಿತ. ಸ್ವದೇಶಾಭಿಮಾನ, ಸ್ವಭಾಷಾಭಿಮಾನ, ಸ್ವಜನಾಭಿಮಾನಗಳ ಮುಪ್ಪುರಿಯಿಂದ ಉಚ್ಚ ಸ್ವಾಭಿಮಾನವು ಜನತೆಯಲ್ಲಿ ಅಂಕುರಿಸಿತು. ಈ ಅಂಕುರವು ಗಿಡವಾಯಿತು. ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇತರ ಸೇವೆಗಳೊಂದಿಗೆ ವಿಚಾರವಂತರಾದ ಆಧುನಿಕ ಸುಶಿಕ್ಷಿತರು ಸಾಹಿತ್ಯಸೇವೆ

ಯಲ್ಲಿಯೂ ನಿರತರಾದರು. ಮಿಣಿಮಿಣಿಯಾಗಿ ಉರಿಯುತ್ತಿದ್ದ ನಂದಾ ದೀಪವು ಮತ್ತೆ ಅಭಿವರ್ಧಿತ ಪ್ರಕಾಶದಿಂದ ಜ್ಞಾನಜ್ಯೋತಿಯನ್ನು ನಾಲ್ಕು ಕಡೆಗೆ ಬೀರುವುದಕ್ಕೆ ಉಪಕ್ರಮಿಸಿತು.

ಪಾಶ್ಚಾತ್ಯ ಸಾಹಿತ್ಯ ಪ್ರಕಾರಗಳ ಸ್ವಾರಸ್ಯವನ್ನು ಸವಿದ ವಿದ್ವಾಂಸರು ಕನ್ನಡದಲ್ಲಿಯೂ ಅಂಥ ಪ್ರಯೋಗಗಳನ್ನು ಮಾಡಿ ಕನ್ನಡ ಸಾಹಿತ್ಯದ ಸೌಂದರ್ಯವನ್ನೂ ಶಕ್ತಿಯನ್ನೂ ಹೆಚ್ಚಿಸಬೇಕೆಂಬುದಾಗಿ ಅಭಿಲಾಷೆಪಟ್ಟರು. ಈ ಪ್ರಯತ್ನದಲ್ಲಿ ಕಳೆದ ಮೂವತ್ತು ವರ್ಷಗಳಲ್ಲಿ ಅನೇಕ ದಿಸೆಗಳಲ್ಲಿ ಕನ್ನಡ ಸಾಹಿತ್ಯಜ್ಞರು ಕೃತಕೃತ್ಯರಾಗಿದ್ದಾರೆ ಎನ್ನಬಹುದು. ಆಧುನಿಕ ಕನ್ನಡ ಸಾಹಿತ್ಯವು ಕೆಲವು ಪ್ರಕಾರಗಳಲ್ಲಿ ಪುಷ್ಟವಾಗಿ ಬೆಳೆದಿದೆ ; 'ಉಳಿದ' ಪ್ರಕಾರ ಗಳಲ್ಲಿ ಬೆಳೆಯಬೇಕಾದಷ್ಟು ಬೆಳೆಯಲಿಲ್ಲವೆಂಬುದು ನಿಜ. ಆದರೂ ನಾವು ನಿರಾಶರಾಗಬೇಕಾಗಿಲ್ಲ. ಸ್ವಾತಂತ್ರ್ಯ ದೊರಕಿದಂದಿನಿಂದ (೧೯೪೭) ಎಡೆತಡೆ ಯಿಲ್ಲದೆ ಸಾಹಿತ್ಯವಾಹಿನಿಯು ಹುಚ್ಚುಹೊಳೆಯಾಗಿ ಹರಿಯುತ್ತಿದೆ. ಜನಾನಂದ ಉಕ್ಕಿ ಹೊಳೆ ಉಕ್ಕಿದೆ. ಈಗ ಬೆಟ್ಟದ ಝುರಿಯಿಂದ ಬಯಲಿಗೆ ಇಳಿದುದಾಯಿತು. ಇನ್ನು ಮಂದಗತಿಯಿಂದ ಮುಂದುವರಿಯುತ್ತಾ ಬಯ ಲನ್ನು ಫಲವತ್ತಾಗಿಸಬೇಕು. ಬಯಲನ್ನು ಹುಚ್ಚುಹೊಳೆ ಕೊಚ್ಚಿಕೊಂಡು ಹೋಗಬಾರದು ಹಿತವಾದ ಆನಂದದೊಂದಿಗೆ ಉಪಯುಕ್ತತೆಯೂ ಬೇಕು. ವಿವರವಾಗಿ ಹೇಳುವುದಾದರೆ ನಮ್ಮಲ್ಲಿ ಕಾದಂಬರಿ, ಸಣ್ಣಕಥೆ, ಭಾವಗೀತೆ ಇತ್ಯಾದಿ ಸಾಹಿತ್ಯಪ್ರಕಾರಗಳು ವಿಪುಲವಾಗಿ ರಚಿತವಾಗಿವೆ ಆದರೆ ವಿಚಾರ ಸಾಹಿತ್ಯ ಶಾಸ್ತ್ರೀಯ ಸಾಹಿತ್ಯಗಳ ರಚನೆ ತೀರ ಕಡಮೆ. ಈ ಎರಡನೆಯ ವರ್ಗದ ಸಾಹಿತ್ಯನಿರ್ಮಾಣವೇ ನಮ್ಮ ಜನಕ್ಕೆ ಜ್ಞಾನವನ್ನು ನೀಡಬಲ್ಲುದು. ಅದೇ ಮುಖ್ಯ. 'ನಹಿ ಜ್ಞಾನೇನ ಸದೃಶಂ'.

ಆಧುನಿಕ ಕನ್ನಡ ಸಾಹಿತ್ಯದ ಸ್ವರೂಪವನ್ನು ಪ್ರೊ॥ ಗೋಕಾಕರು ಎಂಟು ಉಪನದಿಗಳ ಸಂಗಮಕ್ಕೆ ಹೋಲಿಸಿದ್ದಾರೆ.[1] ಈ ಸುಂದರ ಸಂಗಮದ

---

[1] *Contemporary Indian Literature*, p. 106 : 'There are eight tributaries that contribute to the living confluence that is modern Kannada.'

ಹೋಲಿಕೆಯನ್ನು ಎಂಟಲ್ಲ ಇನ್ನೂ ಹೆಚ್ಚಿಗೆ ಉಪನದಿಗಳ ಕೂಡಲವೆಂದರೂ ಎನ್ನಬಹುದು. ಪ್ರಸ್ತುತದಲ್ಲಿ ಈ ಉಪವಾಹಿನಿಗಳ ಉಗಮ ಮತ್ತು ಅವುಗಳ ಸತ್ವ—ಇವನ್ನು ಒಂದಿಷ್ಟು ಪರಿಶೀಲಿಸುವುದಕ್ಕೆ ಯತ್ನಿಸೋಣ.

ಹಿಂದೆ ಹೇಳಿದಂತೆ ಪಾಶ್ಚಾತ್ಯ ಭಾಷಾಸಂಸ್ಕೃತಿಗಳ ಸಂಪರ್ಕದಿಂದ ಒಂದು ನವಶಕೋದಯವಾಯಿತು. ಹಳೆಯ ಸಂಸ್ಥೆಗಳು ಒಮ್ಮೆ ಕಂಪಿಸಿದುವು. ಸಂಪ್ರದಾಯದ ಮೇಲಿದ್ದ ಅಂಧಶ್ರದ್ಧೆ ಕುಸಿಯುತ್ತಿತ್ತು. ಇದು ಏಕೆ ಹೀಗಾಗಬೇಕು ಎಂಬ ಕುತೂಹಲದ ಪ್ರಶ್ನೆ ಉದ್ಭವಿಸಿತು. ಮಹಾಪುರಾಣಗಳು, ದೇವಾಸುರಯುದ್ಧಗಳು, ರಾಜವಂಶಗಳು ಮಾತ್ರ ಕೃತಿವಸ್ತುವಾಗಬೇಕಿಲ್ಲ. ಸಾಮಾನ್ಯ ಮಾನವನು ತನ್ನ ನಿತ್ಯಜೀವನದ ಆಗುಹೋಗುಗಳೊಂದಿಗೆ ಹೆಚ್ಚು ಆನಂದದಾಯಕವೂ ಹೆಚ್ಚು ಉಪಯುಕ್ತವೂ ಹೆಚ್ಚು ಹೃದಯವೇದ್ಯವೂ ಆಗಿರುವ ಸಹಜ ಕೃತಿ ವಸ್ತುವಾಗಬಹುದೆಂಬ ಭಾವನೆ ಲೇಖಕರಲ್ಲಿ ಮೂಡಿತು. ವರ್ಣನೆಗಳು ಅಸ್ವಾಭಾವಿಕವಾಗಿ ಹಳಸಿದ ಕವಿಸಮಯಗಳಿಂದ ತುಂಬಿರುವುದು ಕೃತಕವೆಂಬುದಾಗಿ ಪರಿಗಣಿಸಲ್ಪಟ್ಟಿತು. ಪ್ರಕೃತಿ ಸೌಂದರ್ಯಕ್ಕೆ ಮನಸೋತ ಕವಿಗಳು ವಾಸ್ತವಿಕತೆಗೆ ವಿರೋಧವಿಲ್ಲದೆ ಸುಂದರವಾಗಿ, ಕೆಲವು ವೇಳೆ, ಧ್ವನಿಪೂರ್ಣವಾಗಿ ಮನೋಹರವಾದ ಚಿತ್ರಣಗಳನ್ನು ಕಣ್ಣಮುಂದೆ ಕಟ್ಟಲು ಸಾಧಿಸಿದರು. ಸಾಹಿತ್ಯವು ಜೀವನದ ಕೈಗನ್ನಡಿಯಂತಿದ್ದು ರಸಖಣಿಯುವಾಗಬೇಕು ಎಂಬ ಧ್ಯೇಯ ಹೊಸ ಬರೆಹಗಾರರಲ್ಲಿ ನೆಲೆಮಾಡಿತು. ಪಾಶ್ಚಾತ್ಯ ಸಾಹಿತ್ಯಪ್ರಕಾರಗಳು ಇವರ ಧ್ಯೇಯಸಾಧನೆಗೆ ಅನೇಕ ಮಾರ್ಗಗಳನ್ನು ಕಲ್ಪಿಸಿಕೊಟ್ಟವು. ಅವರವರ ಒಲವಿಗೆ ತಕ್ಕಂತೆ ಬರೆಹಗಾರರು ವಿಶಿಷ್ಟ ಪ್ರಕಾರಗಳನ್ನು ಕೈಗೊಂಡರು.[1] ಇದೇ ಸಾಹಿತ್ಯ ಉಪವಾಹಿನಿಗಳ ಉಗಮದ ಕಥೆ.

---

[1] ಪ್ರಕಾರವು 'ರೂಪ'ದಿಂದ ಬೇರಾಗಬಹುದು ; 'ಕಾದಂಬರಿ, ನಾಟಕ, ಭಾವಗೀತೆ ಇತ್ಯಾದಿಯಾಗಿ ; ಪ್ರತಿಪಾದನ 'ರೀತಿ'ಯಿಂದ ಬೇರಾಗಬಹುದು ; ವಿಡಂಬನ, ಪರಿಹಾಸ, ಕಟೂಕ್ತಿ, ಪ್ರಶಂಸೆ ಇತ್ಯಾದಿಯಾಗಿ ; ತನ್ನ ಧ್ಯೇಯಸಾಧನೆಗೆ ವಸ್ತುವನ್ನು ನಿರ್ದಿಷ್ಟವಾದ 'ರೂಪ', 'ರೀತಿ'ಗಳ ಎರಕದ ಒಂದು ವಿಶಿಷ್ಟ ಪ್ರಕಾರದಲ್ಲಿ ಕವಿಯಾದವನು ಚಿತ್ರಿಸುವನು.

## ೧. ಸಣ್ಣ ಕಥೆಗಳು

ಕೆರೂರು ವಾಸುದೇವಾಚಾರ್ಯ, ಪಂಜೆ ಮಂಗೇಶರಾವ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀನಿವಾಸ), ಬೆಟಗೇರಿ ಕೃಷ್ಣಶರ್ಮ (ಆನಂದಕಂದ) ಇವರುಗಳನ್ನು ಕನ್ನಡದಲ್ಲಿ ಸಣ್ಣ ಕಥೆಗಳ ಆದ್ಯರೆಂಬುದಾಗಿ ಹೇಳುವರು. ಈ ಆದ್ಯರಲ್ಲಿ ಯಾರೆಂಬುದಾಗಿ ವಾದವಿವಾದಗಳು ನಡೆದಿವೆ. ಅದು ಹೇಗಿದ್ದರೂ ಕನ್ನಡದ ಸಣ್ಣ ಕಥೆಗಳನ್ನು ಅಮರವಾಗಿಸಿದ ಕೀರ್ತಿ ಅವರೆಲ್ಲರಿಗೂ ಸಲ್ಲುವುದು. ಈ ಕ್ಷೇತ್ರದಲ್ಲಿ ಗೊರೂರು, ಆನಂದ, ದಿವಂಗತ ಗೌರಮ್ಮ, ಕೃಷ್ಣಕುಮಾರ್, ಗೋಪಾಲಕೃಷ್ಣರಾವ್ ಮೊದಲಾದ ಉತ್ತಮ ಕಥೆಗಾರರನ್ನು ಮರೆಯುವಂತಿಲ್ಲ. ಸಾಮಾಜಿಕ ವಸ್ತುಗಳನ್ನೇ ಇವರೆಲ್ಲರೂ ಹೆಚ್ಚಾಗಿ ಆಯ್ದುಕೊಂಡಿರುವರು. ಕೆಲವೊಮ್ಮೆ ಐತಿಹಾಸಿಕ, ತಾತ್ವಿಕ, ದೇಶಭಕ್ತಿಪೂರಿತ ವಸ್ತುಗಳನ್ನು ಬಳಸಿಕೊಂಡಿದ್ದಾರೆ. ಸಣ್ಣ ಕತೆಯ ತಂತ್ರದ ಜೀವಾಳವೆಂದರೆ ಚಿತ್ರಣ ನಿರೂಪಣೆಗಳ ರೀತಿ ; ಇದು ವಸ್ತುವಿಗಿಂತ ಹೆಚ್ಚು ಮುಖ್ಯ. ಸನ್ನಿವೇಶ, ಪಾತ್ರರಚನೆ, ಮನೋವೃತ್ತಿ ಇತ್ಯಾದಿ ಒಂದೊಂದು ಅಂಶವನ್ನು ಸೂಕ್ಷ್ಮವಾಗಿ ಚಿಂತನಮಾಡಿ ಕುಸುರಿಯ ಕೆಲಸವನ್ನು ಮಾಡಿದ್ದಾರೆ. ಅವಸರದಿಂದ ಓಡುತ್ತಿರುವ ಇಂದಿನ ಜಗತ್ತಿಗೆ ಅಲ್ಪವೇಳೆಯಲ್ಲಿ ರಸಾಸ್ವಾದನೆ ಮಾಡಲು ಅನುಕೂಲವಾದ ರುಚಿಕರವಾದ ಪಾಕಗಳಿವು. ಪ್ರಸಿದ್ಧ ಲೇಖಕರ ಸಣ್ಣ ಕತೆಗಳ ಸುಂದರ ಸಂಕಲನಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಮತ್ತು ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯವರು ಇತ್ತೀಚೆಗೆ ಪ್ರಕಟಿಸಿದ್ದಾರೆ.

## ೨. ಕಾದಂಬರಿಗಳು

ಆಂಗ್ಲ ಕಾದಂಬರಿಕಾರರ ಪ್ರಭಾವಕ್ಕೆ ನಮ್ಮ ದೇಶದ ಬರೆಹಗಾರರು ಕಳೆದ ಶತಮಾನದ ಕೊನೆಯಲ್ಲಿ ಒಳಗಾದರು. ಇದರ ಪರಿಣಾಮ ಮೊದಲು ಕಂಡು ಬಂದುದು ಬಂಗಾಳದಲ್ಲಿ ಮತ್ತು ಮಹಾರಾಷ್ಟ್ರದಲ್ಲಿ. ಬಂಕಿಂಚಂದ್ರರೂ ಆಪ್ಟೆಯವರೂ ಕಾದಂಬರಿಯುಗದ ಶಕಪುರುಷರಾದರು. ರಾಷ್ಟ್ರಭಕ್ತಿ, ಭಾಷಾಭಿಮಾನಗಳು ಈ ದೆಸೆಯಲ್ಲಿ ನವಚೇತನವನ್ನುಂಟುಮಾಡಿದುವು. ಕರ್ಣಾಟಕದಲ್ಲಿ ಗಳಗನಾಥರೂ ವೆಂಕಟಾಚಾರ್ಯರೂ ಕಾದಂಬರೀ ಧ್ವಜವನ್ನು ಹಾರಿ

ಸಿದರು. ವೆಂಕಟಾಚಾರ್ಯರು ಬಂಕಿಮರ ಅನೇಕ ಕಾದಂಬರಿಗಳನ್ನು ಮೂಲದ ಸ್ವಾರಸ್ಯ ಕೆಡದಂತೆ ಉತ್ತಮ ರೀತಿಯಲ್ಲಿ ಕನ್ನಡಕ್ಕೆ ಇಳಿಸಿದರು. ಗಳಗನಾಥರು ಆಪ್ಟೆಯವರ ಮರಾಠೀ ಕಾದಂಬರಿಗಳನ್ನು ಚೆಂದವಾಗಿ ಕನ್ನಡಿಸಿದುದಲ್ಲದೆ ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದರು. ವೆಂಕಟಾಚಾರ್ಯರು ಗದ್ಯದಲ್ಲಿ ಪ್ರಸಾದವನ್ನು, ಗಳಗನಾಥರು ಓಜಸ್ಸನ್ನು ತುಂಬಿ, ಮುಂದಿನ ಕಾದಂಬರಿಕಾರರಿಗೂ ಹೊಸಗನ್ನಡ ಗದ್ಯಲೇಖಕರಿಗೂ ಮಾರ್ಗದರ್ಶಕರಾದರು. ಅಂದು ಕನ್ನಡದಲ್ಲಿ ಓದುವ ಹುಚ್ಚು ಹಿಡಿಸುವುದಕ್ಕೆ ಇವರೀರ್ವರ ಕೃತಿಗಳು ಎಷ್ಟು ಸಹಾಯಕವಾದುವೆಂಬುದನ್ನು ಬಣ್ಣಿಸುವುದು ಅಶಕ್ಯ. ಈ ಸಂದರ್ಭದಲ್ಲಿ ಗುಲ್ವಾಡಿ ವೆಂಕಟರಾಯರು ೧೮೯೯ರಲ್ಲಿ ಬರೆದ 'ಇಂದಿರಾದೇವಿ' ಎಂಬ ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು (೧೮೯೯) ನೆನೆಯಬೇಕು. ಹಾಗೆಯೇ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' ಎಂಬ ಸ್ವತಂತ್ರ ಕಾದಂಬರಿಯೂ ಗಮನಾರ್ಹ. ಬರುಬರುತ್ತಾ ಕಾದಂಬರಿ ಕೃಷಿ ವೈವಿಧ್ಯಪೂರ್ಣವಾಗಿ ಸಾಗಿತು. ೧೯೩೦ರಿಂದ ಇತ್ತ ಅನೇಕ ಅತ್ಯುತ್ತಮ ಸ್ವತಂತ್ರ ಕಾದಂಬರಿಗಳು ಕನ್ನಡದಲ್ಲಿ ರಚಿತವಾಗಿವೆ. ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ', ಕಾರಂತರ 'ಮರಳಿ ಮಣ್ಣಿಗೆ', ಅ. ನ. ಕೃಷ್ಣರಾಯರ 'ನಟಸಾರ್ವಭೌಮ', ತ. ರಾ. ಸು. ಅವರ 'ಹಂಸಗೀತೆ', ಕೆ. ವಿ. ಅಯ್ಯರರ 'ಶಾಂತಲಾ'—ಇವು ಒಂದೊಂದು ವಿಶಿಷ್ಟ ಗುಣದಿಂದ—ಕನ್ನಡ ಜನಜೀವನ ಇತಿಹಾಸ ಸಂಸ್ಕೃತಿ ಇತ್ಯಾದಿ ಅಂಶಗಳನ್ನು ಅಮರವಾಗಿಸಿವೆ. ಬೆಟಗೇರಿ, ಗೋಕಾಕ್, ಶ್ರೀರಂಗ, ಮಾಸ್ತಿ, ಮುಗಳಿ, ದೇವುಡು, ಬಸವರಾಜ ಕಟ್ಟೀಮನಿ, ವ್ಯಾಸರಾಯ ಬಲ್ಲಾಳ, ಕಸ್ತೂರಿ ಮೊದಲಾದ ಪ್ರಸಿದ್ಧ ಲೇಖಕರೂ ಕಾದಂಬರೀ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಿರುವರು. ಆಧುನಿಕ ಕನ್ನಡ ಲೇಖಕರಲ್ಲಿ ಪ್ರಸಿದ್ಧರಾದವರ ಅನೇಕ ಕೃತಿಗಳು ಭಾರತದ ಇತರ ಭಾಷೆಗಳಿಗೂ ಆಂಗ್ಲಭಾಷೆಗೂ ಪರಿವರ್ತನೆಯಾಗಿರುವುದು ಹೆಮ್ಮೆಯ ವಿಷಯ.

## ೩. ನಾಟಕಗಳು

ಕನ್ನಡ ಸಾಹಿತ್ಯದಲ್ಲಿ ಮೊದಲು ನಾಟಕಕ್ಕೆ ಬಹಳ ದುರ್ಭಿಕ್ಷ. ಕನ್ನಡದ

ಮೊದಲಿನ ನಾಟಕವೆಂದರೆ ಸಿಂಗಾರಾರ್ಯನ (೧೬೮೦) 'ಮಿತ್ರವಿಂದಾ ಗೋವಿಂದ'. ಇದು ಹರ್ಷನ 'ರತ್ನಾವಳಿನಾಟಿಕೆ'ಯನ್ನು ಮೂಲವಾಗಿಟ್ಟುಕೊಂಡು ಬರೆದ ಸಂಪ್ರದಾಯ ಪ್ರಕಾರದ ರೂಪಕ. ಮತ್ತಿನ ಸ್ಮರಣೀಯ ರೂಪಕ ರಚಕ ರೆಂದರೆ ಬಸವಪ್ಪ ಶಾಸ್ತ್ರಿಗಳು (೧೮೬೧). ಪಾಶ್ಚಾತ್ಯ ಪ್ರಭಾವಕ್ಕೆ ಶಾಸ್ತ್ರಿಗಳೂ ತಲೆದೂಗಿದರು. ಶೇಕ್ಸ್‌ಪಿಯರ್ ಮಹಾಕವಿಯ ಒಥೆಲ್ಲೋ ನಾಟಕವನ್ನು 'ಶೂರಸೇನ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಭಾಷಾಂತರಿಸಿದರು. ಕಾಳಿದಾಸನ 'ಶಾಕುಂತಲ'ವನ್ನು ಕನ್ನಡಕ್ಕೆ ಅತ್ಯುತ್ತಮವಾಗಿ ಅನುವಾದಿಸಿ, ಅಭಿನವ ಕಾಳಿದಾಸರಾದರು. ಮುಳುಬಾಗಲು ನರಹರಿಶಾಸ್ತ್ರಿಗಳು ಭವಭೂತಿಯ ಉತ್ತರ ರಾಮಚರಿತವನ್ನು ಕನ್ನಡಕ್ಕಿಳಿಸಿದರು. ಹೀಗೆ ಕೆಲವು ಅನುವಾದಗಳಾದುವು. ಆದರೂ ಉತ್ತಮ ಸ್ವತಂತ್ರ ರೂಪಕಗಳು ಮೊದಲಿಗೆ ರಚಿತವಾದುದು ಪಾಶ್ಚಾತ್ಯ ವಿದ್ಯಾಭ್ಯಾಸದ ಫಲವನ್ನು ಪಡೆದ ಲೇಖಕರಿಂದ ಎನ್ನಬೇಕು. ಷೆರಿಡನ್, ಒಸ್ಕರ್ ವೈಲ್ಡ್, ಇಬ್ಸೆನ್ ಮೊದಲಾದವರ ಕೃತಿಗಳು ಹಾಸ್ಯ ವಿಡಂಬನಗಳ ಮೂಲಕ ಅನೇಕ ಸಾಮಾಜಿಕ ನಾಟಕಗಳನ್ನು ರಚಿಸಲು ಅವರಿಗೆ ದಾರಿ ತೋರಿಸಿದುವು. ಟಿ. ಪಿ. ಕೈಲಾಸಂ ಅವರ 'ಹೋಂ ರೂಲು' 'ಟೊಳ್ಳು ಗಟ್ಟಿ', ಶ್ರೀರಂಗರ 'ಹರಿಜನ್ವಾರ', ಕಾರಂತರ 'ಗರ್ಭಗುಡಿ' ಇವಕ್ಕೆ ತಕ್ಕ ನಿದರ್ಶನಗಳು. ಪಶ್ಚಿಮದ ದುರಂತ ರುದ್ರನಾಟಕಗಳು ಶ್ರೀಯವರ 'ಅಶ್ವತ್ಥಾಮನ್', ಕುವೆಂಪುರವರ 'ಬೆರಳ್ಗೆ ಕೊರಳ್' ಎಂಬ ಉತ್ತಮ ರುದ್ರನಾಟಕಗಳಿಗೆ ಸ್ಫೂರ್ತಿಯನ್ನಿತ್ತಿವೆ. ಇಲ್ಲಿ ಕೆ. ವಿ. ರಾಘವಾಚಾರ್ಯರ 'ಅಂತಿಗೊನೆ'ಯನ್ನು (ಅನುವಾದ) ನೆನೆಯಬೇಕು. ಇತ್ತೀಚೆಗೆ ಎಷ್ಟೋ ನಾಟಕಗಳು ತಲೆದೋರಿರುತ್ತವೆ. ಹಾಸ್ಯದ ಹೊನಲಿನ ಪ್ರಹಸನಗಳೂ ರಚಿತ ವಾಗಿವೆ. ಆದರ್ಶವಾದ. ಸಮಾಜದ ಕುಂದುಕೊರತೆಗಳ ಟೀಕೆ, ಕಲ್ಪಕತೆ, ಪಾತ್ರಸೃಷ್ಟಿ, ಇತ್ಯಾದಿ ವಿಶಿಷ್ಟತೆಗಳನ್ನು ಇವುಗಳಲ್ಲಿ ನಿರೀಕ್ಷಿಸಬಹುದು ; ಇವು ಗಳಲ್ಲಿ ಕೆಲವು ಬಹಳ ರಸವತ್ತಾಗಿಯೂ ಅಭಿನಯ ಯೋಗ್ಯತೆಯುಳ್ಳು ವಾಗಿಯೂ ಇರುತ್ತವೆ. ರಂಗಭೂಮಿಯಲ್ಲಿ ಈ ಶತಮಾನದ ಎರಡನೆಯ ಮೂರನೆಯ ದಶಕಗಳಲ್ಲಿ ಕನ್ನಡಿಗರ ಹೃದಯವನ್ನೇ ಸೂರೆಗೊಂಡ ವರದಾ ಚಾರ್ಯರ 'ಕಂಸವಧೆ', 'ಪ್ರಹ್ಲಾದಚರಿತೆ'. 'ಧ್ರುವಚರಿತೆ', ಗರುಡ ಸದಾ ಶಿವರಾಯರ 'ಪಾದುಕಾಪಟ್ಟಾಭಿಷೇಕ', 'ವಿಷಮ ವಿವಾಹ', 'ಕಬೀರದಾಸ'

ಮತ್ತು ವಿವಿಧ ಲೇಖಕರ ಐತಿಹಾಸಿಕ ಹಿನ್ನೆಲೆಯ ನಾಟಕಗಳು (ಸ್ವಾಮಿ ನಿಷ್ಠೆ, ವಿಜಯನಗರ ಸಾಮ್ರಾಜ್ಯ, ಎಚ್ಚಮನಾಯಕ) ಚಿರಸ್ಮರಣೀಯವಾಗಿವೆ. ಕೊನೆಯವು ಹೆಚ್ಚಾಗಿ ಸಂಗೀತನಾಟಕಗಳು.

ಇವಲ್ಲದೆ ಕಾಳಿದಾಸ, ಭಾಸ, ಶೂದ್ರಕ, ಶಕ್ತಿಭದ್ರ ಮೊದಲಾದ ಮಹಾ ಕವಿಗಳ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕಿಳಿಸಿದ್ದಾರೆ. ಈ ಅನುವಾದಗಳಲ್ಲಿ ಆಳಸಿಂಗರಾಚಾರ್ಯರ 'ಸ್ವಪ್ನವಾಸವದತ್ತ' ಮತ್ತು 'ಪಂಚರಾತ್ರ' ಅತ್ಯುತ್ತಮವಾಗಿವೆ. ಬಸವಪ್ಪಶಾಸ್ತ್ರಿಗಳು ಕಾಳಿದಾಸನ ಸಾರಸರ್ವಸ್ವವನ್ನು ಕನ್ನಡಕ್ಕೆ ಕಾಣಿಕೆಕೊಟ್ಟು 'ಅಭಿನವಕಾಳಿದಾಸ'ರಾದರೆ ಭಾಸನ ಸಾರಸರ್ವಸ್ವ ವನ್ನು ಕನ್ನಡಕ್ಕೆ ಕಾಣಿಕೆಕೊಟ್ಟ ಆಳಸಿಂಗರಾಚಾರ್ಯರನ್ನು 'ಅಭಿನವಭಾಸ' ನೆಂದರೆ ಒಪ್ಪುವುದು.

## ೪. ಪ್ರಬಂಧಗಳು

ಹೊಸಗನ್ನಡ ಗದ್ಯ ಸಾಹಿತ್ಯದ ಬೆನ್ನೆಲುಬು ಇವು. ನೇರವಾಗಿ, ಸುಸ್ಪಷ್ಟ ವಾಗಿ ಹಿತಮಿತವಾಗಿ ಹೇಳುವುದಕ್ಕೆ ಈ ಪ್ರಕಾರ ಚೆನ್ನು. ಪ್ರಬಂಧದ ಕ್ಷೇತ್ರ ವಿಶಾಲವಾಗಿದೆ. ಆಂಗ್ಲಲೇಖಕರಲ್ಲಿ ಪ್ರಸಿದ್ಧರಾದ ಗೋಲ್ಡ್‌ಸ್ಮಿತ್, ಹೆಸಲಿಟ್, ಲೈಹಂಟ್ ಮೊದಲಾದವರು ಈ ದಿಸೆಯಲ್ಲಿ ಮಾರ್ಗದರ್ಶಕರೆನ್ನಬಹುದು.

ಪ್ರಬಂಧ ಪ್ರಕಾರವನ್ನು ಇತಿಹಾಸ ಸಂಸ್ಕೃತಿಗಳ ವಿಭವದ ಪ್ರಶಂಸೆಗೆ ಪರಿಣಾಮಪೂರ್ವಕವಾಗಿ ಪ್ರಯೋಗಿಸಿದ ಯಶಸ್ಸು ಆಲೂರ ವೆಂಕಟರಾಯರಿಗೆ ಸಲ್ಲುವುದು. 'ಕರ್ನಾಟಕ ಗತವೈಭವ' ಎಂಬ ಅವರ ಪ್ರಬಂಧಗಳ ಸಂಗ್ರಹ ವೀರವತ್ತಾದ ಗಂಭೀರ ಗದ್ಯಶೈಲಿಗೆ ಉತ್ತಮ ನಿದರ್ಶನ. ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡುವುದರಲ್ಲಿ ಅವರ ಸ್ಥಾನವು ಅದ್ವಿತೀಯವೆನ್ನಬೇಕು. ಪಂಡಿತ ತಾರಾನಾಥರ 'ಧರ್ಮಸಂಭವ' ವಿಚಾರಾತ್ಮಕ ಪ್ರಬಂಧ ರಚನೆಗೆ ನಾಂದಿಯಂತಿದೆ. ಗದ್ಯದ ಹರಿತವನ್ನು ಇಲ್ಲಿ ಕಾಣಬಹುದು; ಕ್ರಾಂತಿಯ ಕರೆಯನ್ನು ಕೇಳಬಹುದು.

ಡಿ. ವಿ. ಜಿ. ಯವರ 'ಸಾಹಿತ್ಯಶಕ್ತಿ', ಸ. ಸ. ಮಾಳವಾಡರ 'ಕರ್ನಾಟಕ

ಸಂಸ್ಕೃತಿದರ್ಶನ', ಸಿದ್ಧವನಹಳ್ಳಿ ಕೃಷ್ಣಶರ್ಮರ 'ಗಾಂಧಿ ಸಾಹಿತ್ಯ' ಇತ್ಯಾದಿ ಇಂಥ ವಿಚಾರಪೂರ್ವಕ ಉಪನ್ಯಾಸಗಳು. ಪ್ರಬಂಧರೂಪವಾಗಿ ವಿಡಂಬನ ರೀತಿಯಿಂದ ರಾಜರತ್ನಂ, ನಾ. ಕಸ್ತೂರಿ, ಕಾರಂತ, ಬಳ್ಳಾರಿ ಬೀಚಿ ಮೊದಲಾದ ವರು ಗದ್ಯದ ಸೌಂದರ್ಯವನ್ನು ಹೆಚ್ಚಿಸಿರುವರು ಪು. ತಿ. ನರಸಿಂಹಾಚಾರ್ಯರ 'ಭಾವನಾ ಚಿತ್ರಗಳು', ಎ. ಎನ್. ಮೂರ್ತಿರಾಯರ 'ಹಗಲುಗನಸುಗಳು', ವಾಮನಭಟ್ಟರ 'ಕೋದಂಡನ ಉಪನ್ಯಾಸಗಳು' ಹರಟೆಯ ವರ್ಗದ ಹೊಸ ಗೈಮೆಗಳು. ಉತ್ತರ ಕರ್ಣಾಟಕದಲ್ಲಿ ಪ್ರಕಟವಾದ 'ತೋರಣ', ಸ. ಸ. ಮಾಳ ವಾಡರು ಸಂಗ್ರಹ ಮಾಡಿದ 'ಗದ್ಯಮಾಲೆ', ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿದ ಗದ್ಯಸಂಗ್ರಹಗಳು, ಪ್ರಬುದ್ಧ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಗಳಲ್ಲಿ ಬಂದಿರುವ ಅನೇಕ ಲೇಖನಗಳು, ಮೈಸೂರು ವಿಶ್ವವಿದ್ಯಾಲಯದವರು ಏರ್ಪಡಿಸಿದ ಪ್ರಚಾರೋಪನ್ಯಾಸಮಾಲೆಯ ಪುಷ್ಪಗಳು, ಇನ್ನೂ ಅನೇಕ ಕಾಲಿಕ ಪ್ರಕಟಣೆಗಳು ಕನ್ನಡ ಪ್ರಬಂಧದ ವೈವಿಧ್ಯವನ್ನು ಸಾರುವುವು.

## ೫. ವಿಮರ್ಶನ ಲೇಖನಗಳು

ಈ ಶತಮಾನದ ಪೂರ್ವಾರ್ಧದಿಂದ ಬೆಳೆದುಬಂದ ಇನ್ನೊಂದು ಉಪ ಯುಕ್ತ ಗದ್ಯಪ್ರಕಾರವೆಂದರೆ ವಿಮರ್ಶನ ಲೇಖನಗಳು. ರಾ. ನರಸಿಂಹಾಚಾರ್ಯ, ರಾಮಾನುಜಯ್ಯಂಗಾರ್, ಬಿ. ಎಂ. ಶ್ರೀಕಂಠಯ್ಯ, ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಮಾಸ್ತಿ, ಕುವೆಂಪು, ಬೇಂದ್ರೆ, ಬಸವನಾಳ, ತಿಮ್ಮಪ್ಪಯ್ಯ, ಆರ್. ಆರ್. ದಿವಾಕರ, ಗೋವಿಂದ ಪೈ, ತೀ. ನಂ. ಶ್ರೀಕಂಠಯ್ಯ, ಗೋಕಾಕ, ಮಾಳವಾಡ, ಡಾ|| ನಂದಿಮಠ, ಡಿ. ವಿ. ಜಿ., ಡಿ. ಎಲ್. ನರಸಿಂಹಾಚಾರ್ಯ, ಬೆಟಗೇರಿ ಕೃಷ್ಣಶರ್ಮ, ಶಿವಮೂರ್ತಿಶಾಸ್ತ್ರಿ, ಆರ್. ಎಸ್. ಪಂಚಮುಖಿ, ಸೇಡಿಯಾಪು ಕೃಷ್ಣಭಟ್ಟ, ಶಂ. ಬಾ. ಜೋಶಿ, ಸಿ. ಕೆ. ವೆಂಕಟರಾಮಯ್ಯ ಮುಂತಾದವರು ಸಾಹಿತ್ಯ ಸಂಶೋಧನೆ ವಿಮರ್ಶೆಗಳನ್ನು ಉತ್ತಮ ರೀತಿಯಲ್ಲಿ ನಡೆಸಿದ್ದಾರೆ. ಇವರಲ್ಲಿ ಅನೇಕರು ಮಹತ್ವದ ಸಂಶೋಧನೆಗಳನ್ನು ಸಾಹಿತ್ಯ ಕ್ಷೇತ್ರ ಭಾಷಾಕ್ಷೇತ್ರಗಳಲ್ಲಿ ನಿರ್ವಹಿಸಿದ್ದಾರೆ ಇಲ್ಲಿ ಮೊದಲು ಸ್ಮರಿಸಬೇಕಾ ದುದು ಪ್ರಾಕ್ತನವಿಮರ್ಶವಿಚಕ್ಷಣ ರಾ. ನರಸಿಂಹಾಚಾರ್ಯರನ್ನು. ಅವರ ಕರ್ಣಾಟಕ ಕವಿಚರಿತೆಯ (೯೬೮) ಮೂರು ಸಂಪುಟಗಳು ಕನ್ನಡ ಸಾಹಿತ್ಯ

ಸಂಶೋಧನೆಗೆ ಅಸ್ತಿವಾರವನ್ನು ಹಾಕಿಕೊಟ್ಟವು. ಕನ್ನಡ ವಾಙ್ಮಯದ ಯಾವ ಅಭ್ಯಾಸಕ್ಕೂ ಅವು ಕೈಪಿಡಿಯಂತಿವೆ. ಕವಿಗಳ ಕಾಲವನ್ನು ನಿರ್ಣಯಿಸುವುದರಲ್ಲಿ ಆವಶ್ಯಕವಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಅವನ್ನು ಅಳವಡಿಸಿಕೊಂಡು ನಿರ್ಧಾರಕ್ಕೆ ಬರುವ ಶಾಸ್ತ್ರೀಯ ಕ್ರಮ ನವೀನವಾಗಿದೆ. ಕೃತಿಗಳ ಪರಿಚಯ ಮಾಡಿಕೊಡುತ್ತಾ ಅಂದು ಪ್ರಕಟಿತವಾಗದಿದ್ದ ಅನೇಕ ಗ್ರಂಥಗಳಿಂದ ಸ್ವಾರಸ್ಯವಾದ ಭಾಗಗಳನ್ನು ಉದ್ಧರಿಸಿರುವುದರಿಂದ ನಿಜವಾಗಿಯೂ 'ವಿಮರ್ಶವಿಚಕ್ಷಣ' ಬಿರುದು ಅವರಲ್ಲಿ ಸಾರ್ಥಕ್ಯವಾಗಿದೆ. ಡಾ|| ಕಾಲ್ಡ್‌ವೆಲ್ಲರಿಂದ ಸ್ಫೂರ್ತಿಗೊಂಡು 'ಹಿಸ್ಟರಿ ಆಫ್ ಕನ್ನಡ ಲೆಂಗ್ವೇಜ್' ಎಂಬ ಕನ್ನಡ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಸಂಶೋಧನ ಗ್ರಂಥವೊಂದನ್ನು ಆಂಗ್ಲ ಭಾಷೆಯಲ್ಲಿ ಇವರು ರಚಿಸಿರುವರು. ಇವರಿಗಿಂತ ಸ್ವಲ್ಪ ಮೊದಲಾಗಿ ಆರ್. ರಘುನಾಥರಾಯರೆಂಬುವರು 'ವ್ಯಾಕರಣೋಪನ್ಯಾಸಮಂಜರಿ' ಎಂಬ ಭಾಷಾಶಾಸ್ತ್ರ ವಿಷಯಕವಾದ ಪುಟ್ಟ ಗ್ರಂಥವನ್ನು ರಚಿಸಿರುವರು. ಶ್ರೀರಂಗರ 'ಶಾರದೆಯ ಸಂಸಾರ'ವೂ ಈ ಶಾಖೆಯ ಒಂದು ಸುಂದರ ಗ್ರಂಥ. ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿದ ಕನ್ನಡ ಕೈಪಿಡಿಯ ಒಂದನೆಯ ಸಂಪುಟದಲ್ಲಿ ಆನೆಯ ಭಾಗವಾಗಿ ಕನ್ನಡಭಾಷಾಚರಿತ್ರೆಯು ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ. ಡಾ|| ಧಾರ್ವಾಡಕರರ 'ಕನ್ನಡ ಭಾಷಾಶಾಸ್ತ್ರ' ಎಂಬ ಗ್ರಂಥವನ್ನು ಇಲ್ಲಿ ಹೆಸರಿಸಬೇಕು. ಸಾಹಿತ್ಯ ಇತಿಹಾಸ ಸಂಸ್ಕೃತಿಗಳನ್ನು ಕುರಿತು ಶುದ್ಧ ಸಂಶೋಧನೆಯನ್ನು ಶಾಸ್ತ್ರೀಯ ದೃಷ್ಟಿಯಿಂದ ನಡೆಯಿಸಿದವರಲ್ಲಿ ಈಗಲೂ ಸತತವಾಗಿ ನಡೆಯಿಸುತ್ತಿರುವವರಲ್ಲಿ ಎಂ. ಗೋವಿಂದ ಪೈಗಳು ಅಗ್ರೇಸರರು. ಈಗ ಅವರಿಲ್ಲ. ಪ್ರತಿಭೆ, ಪಾಂಡಿತ್ಯ, ತರ್ಕಶುದ್ಧ ಸರಣಿ ಇತ್ಯಾದಿ ಗುಣಗಳಿಂದ ಕೂಡಿದ ಸಂಶೋಧನೆ ಅವರದು. ಇವರು ಸಂಶೋಧನತಜ್ಞಾಗ್ರಣಿಗಳು ಮಾತ್ರವಲ್ಲ, ಉತ್ತಮ ಕವಿಗಳೂ ಆಗಿದ್ದಾರೆ. ರಾ. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತೆಯ ಮೊದಲನೆಯ ಸಂಪುಟ, ತಿಮ್ಮಪ್ಪಯ್ಯನವರ 'ನಾಡೋಜ ಪಂಪ', ಡಾ|| ವೆಂಕಟಸುಬ್ಬಯ್ಯನವರ 'ಕೆಲವು ಕನ್ನಡ ಕವಿಗಳ ಕಾಲವಿಚಾರ', ಶಂ. ಬಾ. ಜೋಶಿಯವರ 'ಕಂನಾಡ ಕತೆ', ಆರ್. ಎಸ್. ಪಂಚಮುಖಿಯವರ 'ಹರಿದಾಸ ಸಾಹಿತ್ಯ' ಮುಂತಾದ ಅನೇಕ ಕೃತಿಗಳು ಕನ್ನಡದಲ್ಲಿ ನಡೆದ ಸಂಶೋಧನೆಯ ಹೆಗ್ಗುರುತುಗಳು.

ಸಾಹಿತ್ಯವಿಮರ್ಶೆಯಲ್ಲಿಯೂ ತುಂಬ ಚೆನ್ನಾದ ಕೆಲಸ ನಡೆದಿದೆ. ಹಳಗನ್ನಡ ಸಾಹಿತ್ಯ ಸಂಸ್ಕೃತ ಸಾಹಿತ್ಯಗಳ ಪುರುಳುತಿರುಳುಗಳನ್ನು ಒರೆ ಹಚ್ಚುವಂಥ ಅನೇಕ ವಿಮರ್ಶಾತ್ಮಕ ಲೇಖನಗಳು ಆಧುನಿಕ ದೃಷ್ಟಿಕೋನದಿಂದ ಬರೆಯಲ್ಪಟ್ಟಿವೆ. ಕೆಲವು ಬರೆಹಗಳು ಸಾಹಿತ್ಯಕ್ಷೇತ್ರದಲ್ಲಿ ಈಗ ನಡೆದಿರುವ ಹೊಸ ಪ್ರಯೋಗಗಳನ್ನು ಕುರಿತು ವಿಮರ್ಶೆಮಾಡಿ ಅವುಗಳ ನಿರ್ವಚನವನ್ನು ಹೇಳುವುದಕ್ಕೆ ಪ್ರಯತ್ನಮಾಡಿವೆ. ಈ ದಿಸೆಯಲ್ಲಿ ರಚಿತವಾಗಿರುವ ಎಲ್ಲ ಕೃತಿಗಳನ್ನೂ ಅವುಗಳ ಲೇಖಕರನ್ನೂ ಪರಿಚಯಮಾಡಿಕೊಡುವುದು ಕಷ್ಟ. ದಿಗ್ದರ್ಶನಕ್ಕೆ ಕೆಲವನ್ನು ಮಾತ್ರ ಗಮನಿಸೋಣ : ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿದ 'ಕನ್ನಡ ಕೈಪಿಡಿ'ಯ ೧, ೨, ೩, ೪, ೫ ಭಾಗಗಳು ಶ್ರೀಯವರು ಬರೆದ ಅನೇಕ ಮುನ್ನುಡಿಗಳು, ಇತರ ವಿದ್ಯಾಸಂಸ್ಥೆಯವರು (ಕಾವ್ಯಕಲಾನಿಧಿ, ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಕನ್ನಡ ಸಾಹಿತ್ಯ ಪರಿಷತ್ತು, ಮದ್ರಾಸು ವಿಶ್ವವಿದ್ಯಾನಿಲಯ, ಕರ್ಣಾಟಕ ವಿಶ್ವವಿದ್ಯಾನಿಲಯ,) ಡಾ|| ಹಳಕಟ್ಟಿಯವರು (ಶಿವಾನುಭವ ಮಾಲೆ ಮುಂತಾದ ಸಂಸ್ಥೆಯವರು) ಸಂಪಾದಿಸಿ ಪ್ರಕಟಿಸಿದ ಪ್ರಾಚೀನ ಗ್ರಂಥಗಳ ಮುನ್ನುಡಿಗಳು, 'ಅಭಿನವಪಂಪ' (ಕರ್ಣಾಟಕ ಕಾಲೇಜು ಕರ್ಣಾಟಕ ಸಂಘ), 'ರನ್ನಕವಿ ಪ್ರಶಸ್ತಿ' (ಮೈಸೂರು ವಿಶ್ವವಿದ್ಯಾನಿಲಯ ಸಂಘ). 'ಪಂಪ ಮಹಾಕವಿ' (ಸಂಪಾದಕ ಮುಗಳಿ), 'ಕುಮಾರವ್ಯಾಸ ಪ್ರಶಸ್ತಿ' (ಮೈಸೂರು ವಿಶ್ವವಿದ್ಯಾನಿಲಯ), 'ಮುದ್ದಣ', 'ಕವಿಲಕ್ಷ್ಮೀಶ' ಇತ್ಯಾದಿ ವಿವಿಧ ಲೇಖಕರ ವಿಮರ್ಶಾ ಸಂಕಲನಗಳು, 'ಕವಿರಾಜಮಾರ್ಗ ವಿವೇಕ', 'ಪಾರ್ತಿಸುಬ್ಬ' (ತಿಮ್ಮಪ್ಪಯ್ಯ). ಕರ್ಣನ ಮೂರು ಚಿತ್ರಗಳು (ಶಂ. ಬಾ. ಜೋಶಿ), ಕಾದಂಬರೀ ಸಂಗ್ರಹ, ಬಸವರಾಜದೇವರ ರಗಳೆಗಳ ಮುನ್ನುಡಿಗಳು (ಟಿ. ಎಸ್. ವೆಂಕಣ್ಣಯ್ಯ), ಪಂಪ ರಾಮಾಯಣ ಸಂಗ್ರಹ, ಸುಕುಮಾರಚರಿತೆ ಇತ್ಯಾದಿ ಗ್ರಂಥಗಳ ಮುನ್ನುಡಿಗಳು (ಡಿ. ಎಲ್ ನರಸಿಂಹಾಚಾರ್ಯ), 'ಭಕ್ತಿಭಂಡಾರಿ ಬಸವಣ್ಣನವರು' (ಎಂ. ಆರ್. ಶ್ರೀನಿವಾಸಮೂರ್ತಿ), ಭಕ್ತರಾಜ ಬಸವಣ್ಣ (ಸಿಂಪಿ ಲಿಂಗಣ್ಣ), ಪ್ರಭುಲಿಂಗಲೀಲೆ ಇತ್ಯಾದಿ ಕುರಿತು (ಶಿ. ಶಿ. ಬಸವನಾಳ), 'ಮಹಾದೇವಿಯಕ್ಕ', 'ಹರಿಹರದೇವ' (ಕುಂದಣಗಾರ ಕೆ. ಜಿ.), ಮಹಾಕವಿ ರಾಘವಾಂಕ (ಆರ್. ಸಿ. ಹಿರೇಮಠ), ಯಶೋಧರ ಚರಿತೆ ಮುನ್ನುಡಿ (ಕ. ವೆಂ. ರಾಘವಾಚಾರ್)

ಇತ್ಯಾದಿ ಕೃತಿಗಳು ಕನ್ನಡದ ವಿಮರ್ಶಾಕ್ಷೇತ್ರ ವೈಶಾಲ್ಯವನ್ನು ಸೂಚಿಸುವುವು. ಇಲ್ಲಿ ರಂ. ಶ್ರೀ ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ', ಎ. ಆರ್. ಕೃಷ್ಣ ಶಾಸ್ತ್ರಿಗಳ 'ಸಂಸ್ಕೃತ ನಾಟಕಗಳು', ತೀ. ನಂ. ಶ್ರೀಕಂಠಯ್ಯನವರ 'ಭಾರತೀಯ ಕಾವ್ಯ ಮೀಮಾಂಸೆ' ಮತ್ತು 'ಕಾವ್ಯಸಮೀಕ್ಷೆ', ಕುವೆಂಪುರವರ 'ಸಾಹಿತ್ಯ ವಿಹಾರ', 'ತಪೋನಂದನ', ಬೇಂದ್ರೆಯವರ 'ಸಾಹಿತ್ಯ ಸಂಶೋಧನೆ', ಡಿ.ವಿ.ಜಿ. ಯವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ', ವೆಂಕಣ್ಣಯ್ಯನವರ 'ಪ್ರಾಚೀನ ಸಾಹಿತ್ಯ', ಗೋವಿಂದ ಪೈಗಳ 'ಕನ್ನಡ ಸಾಹಿತ್ಯದ ಪ್ರಾಚೀನತೆ'. ಬೇಲೂರು ಕೇಶವದಾಸರ 'ಹರಿದಾಸ ಸಾಹಿತ್ಯ', ಎಂ. ಆರ್. ಶ್ರೀನಿವಾಸಮೂರ್ತಿಗಳ 'ವಚನ ಧರ್ಮಸಾರ', ಸ. ಸ. ಮಾಳವಾಡರ 'ಕರ್ನಾಟಕ ಸಂಸ್ಕೃತಿ ಮತ್ತು ದರ್ಶನ', ಬೆಟಗೇರಿಯವರ 'ಕರ್ನಾಟಕ ದರ್ಶನ', ಡಾ|| ಕರ್ಕಿಯವರ 'ಛಂದೋವಿಕಾಸ', ಶಿವಮೂರ್ತಿ ಶಾಸ್ತ್ರಿಗಳ 'ವೀರಶೈವ ಸಾಹಿತ್ಯ ಚರಿತ್ರೆ', ಪ್ರೊ|| ಡಿ ಕೆ. ಭೀಮಸೇನರಾಯರ 'ಶಬ್ದಮಣಿದರ್ಪಣದ ಪಾಠಾಂತರಗಳು', ಡಾ|| ಕೃಷ್ಣಮೂರ್ತಿಯವರ 'ಧ್ವನ್ಯಾಲೋಕ', 'ಕಾವ್ಯಾದರ್ಶ'ಗಳ ಕನ್ನಡ ಅನುವಾದ ಇತ್ಯಾದಿ ಉತ್ತಮ ಗ್ರಂಥಗಳು ಗಮನಾರ್ಹವಾಗಿವೆ. ಇವೆಲ್ಲವನ್ನು ಹೆಸರಿಸುವುದು ಕಷ್ಟ.

## ೬. ಸಂಕೀರ್ಣ

ಇನ್ನು ವಿವಿಧ ಪ್ರಕಾರಗಳಲ್ಲಿ ಹೊಸಗನ್ನಡ ಗದ್ಯರಚನೆಯಾಗಿರುತ್ತದೆ. ಡಿ. ವಿ. ಜಿ. ಯವರ 'ಗೋಪಾಲಕೃಷ್ಣ ಗೋಖಲೆ', ಕುವೆಂಪುರವರ 'ಸ್ವಾಮಿ ವಿವೇಕಾನಂದ' ಮುಂತಾದ ಜೀವನ ಚರಿತೆಗಳೂ ಮಿಂಚಿನ ಬಳ್ಳಿಯವರ 'ಸಾಹಿತ್ಯಜ್ಞರ ಆತ್ಮಕಥೆಗಳು', ದಿವಾಕರರ 'ಸೆರೆಮನೆ', ಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು', ಆಲೂರರವರ 'ಜೀವನ ಸ್ಮರಣೆ' ಮುಂತಾದ ಆತ್ಮಚರಿತೆಗಳೂ ಅವತರಿಸಿವೆ. ಗೋಕಾಕರ 'ಸಮುದ್ರದಾಚೆಯಿಂದ' ಎಂಬಂಥ ದಿನವಹಿ ಘಟನೆಗಳನ್ನೊಳಗೊಂಡ ಸ್ವಾರಸ್ಯವಾದ ಬರೆಹಗಳನ್ನೂ, ವಿ. ಸೀತಾ ರಾಮಯ್ಯನವರ 'ಪಂಪಾಯಾತ್ರೆ', ಕಾರಂತರ 'ಅಬೂವಿಂದ ಬರಾಮಕ್ಕೆ' ಮುಂತಾದ ಪ್ರವಾಸದ ಸುಂದರ ವರ್ಣನೆಗಳನ್ನೂ ಕಾಣಬಹುದು.

'ಭಾಗವತ, ಭಾರತ, ರಾಮಾಯಣಗಳನ್ನು ದೇವಶಿಖಾಮಣಿ ಅಳಸಿಂಗರಾಚಾರ್ಯರು ಕನ್ನಡಗದ್ಯಕ್ಕಿಳಿಸಿದ್ದಾರೆ. ಆದ್ಯ ಅನಂತಾಚಾರ್ಯ, ಪಣಂಬೂರು ರಾಮಕೃಷ್ಣಯ್ಯ ಮೊದಲಾದವರು ಆಯುರ್ವೇದ ವೈದ್ಯಗ್ರಂಥಗಳನ್ನು ಕನ್ನಡಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಅನೇಕ ವಿಜ್ಞಾನ ಗ್ರಂಥಗಳು ಕನ್ನಡದಲ್ಲಿ ಬರೆಯಲ್ಪಟ್ಟಿವೆ. ಕನ್ನಡ ಮಾಧ್ಯಮದಲ್ಲಿ ಉಚ್ಚ ಶಿಕ್ಷಣವನ್ನು ಕೊಡುವುದಕ್ಕೆ ಸಾಧ್ಯವಾಗಬೇಕೆಂಬುದಾಗಿ ಈ ಕಾರ್ಯವು ಬಹಳ ಶ್ರದ್ಧೆಯಿಂದ ಸಾಗುತ್ತಿದೆ. ಜಿ. ಪಿ. ರಾಜರತ್ನಂರು ಬೌದ್ಧಸಾಹಿತ್ಯವನ್ನು ಪಾಲಿಯಿಂದ ಕನ್ನಡಕ್ಕೆ ತಂದು ಕೃತಕೃತ್ಯರಾಗಿದ್ದಾರೆ. ಮೌಲ್ವಿ ಸೈಯ್ಯದ್ ಕಾಸಿಮರು 'ಕುರಾನಿನ–ದರ್ಪಣ' ಮುಂತಾದ ಗ್ರಂಥಗಳ ಮೂಲಕ ಇಸ್ಲಾಂ ಧರ್ಮಗ್ರಂಥಗಳನ್ನು ಕನ್ನಡಕ್ಕೆ ಇಳಿಸಿದ್ದಾರೆ. ಬಾಲಸಾಹಿತ್ಯಕ್ಕೆ ದುಡಿದವರಲ್ಲಿ ಪಂಜೆ ಮಂಗೇಶರಾಯರೇ ಮೊದಲಿಗರೆನ್ನಬೇಕು. ಕವಿಶಿಷ್ಯರೆಂಬ ಹೆಸರಿನಲ್ಲಿ ಪುಟ್ಟ ಮಕ್ಕಳ ಪದಗಳನ್ನೂ ಕತೆಗಳನ್ನೂ ಕಟ್ಟಿದರು. ಅನೇಕ ಉಪಾಧ್ಯಾಯರು ಪಠ್ಯ ಪುಸ್ತಕಗಳನ್ನು ರಚಿಸಿದ್ದಾರೆ. ಮಕ್ಕಳಿಗೆ ಬೇಕಾದ ವಿಶ್ವಕೋಶವೊಂದನ್ನು ದೇಶಭಾಷೆಯಲ್ಲಿ (ಪ್ರಾಯಶಃ ಭಾರತದಲ್ಲಿ) ಸುಂದರವಾಗಿ ಮೊದಲು ರಚಿಸಿದ ಕೀರ್ತಿ ಶಿವರಾಮ ಕಾರಂತರಿಗೆ ಸಲ್ಲಬೇಕು ; ಅವರ 'ಬಾಲ ಪ್ರಪಂಚ'ವು ಅಂಥ ಮಹತ್ವದ ಕೃತಿ. ಇದೀಗ ಅವರು 'ಈ ಜಗತ್ತು' ಎಂಬ ಶಿರೋನಾಮೆಯಲ್ಲಿ ವಿಶ್ವಕೋಶದ ಮೊದಲನೆಯ ಭಾಗವನ್ನು ಪ್ರಕಟಿಸಿರುತ್ತಾರೆ.

ಫ. ಗು. ಹಳಕಟ್ಟಿಯವರು, ಶಿ. ಶಿ. ಬಸವನಾಳರು, ಮಂ. ಅ. ರಾಮಾನುಜ ಅಯ್ಯಂಗಾರ್ಯರು, ಎಸ್. ಜಿ. ನರಸಿಂಹಾಚಾರ್ಯರು ಪಂಡಿತ ಎಚ್. ಶೇಷ ಅಯ್ಯಂಗಾರ್ಯರು ಮುಂತಾದ ಅನೇಕ ವಿದ್ವಾಂಸರು ಹಳಗನ್ನಡ ನಡುಗನ್ನಡ ಕೃತಿಗಳನ್ನು ಪರಿಷ್ಕರಿಸಿ ಸಂಪಾದಿಸಿ ಅಮೂಲ್ಯ ಸೇವೆಗೈದಿರುವರು.

## ೭. ಪತ್ರಿಕಾ ಪ್ರಪಂಚ

ಪತ್ರಿಕಾ ಪ್ರಪಂಚದಲ್ಲಿಯೂ ತಕ್ಕಮಟ್ಟಿಗೆ ಕಾರ್ಯ ನಡೆದಿದೆ ಎನ್ನಬಹುದು. ಈ ಶತಮಾನದ ಮೊದಲನೆಯ ಮೂರು ದಶಕಗಳಲ್ಲಿ ಮಾಸಪತ್ರಿಕೆ

ಗಳು ಕೆಲವು ಉತ್ತಮ ಕನ್ನಡ ಲೇಖನಗಳನ್ನು ಪ್ರಕಟಿಸಿವೆ. ಮಂಗಳೂರಿನ 'ಸುವಾಸಿನಿ', ಉಡುಪಿಯ 'ಕೃಷ್ಣಸೂಕ್ತಿ', ಧಾರವಾಡದ 'ವಾಗ್ಭೂಷಣ', ಸಾಹಿತ್ಯ ಪರಿಷತ್ತಿನವರ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', ಬಿಜಾಪುರದ 'ಶಿವಾನುಭವ', ಮೈಸೂರು ವಿಶ್ವವಿದ್ಯಾನಿಲಯದ 'ಪ್ರಬುದ್ಧ ಕರ್ಣಾಟಕ', ಧಾರವಾಡದ 'ಜಯಕರ್ನಾಟಕ', 'ಕಸ್ತೂರಿ', 'ಜಯಂತಿ', 'ಜೀವನ' (ಈಗ ಬೆಂಗಳೂರಿನ), 'ಶರಣಸಾಹಿತ್ಯ', ಅರವಿಂದಾಶ್ರಮದವರ 'ದೀಪ್ತಿ' ಮುಂತಾದವು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿ ಬಹಳ ದುಡಿದಿರುತ್ತವೆ. ಇಲ್ಲಿ ಹೇಳಿರುವವುಗಳಲ್ಲಿ ಮೊದಲನೆಯ ಮೂರು ಈಗ ನಿಂತುಹೋಗಿವೆ, ಮಿಕ್ಕನಾದುವು ಈಗಲೂ ಅವುಗಳ ಅಮೂಲ್ಯ ಸಾಹಿತ್ಯ ಸಂಸ್ಕೃತಿ ಸೇವೆಗಳನ್ನು ವಿಚಾರಪೂರ್ವಕವಾದ ಬರೆಹಗಳ ಮೂಲಕ ಸಲ್ಲಿಸಿಕೊಂಡು ಬರುತ್ತಿವೆ. 'ಚಂದಮಾಮ' ಎಂಬೊಂದು ಮಕ್ಕಳ ಮಾಸಪತ್ರಿಕೆ ಬಹಳ ಜನಪ್ರಿಯವಾಗಿದೆ. 'ಕತೆಗಾರ', 'ನಗುವ ನಂದ' ಮುಂತಾದ ಮಾಸಿಕ ಪತ್ರಿಕೆಗಳು ವಿಶಿಷ್ಟವಾದ 'ಲಘು ಸಾಹಿತ್ಯ'ಕ್ಕೆ ಮೀಸಲಾಗಿರುತ್ತವೆ. 'ಕರ್ಮವೀರ', 'ಪ್ರಜಾಮತ', 'ರಾಷ್ಟ್ರಮತ', 'ರಾಷ್ಟ್ರಬಂಧು', 'ಕಂಠೀರವ', 'ಸ್ವದೇಶಾಭಿಮಾನಿ', 'ನವಯುಗ', ಮುಂತಾದ ವಾರಪತ್ರಿಕೆಗಳೂ, 'ಸಂಯುಕ್ತ ಕರ್ನಾಟಕ', 'ಪ್ರಜಾವಾಣಿ', 'ತಾಯಿನಾಡು', 'ನವಭಾರತ' ಮುಂತಾದ ದೈನಿಕಗಳೂ ಕನ್ನಡನಾಡಿನ ಪತ್ರಿಕಾ ವ್ಯವಸಾಯ ಪ್ರಕಾರಗಳನ್ನು ತಿಳಿಸುವುವು.

## ೮. ಹೊಸ ಕವಿತೆ

ಕನ್ನಡ ಸಾಹಿತ್ಯ ಸೌಂದರ್ಯಕ್ಕೆ ಹೊಸಗನ್ನಡ ಕವಿತೆಯು ವಿಶೇಷವಾದ ಬಣ್ಣ ಕಟ್ಟಿದೆ. ಈ ಶತಮಾನದ ಆದಿಯಲ್ಲಿ ಕವಿಗಳಾದ ಎಸ್. ಜಿ. ನರಸಿಂಹಾಚಾರ್ಯರು, ಪಂಜೆಯವರು, ಹ. ನಾರಾಯಣರಾಯರು, ಗೋವಿಂದ ಪೈಗಳು, ಬಿ. ಎಂ. ಶ್ರೀಕಂಠಯ್ಯನವರು ಆಂಗ್ಲ ಕವಿತೆಯ ಚಂದಕ್ಕೆ ಮನಸೋತು ಅದರ ಚಂದವನ್ನು ಕನ್ನಡಕ್ಕೆ ತುಂಬಲು ಹವಣಿಸಿದರು. ಮೈಸೂರು ದೇಶದಲ್ಲಿ ೨೦ ನೆಯ ಶತಮಾನದ ಮೊದಲ ದಶಕಗಳಲ್ಲಿ ಪ್ರಚುರವಾಗಿದ್ದ ಕನ್ನಡ ಪಠ್ಯಪುಸ್ತಕಗಳಲ್ಲಿ ಸೇರಿದ್ದ ಇಂಗ್ಲಿಷ್ ಪದ್ಯಾನುವಾದಗಳೆಲ್ಲವೂ, ನಮಗೆ ತಿಳಿಯಬಂದ

ಮಟ್ಟಿಗೆ, ಎಸ್. ಜಿ. ನರಸಿಂಹಾಚಾರ್ಯರದೇ ಎಂದು ತೋರುತ್ತದೆ" ಎಂಬುದಾಗಿ ತೀ. ನಂ. ಶ್ರೀಕಂಠಯ್ಯನವರು ಹೇಳುತ್ತಾರೆ.[1] ಆದರೆ ಮಂಗಳೂರು ಪ್ರಾಂತ ದಲ್ಲಿ ಅದೇ ಸಮಯದಲ್ಲಿ ಪಂಜೆಯವರೂ ಸ್ವತಂತ್ರವಾಗಿ ಅಂಥ ಕಾರ್ಯವನ್ನೆಸ ಗಿರುವರು. ಅನೇಕ ಇಂಗ್ಲಿಷ್ ಗೀತೆಗಳನ್ನು ಕನ್ನಡಕ್ಕೆ ಅಂದವಾಗಿ ಅನುವಾದ ಮಾಡಿರುವರು. ಹ. ನಾರಾಯಣರಾಯರೂ ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ ಮೊದಲಾದವರ ಕವಿತಾಭಾಗಗಳನ್ನು ಅನುವಾದ ಮಾಡಿರುವರು. ಅವುಗಳಿಂದ ಉದಾಹರಣೆಗಳು.

'To The Cuckoo'—ಎಂಬ ವರ್ಡ್ಸ್‌ವರ್ತ್ ಕವಿಯ ಈ ಕೃತಿಯ ಅನುವಾದದಿಂದ ಒಂದು ಪದ್ಯ :[2]

ಬಾರೊ ಬಸಂತದ ಕಂದ ಬಾ ಬಾ ಬಾರೊ
ಹಾರುವ ಹಕ್ಕಿ ನೀನಲ್ಲ
ಸಾರುವ ದನಿ ಮಾಯದ ಗಂಟು ಕಣ್ಣಿಗೆ
ತೋರದ ಹುರುಳಾಗಿ ಸುಳಿವೆ. (ಎಸ್. ಜಿ. ಅವರ ಅನುವಾದ)

(Thrice welcome, darling of the spring !
Even yet thou are to me
No Bird, but an invisible thing,
A voice, a mystery).

ಈ ನಿದರ್ಶನವು ಮೂಲದ ಚಂದವನ್ನು ಕನ್ನಡಕ್ಕೆ ತುಂಬುವಲ್ಲಿ ಅನುವಾದಕರು ಕೃತಕೃತ್ಯರಾಗಿರುವರೆಂಬುದನ್ನು ಸಾರುತ್ತದೆ. ಆದರೂ ಇಲ್ಲಿ ಛಂದಸ್ಸು, ಸಾಂಗತ್ಯ, ಪ್ರಾಸವುಂಟು ; ರತ್ನಾಕರವರ್ಣಿಯ ನೆನಪಾಗುತ್ತದೆ.

---

[1] ಶ್ರೀ, ಇಂಗ್ಲಿಷ್ ಗೀತಗಳು, ೧೯೩೩, ಪು. ೨೩., (ತೀ. ನಂ. ಶ್ರೀ. ಯವರ ಪ್ರಸ್ತಾವನೆ.)

[2] ಅದೇ ಪು. ೨೪.

ಪಂಜೆಯವರು "Twinkle, Twinkle, Little Star" ಎಂಬುದನ್ನು ಅನುವಾದ ಮಾಡಿದ್ದರು :

ಮಿನುಗೆಲೆ ಮಿನುಗಲೆ ನಕ್ಷತ್ರ
ನನಗಿದು ಚೋದ್ಯವು ಬಲುಚಿತ್ರ
ಘನ ಗಗನದಿ ಬಲು ದೂರದಲಿ
ಮಿನುಗುವೆ ವಜ್ರಾಕಾರದಲಿ (೧)

ತೊಳಗುವ ಸೂರ್ಯನು ಮುಳುಗುತಲಿ
ಬೆಳಕನು ಕಾಣದೆ ಕಳೆಯುತಲಿ
ಹೊಳಪನು ಕೊಡುತಿಹೆ ನನಗಂದು
ಥಳಥಳಿಸುವೆ ಇರುಳಲಿ ನಿಂದು (೨)

ಅಂದಾ ದಾರಿಗ ಕಂಗೆಡಲು
ವಂದಿಸಿ ನಡೆವನು ಅಡಿಗಡಿಗೆ
ಕುಂದಲು ನಿನ್ನಯ ಮಿಣುಕುಲವಂ
ಮುಂದಿನ ದಾರಿಯು ಕಾಣನವಂ (೩)

ಇದೊಂದು ಸ್ವತಂತ್ರ ಗೀತೆಯಂತಿದೆ. ಪಾಶ್ಚಾತ್ಯ ಕೃತಿಗಳ ಸಾರವನ್ನು ಇಲ್ಲಿ ತುಂಬಲು ಹವಣಿಸಿದ್ದಾರೆ. ಪ್ರಾಸವನ್ನು ಬಿಡದೆ ಚೌಪದಿಯ ಮಟ್ಟಿನಲ್ಲಿ ನಡೆದಿರುವರು.

ಹ. ನಾರಾಯಣರಾಯರ ಅನುವಾದಗಳು ('ಆಂಗ್ಲಕವಿತಾಸಾರ' ಎಂಬ ಸಂಕಲನದಿಂದ) :

ನರಲೋಕವೆಲ್ಲ ನಾಟಕಶಾಲೆಯಂತಿರುತ
ಪುರುಷ ವನಿತೆಯರು ಬರಿಯಾಟದವರು ।
ಮೆರದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ
ಪರಿಪರಿಯ ವೇಷಗಳ ನಟಿಸುತಿಹರು ॥

ವಾರಧಿನದಿಗಳಲೆದ್ದು ಕುಸುಮಗಳ
ಆರಿದ ಬಾಯಿಗೆ ಹೊಸ ಮಳೆಗರೆಯುವೆ ।
ನಡುಹಗಲಲಿ ತೂಕಡಿಸುವ ಕುಡಿಗಳ
ಒಡಲಿನ ಹೊದಕೆಗೆ ನೆಳಲನು ಕವಿಸುವೆ ॥ (ಷೆಲ್ಲಿ)

ಇವರೂ ಪ್ರಾಸವನ್ನು ಬಿಡುವ ಸಾಹಸಕ್ಕೆ ಇಳಿಯಲಿಲ್ಲ. ಸ್ವಲ್ಪ ಕಷ್ಟಪಟ್ಟು ಚೌಪದಿಯನ್ನು ಅಳವಡಿಸಿಕೊಂಡಿರುವರು. ನಾಲ್ಕು ಮಾತ್ರೆಗಳ ಗಣಗಳನ್ನು ರಚಿಸಿಕೊಂಡು ಅವರು ಹೇಳುವ 'ಶಿಥಿಲರಗಳೆ'ಯಲ್ಲಿ ಅಡಿಯಿಡುವುದಕ್ಕೆ ಯತ್ನಿಸಿರುವರು. ಅವರ ಕವಿತೆಯಲ್ಲಿ ಪಂಜೆಯವರ ಪ್ರಸಾದ ಗುಣವಿಲ್ಲ.

ಮ. ಗೋವಿಂದ ಪೈಗಳು ಹಾಡಿದ 'ಕನ್ನಡಿಗರ ತಾಯಿ'ಯಲ್ಲಿ ಒಂದು ಸುಂದರ ಭಾವಗೀತೆಯ ಲಹರಿಯನ್ನು ಕೇಳಬಹುದು.' ಮೂರು ಮಾತ್ರೆಗಳ ಗಣಗಳ ಕುಣಿತವನ್ನು ಕಾಣುತ್ತೇವೆ. ನಿಯತವಾದ ಚರಣಸಂಖ್ಯೆಯಿದ್ದರೂ ಸರಳರಗಳೆಯತ್ತ ಧಾಟಿಯು ತೊನೆಯುತ್ತಿದೆ. ಇಲ್ಲಿ ಪ್ರಾಸವನ್ನು ನೀಗಿದ್ದಾರೆ :

ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೆ
ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ

ನಮ್ಮ ತಪ್ಪನೆನಿತೊ ತಾಳ್ವೆ
ಅಕ್ಕರೆಯಿಂದೆಮ್ಮನಾಳ್ವೆ
ನೀನೇ ಕಣಾ ನಮ್ಮ ಬಾಳ್ವೆ
ನಿನ್ನ ಮರೆಯಲೆಮ್ಮವು
ತನು ಕನ್ನಡ ಮನ ಕನ್ನಡ ನುಡಿ ಕನ್ನಡವೆಮ್ಮವು ॥

ಕೊನೆಯ ಚರಣದಲ್ಲಿ ಗಣವನ್ನು ಲಯಕ್ಕನುಗುಣವಾಗಿ ಹಿಗ್ಗಿಸಬೇಕಾಗುವುದು. ಇಲ್ಲಿ ಹಾಡುಗಬ್ಬದ ಛಂದಸ್ಸಿನ ಹೊಸ ಪ್ರಯೋಗವುಂಟು. ಭಾವದ ವಿಚಾರವಾಗಿ ಹೇಳುವುದಾದರೆ ತಾಯ್ನುಡಿಯ ಮೇಲಿನ ಉತ್ಕಟಭಕ್ತಿ ಭಾವವು ಅನುಸ್ಯೂತವಾಗಿ ಹೊರಹೊಮ್ಮುತ್ತಿದೆ.

ಹ. ನಾರಾಯಣರಾಯರು ತಮ್ಮ ಕವನಗಳ ಮುಟ್ಟಿಗೆ ಹೀಗೆ ಹೇಳಿರುತ್ತಾರೆ : "ಈ ಪದ್ಯಗಳಲ್ಲಿ ಆಂಗ್ಲರ ಪ್ರಸಿದ್ಧ ಕೃತಿಗಳನ್ನು ಅನುವಾದಿಸಿ ಹಾಕಿದೆ. ಯುಕ್ತವಾಗಿ ಕಂಡಂತೆ ಅಲ್ಲಲ್ಲಿ ಕೆಲವು ಅಂಶಗಳನ್ನು ಲೋಪಿಸಿ, ಇನ್ನು ಕೆಲವನ್ನು ಬದಲಿಸಿದೆ. ಕನ್ನಡದ ಛಂದಸ್ಸಿನಲ್ಲಿ ಪೂರ್ವಿಕರು ಆಗಾಗ್ಗೆ

ನೂತನ ರೀತಿಗಳನ್ನು ಹುಟ್ಟಿಸಿದರು. ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳಕಾವ್ಯಪ್ರಿಯರು ಕೇಳುತ್ತಾರೆ. ಈ ಪದ್ಯಗಳಲ್ಲಿ ಪ್ರಾಸ ವನ್ನು ತೊರೆಯದಿದ್ದರೂ ಪೂರ್ವಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ. ಆದಕಾರಣ ವೃತ್ತಗಳಿಗೆ ಹೆಸರು ಹಾಕಿಲ್ಲ. ಬೇಕಾದರೆ ಶಿಥಿಲ ಕಂದ, ಶಿಥಿಲರಗಳೆ ಎಂಬಂತೆ ಹೆಸರುಗಳನ್ನು ನಿರ್ಮಿಸಬಹುದು."[1]

ಇಲ್ಲಿ ಹೊಸ ಮಾರ್ಗಶೋಧಕರು ಅನುಭವಿಸುವ ಕಷ್ಟವನ್ನು ತಿಳಿಯು ತ್ತೇವೆ. ಸಂಪ್ರದಾಯದ ಭಯವು ಅವರನ್ನು ಧೈರ್ಯದಿಂದ ಮುಂದಡಿಯಿಡಲು ಬಿಡುವುದಿಲ್ಲ. ಈ ಭಯವು ತೀರ ದೂರವಾಗಿ 'ಪಡುವ ಕಡಲಹೊನ್ನ ಹೆಣ್ಣಿನ' 'ತೊಡಿಗೆ'ಯನ್ನು 'ಕನ್ನಡ ನುಡಿಹೆಣ್ಣಿಗೆ' ಇಟ್ಟು 'ಹಾಡಬಯಸಿ' ಹಾಡಿದ ಧೀರ ಕವಿ ಎಂದರೆ ಬಿ. ಎಂ. ಶ್ರೀಕಂಠಯ್ಯ. ಹೊಸ ಕವಿತೆಯ ಧ್ವಜವನ್ನು ಹಾರಿಸಿದರು.

ಪಡುವ ಕಡಲ ಹೊನ್ನ ಹೆಣ್ಣು
ನನ್ನ ಜೀವದುಸಿರು ಕಣ್ಣು,
ನಲಿಸಿ ಕಲಿಸಿ ಮನವನೊಲಿಸಿ
ಕುಣಿಸುತಿರುವಳು.

ಒಮ್ಮೆ ಇವಳು, ಒಮ್ಮೆ ಅವಳು
ಕುಣಿಸುತಿರುವಳು.
ಹೀಗೆ ನನಗೆ ಹಬ್ಬವಾಗಿ
ಇನಿಯರಿಬ್ಬರನ್ನು ತೂಗಿ

ಇವಳ ಸೊಬಗನವಳು ತೊಟ್ಟು,
ನೋಡಬಯಸಿದೆ,
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ. [ಕಾಣಿಕೆ (ಶ್ರೀ)]

ಕಾಲಾನುಗುಣವಾದ ಹೊಸಗನ್ನಡದ ವೈಭವವನ್ನು ಹೆಚ್ಚಿಸುವುದೇ ಅವರ ಗುರಿ ಎಂಬುದು ಇದರಿಂದ ಸ್ಪಷ್ಟವಾಗುವುದು. ಇದನ್ನೇ ಶ್ರೀಯವರು 'ಅರಿಕೆ'

---

[1] ಇಂಗ್ಲಿಷ್ ಗೀತಗಳು, ಪು. ೨೮.

ಯಲ್ಲಿ ಮತ್ತಷ್ಟು ಸ್ಪಷ್ಟವಾಗಿ ಹೇಳಿರುವರು. ಅವರ ಮಾತನ್ನೇ ಕೇಳೋಣ :[1] "..ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು ಭಾವ, ರಸ—ಇವೆಲ್ಲವೂ ಮೂಲ ಕವಿಯ ವ್ಯಕ್ತಿತ್ವವನ್ನೇ ಅನುಸರಿಸಿದೆ. ಕನ್ನಡ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ. ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯುವರು ; ಅಚ್ಚಗನ್ನಡಿಗರು ಈ ಭಾಗದಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ....ಸಂಪ್ರದಾಯ ಮಾರ್ಗವನ್ನೇ ಛಲ ಹಿಡಿಯದೆ, ವಿಶ್ವಕವಿತಾವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶ ಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು ........ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನು ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನು ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ ಎನ್ನುವುದೇ ನಮ್ಮೆಲ್ಲರ ಹಾರೈಕೆಯಾಗಿರತಕ್ಕದ್ದಾಗಿದೆ........" ಶ್ರೀಯವರು ೧೯೨೦ರಲ್ಲಿ ಹೀಗೆಯೇ ನಡೆದು ದಾರಿ ತೋರಿಸಿ ಹೊಸಗನ್ನಡದ ಕುಲಪತಿಗಳಾಗಿ ಅವರ ಪ್ರಖ್ಯಾತ ಶಿಷ್ಯರಲ್ಲೊಬ್ಬ ತೀ. ನಂ. ಶ್ರೀಯವರು ಹೇಳುವಂತೆ "ಆಧುನಿಕ ಕರ್ನಾಟಕ ಕವಿಚೂತವನ ಚೈತ್ರ" ಎಂಬ ಬಿರುದಿಗೆ ಪಾತ್ರರಾಗಿರುತ್ತಾರೆ.

ಶ್ರೀಯವರ 'ಇಂಗ್ಲಿಷ್ ಗೀತೆಗಳು' ಹೊಸಗನ್ನಡ ಕವಿಗಳಿಗೆ ಕೈದೀವಿಗೆಯೆನ್ನಬಹುದು. ಈ ಗ್ರಂಥದಲ್ಲಿ ಪ್ರಕಟಿತವಾದ ಗೀತೆಗಳು ಕನ್ನಡಕಾವ್ಯ ಪ್ರಪಂಚದಲ್ಲಿ ವಿವಿಧ ನೂತನ ಮಾರ್ಗಗಳನ್ನು ಹಾಕಿಕೊಟ್ಟವು. ಶ್ರೀಯವರು ಹಳೆಯ ಮಾತ್ರಾಗಣ ಅಂಶಗಣಗಳ ಮೇಲೆ ಹೊಸ ಪ್ರಯೋಗಗಳನ್ನು ನಡೆಸಿದರು ; ಪ್ರಾಸಗಳ ನಿರ್ಬಂಧ, ಚರಣಗಳ ಸಂಖ್ಯಾನಿರ್ಬಂಧಗಳು ಕೃತಕ

---

1 ಇಂಗ್ಲಿಷ್ ಗೀತಗಳು, ಪು. ೯.

ವೆಂಬುದನ್ನು ಕಂಡುಕೊಂಡರು ; 'ಲಯಗಳು' ಪರಿಣಾಮಗೊಳ್ಳುವುದು ಗಣ ಚರಣಗಳ ವಿವಿಧ ಸಂಯೋಜನೆಯಿಂದೆಂಬುದನ್ನು ಇಂಗ್ಲಿಷ್ ಛಂದಸ್ಸಿನ ವೈವಿಧ್ಯಗಳಲ್ಲಿ ಕಂಡುಕೊಂಡರು. ಈ ಸಂದರ್ಭದಲ್ಲಿ ಹಳೆಯ ಮಟ್ಟನ್ನು ಬಿಡದೆ ನವಚೇತನವನ್ನು ತುಂಬಿ 'ಬೇಲೂರಿನ ಶಿಲಾಬಾಲಿಕೆಯರು,' 'ಮಂಕು ತಿಮ್ಮನ ಕಗ್ಗ' ಮೊದಲಾದ ಉತ್ತಮ ಕಾವ್ಯಗಳನ್ನು ದಯಪಾಲಿಸಿದ ಡಿ. ವಿ. ಜಿ. ಯವರನ್ನು ಸ್ಮರಿಸತಕ್ಕದ್ದು.

'ಗೋಲ್ಡನ್ ಟ್ರೆಜರಿ' ಎಂಬ ಆಂಗ್ಲ ಗೀತಗಳ ಸಂಕಲನದಿಂದ ಅನೇಕ ಉತ್ತಮ ರತ್ನಗಳನ್ನು ಆಯ್ದುಕೊಂಡು ಅವನ್ನು ಸುಂದರವಾಗಿಯೂ ನೂತನ ವಾಗಿಯೂ ಕನ್ನಡಕ್ಕೆ 'ಗೀತ' ರೂಪದಲ್ಲಿ ಅನುವಾದಮಾಡಿ 'ಇಂಗ್ಲಿಷ್ ಗೀತಗಳು' ಎಂಬ ಹೆಸರಿನ ಕಾಣಿಕೆಯನ್ನು ಕನ್ನಡ ತಾಯಿಗೆ ಶ್ರೀಯವರು ಅರ್ಪಿಸಿದರು. ಶ್ರೀಯವರ ಕವಿತಾಶಕ್ತಿಯಿಂದ ಅನುವಾದಗಳಲ್ಲಿ ಹೆಚ್ಚಿನವು ಅನುವಾದಗಳಂತಿಲ್ಲ; ಅವಲ್ಲಿ ಸ್ವತಂತ್ರ ರಚನೆಯ ನಾದವುಂಟು. ಕನ್ನಡ ಕಾವ್ಯ ಪ್ರಪಂಚದಲ್ಲಿ ಅವು ಕ್ರಾಂತಿಯ ಕಹಳೆಯನ್ನೂದಿದುವು. ಇಲ್ಲಿ ಒಂದು ಮುಖ್ಯವಾದ ವೈಶಿಷ್ಟ್ಯವನ್ನು ಶ್ರೀಯವರ ರೀತಿಯ ವಿಚಾರವಾಗಿ ಹೇಳ ಬೇಕು ಅವರು 'ಅರಿಕೆ'ಯಲ್ಲಿ ಹೇಳಿದಂತೆ ಎಲ್ಲೆಡೆಯೂ 'ಶಿಕ್ಷಣಬದ್ಧವಾದ ಸ್ವಾತಂತ್ರ್ಯ'ವನ್ನು ವಹಿಸಿದರು. ಆದುದರಿಂದ ಅವರು ಎಬ್ಬಿಸಿದ ಕ್ರಾಂತಿ ಶಾಂತಿಭಂಗವಿಲ್ಲದೆ ಸಾಗಿತು. ಅವರು ಪ್ರಯೋಗದಲ್ಲಿ ಕೃತಕೃತ್ಯರಾದರು. ಅವರ ಪ್ರಭಾವ ಮುಂದಿನ ಜನಾಂಗದ ಮೇಲೆ ಅತ್ಯಂತ ಸತ್ಪರಿಣಾಮನ್ನುಂಟು ಮಾಡಿತು : ಕೆಲವರು ಅವರ ನೆರಳಿನಲ್ಲಿ ಪ್ರತ್ಯಕ್ಷವಾಗಿ ಬೆಳೆದು ಪುಷ್ಟರಾದರು ; ಇನ್ನುಳಿದವರಿಗೆ ಅವರ ಕಾವ್ಯವಾಹಿನಿಯು ಆ ನರುಗಂಪನ್ನು ಪಸರಿಸಿತು.

ಶ್ರೀನಿವಾಸ, ಕುವೆಂಪು, ಬೇಂದ್ರೆ, ಗೋಕಾಕ, ವಿ. ಸೀತಾರಾಮಯ್ಯ, ಜಿ. ಪಿ. ರಾಜರತ್ನಂ, ಪು. ತಿ. ನರಸಿಂಹಾಚಾರ್ಯ, ನರಸಿಂಹಸ್ವಾಮಿ, ಕಡೆಂ ಗೋಡ್ಲು, ತೀ. ನಂ. ಶ್ರೀಕಂಠಯ್ಯ ಮೊದಲಾದವರು ಶ್ರೀಯವರು ಮೊದಲು ಮಾಡಿದ ಹೊಸ ಪರಂಪರೆಯಲ್ಲಿ ಅವರವರ ಪ್ರತಿಭಾಪಾಂಡಿತ್ಯಪೂರ್ವಕವಾದ ಉತ್ತಮ ಕಾವ್ಯರಚನೆ ಮಾಡಿರುವರು ; ಗೋಕಾಕ, ಗೋಪಾಲಕೃಷ್ಣ ಅಡಿಗರಾದಿಯಾಗಿ ನವ್ಯಕವಿತೆಯತ್ತ ಸಾಗಿದ್ದಾರೆ. ಶ್ರೀಯವರ ಇಂಗ್ಲಿಷ್ ಗೀತ ಗಳಿಂದ ಒಂದು ಗೀತವನ್ನು ಆಯ್ದುಕೊಳ್ಳೋಣ :

ಬಿಂಕದ ಸಿಂಗಾರಿ

ಚಿಪಖ್ಮಿತ ನಿರಿಯನು ಬನದಲಿ ಬಂದಳು
ಬಿಂಕದ ಸಿಂಗಾರಿ.
ಹೊಮ್ಮಿದ ಹಸುರಲಿ ಮೆರೆಯಿತು ಹಕ್ಕಿ
ಕೊರಲಿನ ದನಿದೋರಿ.

ಹೇಳಲೆ ಹಕ್ಕಿ ಚೆಲುವನು ಸಿಕ್ಕಿ
ನನಗೆ ಮದುವೆಯೆಂದು ?
ಆಳಿಬ್ಬಿಬ್ಬರು ಕೇರಿಯ ಸುತ್ತಿ
ಹೆಗಲಲಿ ಹೊತ್ತಂದು.

ಹಕ್ಕಿಯೆ ಹೇಳೈ ಒಸಗೆಯ ಮಂಚವ
ಸಿಂಗರಿಸುವರಾರು ?
ಸೊಕ್ಕಿನ ಹೆಣ್ಣೇ ಮಣ್ಣಲಿ ಕುಳಿಯನು
ಆಳದಿ ತೆಗೆಯುವರು.

ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು
ಪಂಜನು ಹಿಡಿಯುವುವು
ಗಿಡಗಳ ಹೊಳ್ಳಿನ ಗೂಬೆಗಳೆಲ್ಲಾ
ಬಾ ಹಸಗೆನ್ನುವುವು.

ಇದರ ಮೂಲ 'ವಾಲ್ಟರ್ ಸ್ಕಾಟ್' ಎಂಬ ಆಂಗ್ಲ ಕವಿಯಿಂದ ರಚಿತವಾದ 'ಪ್ರೌಡ್ ಮೇಯಿಸೀ' ('Proud Maisie') ಎಂಬ ಕವನ:

Proud Maisie

Proud Maisie is in the wood.
Walking so early;
Sweet Robin sits on the bush
singing so rarely.

"Tell me then bonny bird
  When shall I marry me?"
"When six brawn gentlemen
  Kirkwood shall carry ye."
"Who makes the bridal bed,
  Birdie say truly."
"They gray-headed saxton
  That delves the grave duly."
"The glow worm o'er the grave and stone
  Shall light thee steady;
The owl from the steeple sing
  Welcome Proud lady."

ಬೇಂದ್ರೆಯವರು ಹೊಸ ಪರಂಪರೆಯಲ್ಲಿ ಬಂದ ಕನ್ನಡ ಕವಿಶ್ರೇಷ್ಠರಲ್ಲಿ ಅಗ್ರಗಣ್ಯರು. 'ಗರಿ, 'ಸಖೀಗೀತ' 'ನಾದಲೀಲೆ'. 'ಅರುಳು ಮರುಳು' ಮುಂತಾದ ಸಂಕಲನಗಳಲ್ಲಿ ಅವರ ಗೀತಗಳು ಪ್ರಕಟಿತವಾಗಿವೆ. ನೂರಾರು ಉತ್ತಮ ಮುಕ್ತಾಫಲಗಳನು ಕೊಟ್ಟಿದ್ದಾರೆ. 'ಅಂಬಿಕಾತನಯದತ್ತ' ಎಂಬುದು ಅವರ ಕಾವ್ಯನಾಮ. 'ಮೇಘದೂತ'ದ ಅನುವಾದವನ್ನು ಬಿಟ್ಟರೆ, ಅವರ ಕೃತಿಗಳೆಲ್ಲವೂ ಪ್ರಾಯಃ ಸ್ವತಂತ್ರ ರಚನೆಗಳೆನ್ನಬಹುದು. ಅವರು ಛಂದಸ್ಸಿನಲ್ಲಿ ಹೊಸ ಪ್ರಯೋಗಗಳನ್ನು ಮಾಡುವಲ್ಲಿ ಶ್ರೀಯವರ ಪ್ರಭಾವ ಕ್ಕೊಳಗಾಗಿರಬಹುದಾದರೂ, ಅವರ ಛಂದಸ್ಸಿನ ಸಿದ್ಧಿಗೆ ಹಳ್ಳಿಯ ಹಾಡುಗಳೇ ತುಂಬ ಸ್ಫೂರ್ತಿ ಕೊಟ್ಟಂತೆ ಕಾಣುತ್ತದೆ. ಭಾವಗೀತೆಗಳನ್ನು ಕಟ್ಟಿ ಹಾಡು ವಲ್ಲಿ ಬೇಂದ್ರೆಯವರದು ಸಿದ್ಧಹಸ್ತ. ಭಾವಕ್ಕೆ ಬೇಕಾದಂತೆ ಭಾಷೆ ಅವರಲ್ಲಿ ಹೊಂದಿಕೊಳ್ಳುವುದು ರಮಣೀಯವಾಗಿದೆ. ಹೊಸಗನ್ನಡ ಕವಿಗಳಲ್ಲಿ ಅವರಂಥ ಮಿತಭಾಷಿಗಳನ್ನು ಕಾಣುವುದು ಕಷ್ಟ. ಹೇಳುವುದೂ ಹೆಚ್ಚಾಗಿ ಧ್ವನಿಯುಕ್ತವಾಗಿರುವುದರಿಂದ ಕವಿತೆಯಲ್ಲಿ ಓಜಸ್ಸು ಮುಂದಾಗಿ ಪ್ರಸಾದಗುಣ ಕೆಲವೊಮ್ಮೆ ಹಿಂದಾಗುವುದು. ನೀತಿಬೋಧೆಯನ್ನು ನೇರವಾಗಿ ಮಾಡದಿದ್ದರೂ ನಿತ್ಯಸತ್ಯವೂ ಆಧ್ಯಾತ್ಮಿಕ ವಿಚಾರವೂ ಒಳಗಿನಿಂದ ಧ್ವನಿಸುತ್ತಲೇ ಇವೆ.

ವಿಚಾರಪರಿಪ್ಲುತವಾದ ಅನೇಕ ಗದ್ಯ ಲೇಖನಗಳನ್ನೂ ಬರೆದಿರುವರು. ಅವರ ಒಂದು ಕವಿತೆ :

ಕನಸಿನೊಳಗೊಂದು ಕಣಸು

"ಯಾರು ನಿಂದವರಲ್ಲಿ ತಾಯೆ" ಎಂದೆ
"ಯಾರು ಕೇಳುವರೆನಗೆ ಯಾಕೆ ತಂದೆ."

"ಬೇಸರದ ದನಿಯೇಕೆ ಹೆಸರ ಹೇಳಲ್ಲ"
"ಹೆಸರಾಗಿಯೂ ಕೂಡ ಹೇಳ ಹೆಸರಿಲ್ಲ."

"ನೀನಾರ ಮನೆಯವಳೊ ಮುತ್ತೈದೆ ಹೇಳು"
"ನಾನಾರ ಮನೆಯವಳೊ ಬಯಲನ್ನೆ ಕೇಳು."

ಈ ಪ್ರಶ್ನೆ–ಉತ್ತರಗಳ ಕೇಳಿಕೆಯಲ್ಲಿ ಮನಸ್ಸಿನ ತೂಗುಯ್ಯಾಲೆಯ ಚಿತ್ರ ಎಷ್ಟು ಸಹಜವಾಗಿ ಬಂದಿದೆ. ದೇಶಮಾತೆಯ ಸೇವೆಗೆ ಹೇಡಿಯಾಗಿ ಹಿಂಜರಿಯುವ ವ್ಯಕ್ತಿಯನ್ನು ಜಾಗೃತವಾಗಿಸುವ ವಾಣಿ ಒಳಗಿನಿಂದ ನುಡಿಯುತ್ತಿದೆ.

'ಕುವೆಂಪು' ಎಂಬ ಸಂಕ್ಷಿಪ್ತನಾಮದಿಂದ ಕನ್ನಡಿಗರ ಹೃದಯವನ್ನೆ ಸೂರೆಗೊಂಡ ಕವಿಯ ಸಂಪೂರ್ಣ ಹೆಸರು ಕು. ವೆಂ. ಪುಟ್ಟಪ್ಪ ಎಂಬುದು ಎಲ್ಲರಿಗೂ ಗೊತ್ತೇ ಇದೆ. ಕನ್ನಡ ಸಾಹಿತ್ಯದಲ್ಲಿ ಡಾ|| ಪುಟ್ಟಪ್ಪನವರು ಅಡಿಯಿಡದ ವಿಭಾಗವಿಲ್ಲವೆಂದರೆ ತಪ್ಪಾಗದು. ಕಾದಂಬರಿ, ವಿಮರ್ಶೆ, ನಾಟಕ, ಜೀವನ ಚರಿತ್ರೆ, ವಿವಿಧ ಪ್ರಕಾರದ ಕವನಗಳು ಮೊದಲಾದುವು ಅವರು ನೀಡಿದ ಫಲಗಳು. 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಯಂಥ ಬೃಹತ್ಕಾದಂಬರಿ, ರಾಮಾಯಣ ದರ್ಶನದಂಥ ಮಹಾಛಂದಸ್ಸಿನ ಮಹಾಕಾವ್ಯ, ಸುಮಾರು ೩೦೦೦ ಪುಟಗಳನ್ನೊಳಗೊಂಡ ೨೦ ಕವನಸಂಗ್ರಹಗಳು ಯಾರನ್ನಾದರೂ ಬೆರಗುಗೊಳಿಸುವುವು.

ಕುವೆಂಪು ಅವರ ಭಾಷೆ ಲೀಲಾಜಾಲವಾಗಿ ಪ್ರವಹಿಸುವುದು. ಅವರ ಕೃತಿ ಪದ್ಯವಾಗಲೀ ಗದ್ಯವಾಗಲೀ ಭಾಷೆಯು ಒಂದೇ ತೆರನಾಗಿ ಅವರಿಗೆ ವಶವರ್ತಿಯಾಗಿ ಸುಳಿಯುವುದು.

ನವೀನ

ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ.
ಚಿರನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ.

ಅಭಿನವ ಮಧು ಕೋಕಿಲ ಕಲ ಕಂಠದಿ
ಸ್ವರ ಸುರಚಾಪಗಳುಣ್ಮುತಿವೆ.
ಶ್ಯಾಮಲ ಕಾನನ ಸುಮ ಸಮ್ಮೇಳದಿ
ಇಂಚರ ಸಾಸಿರ ಪೊಣ್ಮುತಿವೆ.

ಕಿವಿ ಕಣ್ಣಾಗುತಿದೆ
ಕಣ್ ಕಿವಿಯಾಗುತಿದೆ.
ಭೂವ್ಯೋಮದ ನೀಲಾಂಗಣದಲಿ
ಕೆಂದರೆ ಮುಗಿಲಿನ ರಂಗೋಲಿ.

ರಂಜಿಸುತಿದೆ ಹೊಳೆ ತೆರೆಯಂಚೊತ್ತಿದ
ಕೆಂಪಗೆ ನುಣ್ಮಲಳನು ಹೋಲಿ.
ಹಿಮಮಣಿ ಸಿಂಚಿತ ತೃಣ ವಿಸ್ತಾರದಿ
ನೇಸರು ಕಿಡಿಬಲೆ ನೆಯ್ಯುತಿದೆ.

ವಿಹಂಗದಂಪತಿ ತರುಶಾಖಾಗ್ರದಿ
ಪ್ರೇಮಾಲಾಪನೆ ಗೈಯುತಿದೆ.
ನವೀನ ಹೃದಯಗಳೇಳಿ
ನವೀನ ಗಾನವ ಕೇಳಿ!

ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ
ಚಿರನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ.

'ನವೀನತೆ'ಯ ನಿರ್ವಚನವು ಇಲ್ಲಿ ಎಷ್ಟು ನವೀನವಾಗಿದೆ; ಎಷ್ಟು ಸುಂದರವಾದ 'ಪ್ರತಿಮೆ'ಗಳು ಮೂಡಿವೆ.

ಇನ್ನೂ ಅನೇಕ ಉತ್ಕೃಷ್ಟ ಉದಾಹರಣೆಗಳನ್ನು ಇವರ ಕೃತಿಗಳಿಂದ ಉದ್ಧರಿಸಬಹುದು.

ಈವರೆಗೆ ಕನ್ನಡ ಸಾಹಿತ್ಯದ ವಿಪುಲತೆ ವೈವಿಧ್ಯಗಳನ್ನು, ಸೊಗಸು ಸೊಬಗುಗಳನ್ನು ಸ್ವಲ್ಪ ಪರಿಶೀಲಿಸಿದುದಾಯಿತು. ಒಟ್ಟಿನಲ್ಲಿ ಕನ್ನಡ ಲೇಖಕರು, ಪ್ರಗತಿಪರವಾಗಿ ಮುಂದಡಿಯಿಡುತ್ತಾ ಬಂದಿರುವರೆಂಬುದು ವಿಶದವಾಗುವುದು. ಪ್ರಗತಿಯಲ್ಲಿ 'ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನು' ವಹಿಸಿರುವುದು ನಮ್ಮ ಬರೆಹಗಾರರ ವೈಶಿಷ್ಟ್ಯ. ಪ್ರಸ್ತುತದಲ್ಲಿ ಸಮತಾವಾದ ಮುಂತಾದ ನವೀನ ರಾಜಕೀಯ ವಾದಗಳನೇಕ ನಮ್ಮ ಸಮಾಜದಲ್ಲಿ ತಲೆದೋರಿವೆ. ಯಾವ ವಾದ (ism) ದ ಪ್ರಭಾವಕ್ಕೊಳಗಾದ ಲೇಖಕನೇ ಆಗಲಿ, ಈತನು ತನ್ನ ನಿಲುವನ್ನು ವಿನಯಸೌಜನ್ಯ ಪೂರ್ವಕವಾಗಿ ನಿರೂಪಿಸುತ್ತಾನೆ. ಶಾಂತಿ ಭಂಗವಿಲ್ಲದ ಕ್ರಾಂತಿಯನ್ನು ಸಾಹಿತ್ಯಚರಿತ್ರೆಯ ಉದ್ದಕ್ಕೂ ಕಾಣುತ್ತೇವೆ. 'ಬಂದ ನೀರು ಇದ್ದ ನೀರನ್ನು ಕೊಂಡುಹೋಗುವುದಿಲ್ಲ'. ಉಪನದಿಗಳು ಸೇರಿ ಸಾಹಿತ್ಯವಾಹಿನಿಯು ಉಕ್ಕಿಹರಿಯುವುದು. ಇವನ್ನೆಲ್ಲಾ ಗಮನಿಸಿದರೆ ನಿಶ್ಚಯವಾಗಿಯೂ ನಮ್ಮ ಆತ್ಮವಿಶ್ವಾಸವು ಹೆಚ್ಚುವುದು. ತನ್ಮೂಲಕ ಪ್ರಸ್ತುತದಲ್ಲಿ ಸಾಹಿತ್ಯಕೃಷಿ ಸಫಲವಾಗುವುದು ; ಭವಿಷ್ಯವು ಆಶಾದಾಯಕವಾಗುವುದು.

—o—o—o—o—

## ಈ ಗ್ರಂಥದಲ್ಲಿ ಉಪಯುಕ್ತವಾದ ಚಿಹ್ನೆಗಳು

ಕ. ಕ. ಚ. ಸಂ—ಕರ್ನಾಟಕ ಕವಿಚರಿತೆ ಸಂಪುಟ. (ರಾ. ನರಸಿಂಹಾಚಾರ್ಯ, ೧೯೦೭)

ಕ. ಸಾ. ಚ.—ಕನ್ನಡ ಸಾಹಿತ್ಯ ಚರಿತ್ರೆ (ಮುಗಳಿ ರಂ, ಶ್ರೀ., ೧೯೫೩)

ಕ. ಕೈ. ಸಂ.—ಕನ್ನಡ ಕೈಪಿಡಿ ಸಂಪುಟ (ಮೈಸೂರು ವಿಶ್ವವಿದ್ಯಾನಿಲಯ, ೧೯೪೭)

